# ಪ್ರಸ್ತಾವನೆ

ಮಹರ್ಷಿ ವೇದವ್ಯಾಸ ರಚಿತವಾದ ಕೂರ್ಮ ಮಹಾ ಪುರಾಣದ ಕನ್ನಡ ಅನುವಾದ ರಚನೋದ್ಯಮವನ್ನು ಸಂತತವಾಗಿ ಮುಂದುವರಿಸಿಕೊಂಡು ಬಂದುದರ ಪರಿಣಾಮವಾಗಿ ಅದರ ದ್ವಿತೀಯ ಸಂಚಿಕೆಯನ್ನು ವಾಚಕರ ಮುಂದಿರಿಸಲು ಅತ್ಯಂತ ಕುತೂಹಲಿಯಾಗಿದ್ದೇನೆ. ಈ ಸಂಚಿಕೆಯು ಇಕ್ಷ್ವಾಕು ಮಹಾರಾಜನ ವಂಶಾವಳಿಯನ್ನು ವರ್ಣಿಸುವ ಪ್ರಸಂಗದಿಂದ ಶ್ರೀ ರಾಮನ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿಸುವ ಇಪ್ಪತ್ತೊಂದನೆಯ ಅಧ್ಯಾಯದಿಂದ ಪ್ರಾರಂಭಹೊಂದಿ ಐವತ್ತಮೂರನೆಯ ಅಧ್ಯಾಯದಿಂದ ಪೂರ್ಣವಾಗುವಂತೆ ವಿವಿಧ ಕಥಾನಕಗಳನ್ನೊಳಗೊಂಡು ಅದ್ಭುತಾರ್ಥಗಳನ್ನು ಬೋಧಿಸುವ ಅನೇಕ ಅಧ್ಯಾಯಗಳಿಂದ ಕೂಡಿದೆ. ಈ ಸಂಚಿಕೆಯಲ್ಲಿರುವ ಕಡೆಯ ಅಧ್ಯಾಯದಿಂದ ಈ ಮಹಾಪುರಾಣದ ಪೂರ್ವಾರ್ಧವು ಸಮಾಪ್ತಿಹೊಂದಿದೆ.

ಈ ಅಧ್ಯಾಯಗಳಲ್ಲಿ ಪ್ರತಿಪಾದಿಸಿರುವ ವಿಷಯಗಳಲ್ಲಿ ಧರ್ಮವ್ಯವಸ್ಥೆಯು ಒಂದು ಮುಖ್ಯ ವಿಷಯವಾಗಿದೆ. ಧರ್ಮವು ಸಮಾಜ-ದೇಶಗಳ ಹಿತವನ್ನು ರಕ್ಷಿಸುವುದರ ಮೂಲಕ ಶಾಶ್ವತವಾದ ಶ್ರೇಯಃ ಸಾಧನೆಗೆ ತಳಹದಿಯಾಗಿರುವುದು. ಇಂತಹ ಧರ್ಮವು ಅರ್ಥ-ಕಾಮ ಭೋಗಗಳನ್ನು ಪ್ರತಿಬಂಧಿಸುವುದಿಲ್ಲ. ಆದರೆ ಜಗಚ್ಚಕ್ರ ಪ್ರತಿಷ್ಠೆಗೆ ಅವಶ್ಯಕವಾಗಿರುವ ಜ್ಞಾನಾರ್ಜನೆ, ದೇಶರಕ್ಷಣೆ, ಸಂಪದಭಿವೃದ್ಧಿ ಮುಂತಾದ ವ್ಯಾಪಾರಗಳಲ್ಲಿ ಆಯಾಯ ಪ್ರಜೆಗಳನ್ನು ನಿಯಮಿಸುವಂತೆ ಧರ್ಮವು ವರ್ಣ-ಆಶ್ರಮಗಳಿಂದ ವಿಭಜನೆಯನ್ನು ಹೊಂದಿದೆ. ಸೃಷ್ಟಿ ಆದಿಯಲ್ಲಿದ್ದ ಆ ವ್ಯವಸ್ಥೆಯು ತಪ್ಪದೆ ಇಂದಿಗೂ ಅನುವೃತ್ತವಾಗಿದ್ದರೆ ಸರ್ವತೋಮುಖವಾಗಿ ಪ್ರಸರಿಸುತ್ತಿರುವ ಇಂದಿನ ಪ್ರಪಂಚ ಕೋಲಾಹಲದಲ್ಲಿ ಜನರಿಗೆ ಶಾಂತಿ, ಜಾಗೃತಿ, ಭಾಗ್ಯಗಳನ್ನು ಉಂಟುಮಾಡುತ್ತಲಿತ್ತು.

ಇಂತಹ ಧರ್ಮಕ್ಕೆ ವೇದವು ಮಾತ್ರ ಪ್ರಮಾಣವೆಂದು ಸಮ್ಮತವು. ಯಾವುದಾದರೊಂದು ವಸ್ತುವನ್ನು ಗುರ್ತಿಸಲು ತೋರಿಸುವ ಲಕ್ಷಣವು, ಶಾಶ್ವತವೂ, ಅಚಲವೂ ಆಗಿದ್ದರೆ ಆ ವಸ್ತುವಿನ ಜ್ಞಾನವು ಯಾವಾಗಲೂ ಏಕರೂಪವಾಗಿ ಹುಟ್ಟುವುದು. ಆದರಂತೆ ಧರ್ಮಮಾರ್ಗಕ್ಕೆ ಅನಾದಿಯಾದ ವೇದವೇ ಲಕ್ಷಣವಾಗಿರಲು ಅರ್ಹವೆಂದು ತಾತ್ಪರ್ಯ.

ಒಂದು ವ್ಯಾಪಾರದಲ್ಲಿ ಅಭ್ಯಾಸ-ಸಂಸ್ಕಾರ ಪರಂಪರೆಗಳನ್ನು ಹೊಂದಿರುವ ಪ್ರಾಣಿಯು ಸ್ವಾಭಾವಿಕವಾಗಿ ಅದರಲ್ಲಿ ಅಸಾಧಾರಣವಾದ ಪಾಟವ, ದಕ್ಷತೆ ಮುಂತಾದ ಗುಣಗಳನ್ನು ಹೊಂದಿರುವನು. ಹೊಸ ವಿಧಾನಗಳನ್ನು ವಹಿಸಿದ ಪ್ರಾಣಿಯು ಅದೇ ಕರ್ಮವನ್ನು ಸಾಗಿಸಲು ಅಷ್ಟು ಧೀರನಲ್ಲ. ಸಹಜ ಧೀರತೆಯನ್ನು ಒಂದೊಂದು ರಕ್ತಕಣದಲ್ಲಿ ಕೂಡ ಹೊತ್ತಿರುವ ವೀರರಾಜರ ರಣ ಚಾತುರ್ಯವನ್ನು ಹೊಸದಾಗಿ ಯತ್ನಪಟ್ಟು ಅಷ್ಟು ಪ್ರಾವೀಣ್ಯವನ್ನು ಹೊಂದದಿರುವ ಇತರನು ತೋರಿಸಲಾರನು. ಆದುದರಿಂದ ಆಯಾಯ ಸಂಸ್ಕಾರಗಳು ವ್ಯವಸ್ಥಿತರೀತಿಯಿಂದ ಇರುವುದು ಮೇಲಾದುದು. ಇದೇ ಧರ್ಮಮಾರ್ಗ ವ್ಯವಸ್ಥೆಯ ಉದ್ದೇಶವು.

ಈ ಧರ್ಮಸಾಧನೆಯಲ್ಲಿ ಅನೇಕ ತೀರ್ಥಯಾತ್ರಾದಿ ವಿಧಿಗಳು ಉಪಯುಕ್ತವಾಗಿವೆ. ಹಿಂದೆ ಅನೇಕಸಲದ ಉಪಯೋಗದಿಂದ ರೋಗಿಯನ್ನು ತಪ್ಪದೆ ಗುಣಪಡಿಸಿರುವ ವೈದ್ಯ-ಔಷಧಗಳ ಮಾಹಾತ್ಮ್ಯೆಯನ್ನು ರೋಗಿಯ ಎದುರಿಗೆ ಅವನ ನಂಬಿಕೆಗಾಗಿ ಹೇಳುವುದು ಉತ್ತಮ. ಹಾಗೆ ಪ್ರತಿಯೊಂದು ಪ್ರಖ್ಯಾತ ತೀರ್ಥ ಭೂಮಿಯು ದೇವಾಧಿದೇವನ ವಿಹಾರಭೂಮಿಯೂ ಆಪತ್ತಿಗೊಳಗಾದ ಒಂದು ಪ್ರಾಣಿಯು ಉದ್ಧಾರಹೊಂದಿರುವ ಸ್ಥಳವೂ ಆಗಿದೆ. ಅದರ ಮಹಿಮೆಯನ್ನು ಸ್ಮರಿಸುತ್ತಿದ್ದಹಾಗೆ ಮಾನವನ ಅಂತರಂಗವು ಭಕ್ತಿ-ಶ್ರದ್ಧೆಗಳಿಂದ ಪೂರ್ಣವಾಗುವುದು. ಆಗ ಅವನು ಆಚರಿಸಿದ ಕರ್ಮಜಾಲವು ಪರಮಧರ್ಮರೂಪವಾಗುವುದು. ಇಂತಹ ತೀರ್ಥಕ್ಷೇತ್ರದಲ್ಲಿ ವಿಶ್ವೇಶ್ವರಸ್ವಾಮಿಯು ವಾಸಮಾಡುವ ಕಾಶೀಕ್ಷೇತ್ರ, ಪ್ರಯಾಗ, ಪಿಶಾಚಮೋಚನಾದಿ ತೀರ್ಥಗಳು ಈ ಭಾಗದಲ್ಲಿ ವರ್ಣಿಸಲ್ಪಟ್ಟಿವೆ. ಈ ರೀತಿಯಾಗಿ ಅಮೋಘ ವಿಷಯಗಳನ್ನು ಅಲ್ಲಲ್ಲಿ ವಿಸ್ತಾರವಾಗಿ ಬೋಧಿಸುತ್ತಿದೆ.

ಆಳುವ ಮಹಾಸ್ವಾಮಿಯವರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಆಜ್ಞೆಯಂತೆ ಸಂಸ್ಕೃತದಲ್ಲಿದ್ದ ಈ ಗ್ರಂಥವನ್ನು ಕನ್ನಡಿಗರ ತಿಳಿವಳಿಕೆಗಾಗಿ ಕನ್ನಡಕ್ಕೆ ಪರಿವರ್ತನಮಾಡಿರುತ್ತೇನೆ. ಇದು ಉತ್ತಮರೀತಿಯಿಂದ ಅಂದವಾಗಿರುವಂತೆ ಮುದ್ರಿಸಲ್ಪಟ್ಟಿದೆ. ಈ ರೀತಿ ಈ ಗ್ರಂಥವು ಪ್ರಕಾಶಕ್ಕೆ ಬಂದು ಸಜ್ಜನರ ಸೇವೆ ಮಾಡಲು ಅವಕಾಶಮಾಡಿಕೊಟ್ಟ ಮಹನೀಯರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಮೈಸೂರು,
ತಾ॥ ೨೦-೧-೪೭.

ಅನುವಾದಕ,
**ಪಾಟಣಕರ ಚಂದ್ರಶೇಖರಭಟ್ಟ,**
ಆಸ್ಥಾನ ವಿದ್ವಾನ್.

# ವಿಷಯಾನುಕ್ರಮಣಿಕೆ.

---

ಶ್ರೀಃ

# ಕೂರ್ಮಪುರಾಣಂ

(ದ್ವಿತೀಯ ಸಂಪುಟ)

## ಏಕವಿಂಶೋಽಧ್ಯಾಯಃ

**ಸೂತ ಉವಾಚ :—**

ತ್ರಿಧನ್ವಾ ರಾಜಪುತ್ರಸ್ತು ಧರ್ಮೇಣಾಪಾಲಯನ್ಮಹೀಮ್ ।
ತಸ್ಯ ಪುತ್ರೋಽಭವದ್ವಿದ್ವಾಂಸ್ತ್ರಯ್ಯಾರುಣ ಇತಿ ಶ್ರುತಃ ॥ ೧ ॥

ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲಃ ।
ಭಾರ್ಯಾ ಸತ್ಯಧನಾ ನಾಮ ಹರಿಶ್ಚನ್ದ್ರಮಜೀಜನತ್ ॥ ೨ ॥

---

## ಇಪ್ಪತ್ತೊಂದನೆಯ ಅಧ್ಯಾಯವು

**ಸೂತಮುನಿಯು ಹೀಗೆಂದನು :—**

೧. ರಾಜಪುತ್ರನಾದ ತ್ರಿಧನ್ವನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದನು. ಅವನಿಗೆ ವಿದ್ವಾಂಸನೂ ತ್ರಯ್ಯಾರುಣನೆಂದು ಪ್ರಸಿದ್ಧನೂ ಆದ ಪುತ್ರನಿದ್ದನು.

೨. ಆ ತ್ರಯ್ಯಾರುಣನಿಗೆ ಮಹಾಬಲಿಷ್ಠನಾದ ಸತ್ಯವ್ರತನೆಂಬ ಕುಮಾರನಿದ್ದನು. ಅವನ ಭಾರ್ಯೆಯಾದ ಸತ್ಯಧನಾ ಎಂಬುವಳು ಹರಿಶ್ಚಂದ್ರನೆಂಬ ಪುತ್ರನನ್ನು ಪ್ರಸವಿಸಿದಳು.

ಹರಿಶ್ಚಂದ್ರಸ್ಯ ಪುತ್ರೋಽಭೂದ್ರೋಹಿತೋ ನಾಮ ವೀರ್ಯವಾನ್ ।
ರೋಹಿತಸ್ಯ ವೃಕಃ ಪುತ್ರಸ್ತಸ್ಮಾದ್ಬಾಹುರಜಾಯತ ॥ ೩ ॥

ಹರಿತೋ ರೋಹಿತಸ್ಯಾಥ ಧುಂಧುಸ್ತಸ್ಯ ಸುತೋಽಭವತ್ ।
ವಿಜಯಶ್ಚ ಸುದೇವಶ್ಚ ಧುಂಧುಪುತ್ರೌ ಬಭೂವತುಃ ॥ ೪ ॥

ವಿಜಯಸ್ಯಾಭವತ್ಪುತ್ರಃ ಕಾರುಕೋ ನಾಮ ವೀರ್ಯವಾನ್ ।
ಸಗರಸ್ತಸ್ಯ ಪುತ್ರೋಽಭೂದ್ರಾಜಾ ಪರಮಧಾರ್ಮಿಕಃ ॥ ೫ ॥

ದ್ವೇ ಭಾರ್ಯೇ ಸಗರಸ್ಯಾಪಿ ಪ್ರಭಾ ಭಾನುಮತೀ ತಥಾ ।
ತಾಭ್ಯಾಮಾರಾಧಿತೋ ವಹ್ನಿಃ ಪ್ರದದೌ ವರಮುತ್ತಮಮ್ ॥ ೬ ॥

ಏಕಂ ಭಾನುಮತೀ ಪುತ್ರಮಗ್ರಹ್ಣಾದಸಮಂಜಸಮ್ ॥ ೭ ॥

---

೩. ಹರಿಶ್ಚಂದ್ರನಿಗೆ ರೋಹಿತ ಎಂಬ ನಾಮಾಂಕಿತನೂ ವೀರ್ಯವಂತನೂ ಆದ ಪುತ್ರನಿದ್ದನು. ಆ ರೋಹಿತನಿಗೆ ವೃಕ ಎಂಬುವನೂ ವೃಕನಿಗೆ ಬಾಹು ಎಂಬುವನೂ ಪುತ್ರರಾಗಿ ಜನಿಸಿದರು.

೪. ರೋಹಿತನಿಗೆ ಹರಿತ ಎಂಬುವನೂ ಹರಿತನಿಗೆ ಧುಂಧು ಎಂಬುವನೂ ಪುತ್ರರಾಗಿದ್ದರು. ಧುಂಧುವಿಗೆ ವಿಜಯ, ಸುದೇವ ಎಂಬ ಇಬ್ಬರು ಪುತ್ರರಿದ್ದರು,

೫. ವಿಜಯನಿಗೆ ಕಾರುಕ ಎಂದು ಪ್ರಸಿದ್ಧನಾದ ವೀರ್ಯವಂತನಾದ ಪುತ್ರನಿದ್ದನು. ಪರಮಧಾರ್ಮಿಕನೂ, ಸಗರ ಎಂಬ ನಾಮಾಂಕಿತನೂ, ಆದ ರಾಜನು ಕಾರುಕನ ಪುತ್ರನಾಗಿದ್ದನು.

೬. ಆ ಸಗರರಾಜನಿಗೆ ಪ್ರಭಾ ಮತ್ತು ಭಾನುಮತೀ ಎಂಬ ಇಬ್ಬರು ಪತ್ನಿಯರಿದ್ದರು. ಆ ಪತ್ನಿಯರಿಂದ ಆರಾಧಿಸಲ್ಪಟ್ಟ ಅಗ್ನಿದೇವನು ಉತ್ತಮವಾದ ವರಗಳನ್ನು ನೀಡಿದನು.

೭. ಅವರಲ್ಲಿ ಭಾನುಮತೀ ಎಂಬುವಳು ಅಸಮಂಜಸನೆಂಬ ಒಬ್ಬ ಪುತ್ರರೂಪವಾದ ವರವನ್ನು ಪರಿಗ್ರಹಿಸಿದಳು.

ಪ್ರಭಾ ಷಷ್ಟಿಸಹಸ್ರಂ ತು ಪುತ್ರಾಣಾಂ ಜಗೃಹೇ ಶುಭಾ ।
ಅಸಮಂಜಸಪುತ್ರೋಽಭೂದಂಶುಮಾನ್ನಾಮ ಪಾರ್ಥಿವಃ ॥ ೮ ॥

ತಸ್ಯ ಪುತ್ರೋ ದಿಲೀಪಸ್ತು ದಿಲೀಪಾತ್ತು ಭಗೀರಥಃ ।
ಯೇನ ಭಾಗೀರಥೀ ಗಂಗಾ ತಪಃ ಕೃತ್ವಾವತಾರಿತಾ ॥ ೯ ॥

ಪ್ರಸಾದಾದ್ದೇವದೇವಸ್ಯ ಮಹಾದೇವಸ್ಯ ಧೀಮತಃ ।
ಭಗೀರಥಸ್ಯ ತಪಸಾ ದೇವಃ ಪ್ರೀತಮನಾ ಹರಃ ॥ ೧೦ ॥

ಬಭಾರ ಶಿರಸಾ ಗಂಗಾಂ ಸೋಮಾಂತೇ ಸೋಮಭೂಷಣಃ ।
ಭಗೀರಥಸುತಶ್ಚಾಪಿ ಶ್ರುತೋ ನಾಮ ಬಭೂವ ಹ ॥ ೧೧ ॥

---

೮. ಮಂಗಳಕರಳಾದ ಪ್ರಭಾ ಎಂಬುವಳು ಅರವತ್ತು ಸಹಸ್ರಮಂದಿ ಪುತ್ರರನ್ನು ಹೊಂದಿದಳು, ಅಸಮಂಜಸನಿಗೆ ಅಂಶುಮಾನ್ ಎಂದು ಪ್ರಸಿದ್ಧನಾದ ರಾಜನು ಪುತ್ರನಾಗಿ ಜನಿಸಿದನು.

೯. ಆ ಅಂಶುಮಂತನಿಗೆ ದಿಲೀಪನು ಪುತ್ರನಾಗಿದ್ದನು. ಆ ದಿಲೀಪನಿಗೆ ತಪಸ್ಸನ್ನಾಚರಿಸಿ ಗಂಗಾನದಿಯನ್ನು ಭೂಮಿಗೆ ತಂದು ಆ ಗಂಗೆಗೆ ಭಾಗೀರಥಿ ಎಂಬ ಪವಿತ್ರನಾಮವನ್ನು ತಂದಿರುವ ಭಗೀರಥರಾಜನು ಪುತ್ರನಾಗಿದ್ದನು.

೧೦. ಆ ಭಗೀರಥನು ಸರ್ವಜ್ಞನೂ, ದೇವೋತ್ತಮನೂ, ಆದ ಮಹಾದೇವನ ಪ್ರಸಾದಕ್ಕೆ ಪಾತ್ರನಾದನು. ಆ ಮಹಾದೇವನು ಭಗೀರಥನು ಆಚರಿಸಿದ ತಪಸ್ಸಿನಿಂದ ಸಂತುಷ್ಟಚಿತ್ತನಾದನು.

೧೧. ಮತ್ತು ಚಂದ್ರಕಲೆಯನ್ನು ಭೂಷಣವಾಗಿ ಧರಿಸಿದ ಶಿವನು ಚಂದ್ರ ಕಲೆಯ ತುದಿಯಲ್ಲಿ ಶಿರದಲ್ಲಿ ಭಾಗೀರಥಿಯನ್ನು ಧರಿಸಿದನು. ಭಗೀರಥನಿಗೆ ಶ್ರುತ ಎಂಬ ಪುತ್ರನು ಪ್ರಸಿದ್ಧನಾಗಿದ್ದನು.

ನಾಭಾಗಸ್ತಸ್ಯ ದಾಯಾದಃ ಸಿಂಧುದ್ವೀಪಸ್ತತೋಽಭವತ್ ।
ಅಯುತಾಯುಃ ಸುತಸ್ತಸ್ಯ ಋತುಪರ್ಣೋ ಮಹಾಬಲಃ ॥ ೧೨ ॥

ಋತುಪರ್ಣಸ್ಯ ಪುತ್ರೋಽಭೂತ್ಸುದಾಸೋ ನಾಮ ಧಾರ್ಮಿಕಃ ।
ಸೌದಾಸಸ್ತಸ್ಯ ತನಯಃ ಖ್ಯಾತಃ ಕಲ್ಮಾಷಪಾದಕಃ ॥ ೧೩ ॥

ವಸಿಷ್ಠಸ್ತು ಮಹಾತೇಜಾಃ ಕ್ಷೇತ್ರೇ ಕಲ್ಮಾಷಪಾದಕೇ ।
ಅಶ್ಮಕಂ ಜನಯಾಮಾಸ ತಮಿಕ್ಷ್ವಾಕುಕುಲಧ್ವಜಮ್ ॥ ೧೪ ॥

ಅಶ್ಮಕಸ್ಯೋತ್ಕಲಾಯಾಂ ತು ನಕುಲೋ ನಾಮ ಪಾರ್ಥಿವಃ ।
ಸ ಹಿ ರಾಮಭಯಾದ್ರಾಜಾ ವನಂ ಪ್ರಾಪ ಸುದುಃಖಿತಃ ॥ ೧೫ ॥

---

೧೨. ಶ್ರುತನಿಗೆ ನಾಭಾಗ ಎಂಬುವನೂ, ನಾಭಾಗನಿಗೆ ಸಿಂಧುದ್ವೀಪ ಎಂಬುವನೂ, ಸಿಂಧುದ್ವೀಪನಿಗೆ ಅಯುತಾಯು ಎಂಬುವನೂ ಮತ್ತು ಅಯುತಾಯುವಿಗೆ ಮಹಾಬಲಿಷ್ಠನಾದ ಋತುಪರ್ಣ ಎಂಬುವನೂ ಪುತ್ರರಾಗಿ ಹುಟ್ಟಿದರು.

೧೩. ಋತುಪರ್ಣರಾಜನಿಗೆ ಸುದಾಸ ಎಂಬ ಧಾರ್ಮಿಕ ಪುತ್ರನಿದ್ದನು. ಆ ಸುದಾಸನ ಪುತ್ರನು ಸೌದಾಸ ಅಥವಾ ಕಲ್ಮಾಷಪಾದ ಎಂದು ಪ್ರಸಿದ್ಧಿಯನ್ನು ಹೊಂದಿದ್ದನು.

೧೪. ಮಹಾತೇಜಸ್ವಿಯಾದ ವಸಿಷ್ಠಮುನಿಯು ಕಲ್ಮಾಷಪಾದರಾಜನ ಪತ್ನಿಯಲ್ಲಿ ಇಕ್ಷ್ವಾಕು ರಾಜನ ವಂಶಕ್ಕೆ ಧ್ವಜಪ್ರಾಯನಾಗಿರುವ ಅಶ್ಮಕನೆಂಬ ರಾಜನನ್ನು ಕ್ಷೇತ್ರಜಪುತ್ರನನ್ನಾಗಿ ಹೊಂದಿದನು.

೧೫. ಆ ಅಶ್ಮಕರಾಜನಿಗೆ ಉತ್ಕಲಾ ಎಂಬುವಳಲ್ಲಿ ನಕುಲನೆಂಬ ರಾಜನು ಪುತ್ರನಾಗಿ ಜನಿಸಿದನು. ಅವನು ರಾಮನ ಭೀತಿಯಿಂದ ಬಹಳ ದುಃಖಗೊಂಡವನಾಗಿ ದಅರಣ್ಯವನ್ನು ಹೊಂನು.

ದಧತ್ ಸ ನಾರೀಕವಚಂ ತಸ್ಮಾಚ್ಛತರಥೋಽಭವತ್ ।
ತಸ್ಮಾದ್ಬಿಲಿಬಿಲಿಃ ಶ್ರೀಮಾನ್ ವೃದ್ಧಶರ್ಮಾ ಚ ತತ್ಸುತಃ ॥ ೧೬ ॥

ತಸ್ಮಾದ್ವಿಶ್ವಸಹಸ್ತಸ್ಮಾತ್ ಖಟ್ವಾಂಗ ಇತಿ ವಿಶ್ರುತಃ ।
ದೀರ್ಘಬಾಹುಃ ಸುತಸ್ತಸ್ಮಾದ್ರಘುಸ್ತಸ್ಮಾದಜಾಯತ ॥ ೧೭ ॥

ರಘೋರಜಃ ಸಮುತ್ಪನ್ನೋ ರಾಜಾ ದಶರಥಸ್ತತಃ ।
ರಾಮೋ ದಾಶರಥಿರ್ವೀರೋ ಧರ್ಮಜ್ಞೋ ಲೋಕವಿಶ್ರುತಃ ॥ ೧೮ ॥

ಭರತೋ ಲಕ್ಷ್ಮಣಶ್ಚೈವ ಶತ್ರುಘ್ನಶ್ಚ ಮಹಾಬಲಃ ।
ಸರ್ವೇ ಶಕ್ರಸಮಾ ಯುದ್ಧೇ ವಿಷ್ಣುಶಕ್ತಿಸಮನ್ವಿತಾಃ ॥ ೧೯ ॥

---

೧೬. ಮತ್ತು ಆ ರಾಜನು ನಾರೀಕವಚವನ್ನು ತೊಟ್ಟು ಜೀವಿಸಿದನು. ಆ ನಕುಲರಾಜನಿಂದ ಶತರಥನೂ, ಶತರಥನಿಂದ ಬಿಲಿಬಿಲಿ ಎಂಬುವನೂ, ಅವನಿಂದ ಕಾಂತಿಯುಕ್ತನಾದ ವೃದ್ಧಶರ್ಮಾ ಎಂಬುವನೂ ಪುತ್ರರಾಗಿ ಜನಿಸಿದರು.

೧೭. ವೃದ್ಧಶರ್ಮನಿಗೆ ವಿಶ್ವಸಹ ಎಂಬ ಪುತ್ರನೂ, ಅವನಿಗೆ ಖಟ್ವಾಂಗ ಎಂದು ಪ್ರಸಿದ್ಧನಾದ ಪುತ್ರನೂ, ಅವನಿಗೆ ದೀರ್ಘಬಾಹು ಎಂಬ ಪುತ್ರನೂ ಮತ್ತು ಅವನಿಗೆ ರಘು ಎಂಬ ಪುತ್ರನೂ ಜನಿಸಿದರು.

೧೮. ರಘುರಾಜನಿಗೆ ಅಜ ಎಂಬುವನೂ, ಅಜರಾಜನಿಗೆ ದಶರಥ ಎಂಬುವನೂ ಪುತ್ರರಾಗಿ ಹುಟ್ಟಿದರು. ದಶರಥನ ಪುತ್ರನಾದ ಶ್ರೀರಾಮನು ವೀರನೂ, ಧರ್ಮಜ್ಞನೂ ಆಗಿ ಲೋಕದಲ್ಲಿ ಪ್ರಸಿದ್ಧನಾಗಿರುವನು.

೧೯. ಮತ್ತು ಭರತ, ಲಕ್ಷ್ಮಣ, ಶತ್ರುಘ್ನ ಎಂಬ ಮಹಾಬಲಿಷ್ಠರಾದ ಸಹೋದರರೂ ಸೇರಿ ನಾಲ್ಕು ಮಂದಿಯು ಯುದ್ಧದಲ್ಲಿ ಇಂದ್ರನಿಗೆ ಸಮಾನರೂ ವಿಷ್ಣುವಿನ ಶಕ್ತಿಯಿಂದ ಕೂಡಿದವರೂ ಆಗಿದ್ದರು.

ಜಜ್ಞೇ ರಾವಣನಾಶಾರ್ಥಂ ವಿಷ್ಣುರಂಶೇನ ವಿಶ್ವಭುಕ್ ।
ರಾಮಸ್ಯ ಭಾರ್ಯಾ ಸುಭಗಾ ಜನಕಸ್ಯಾತ್ಮಜಾ ಶುಭಾ ॥ ೨೦ ॥

ಸೀತಾ ತ್ರಿಲೋಕವಿಖ್ಯಾತಾ ಶೀಲೌದಾರ್ಯಗುಣಾನ್ವಿತಾ ।
ತಪಸಾ ತೋಷಿತಾ ದೇವೀ ಜನಕೇನ ಗಿರೀಂದ್ರಜಾ ॥ ೨೧ ॥

ಪ್ರಾಯಚ್ಛಜ್ಜಾನಕೀಂ ಸೀತಾಂ ರಾಮಮೇವಾಶ್ರಿತಾಂ ಪತಿಮ್ ।
ಪ್ರೀತಶ್ಚ ಭಗವಾನೀಶಸ್ತ್ರಿಶೂಲೀ ನೀಲಲೋಹಿತಃ ॥ ೨೨ ॥

ಪ್ರದದೌ ಶತ್ರುನಾಶಾರ್ಥಂ ಜನಕಾಯಾದ್ಭುತಂ ಧನುಃ ।
ಸ ರಾಜಾ ಜನಕೋ ಧೀಮಾನ್ ದಾತುಕಾಮಃ ಸುತಾಮಿಮಾಮ್॥ ೨೩॥

---

೨೦. ರಾವಣಾಸುರನನ್ನು ಸಂಹರಿಸಲು ವಿಶ್ವರಕ್ಷಕನಾದ ವಿಷ್ಣುವು ತನ್ನ ಅಂಶದಿಂದ ಶ್ರೀರಾಮನಾಗಿ ಅವತರಿಸಿದನು. ಸುಂದರಿಯೂ, ಮಂಗಳ ಮಯಳೂ ಆದ ಜನಕರಾಜನ ಪುತ್ರಿಯು ಶ್ರೀರಾಮನ ಭಾರ್ಯೆಯಾಗಿದ್ದಳು.

೨೧. ಆ ಜನಕಪುತ್ರಿಯಾದ ಸೀತಾದೇವಿಯು ಶೀಲ ಔದಾರ್ಯ ಮುಂತಾದ ಗುಣಗಳಿಂದ ತ್ರಿಲೋಕಗಳಲ್ಲಿ ವಿಖ್ಯಾತಳಾಗಿದ್ದಳು. ಪೂರ್ವದಲ್ಲಿ ಜನಕರಾಜನಿಂದ ಹಿಮಾಲಯನ ಪುತ್ರಿಯಾದ ಪಾರ್ವತಿಯು ತಪಸ್ಸಿನಿಂದ ಸೇವಿಸಲ್ಪಟ್ಟಳು.

೨೨. ಆಗ ಗೌರಿಯು ಶ್ರೀರಾಮನನ್ನು ಪತಿಯನ್ನಾಗಿ ವರಿಸುವಂತಹ ಸೀತಾ ದೇವಿಯನ್ನು ಜನಕನಿಗೆ ಪುತ್ರಿಯನ್ನಾಗಿ ಕೊಟ್ಟಳು. ತ್ರಿಶೂಲಧಾರಿಯೂ, ನೀಲ ಲೋಹಿತವರ್ಣಗಳಿಂದ ರಂಜಿತನೂ ಮತ್ತು ಪೂಜ್ಯನೂ ಆದ ಈಶ್ವರನು ಜನಕರಾಜ ನಲ್ಲಿ ಸುಪ್ರೀತನಾದನು.

೨೩ ಆಗ ಶತ್ರುಗಳನ್ನು ಸಂಹರಿಸಲು ಜನಕರಾಜನಿಗೆ ಅದ್ಭುತವಾದ ಒಂದು ಬಿಲ್ಲನ್ನು ಕೊಟ್ಟನು. ಆ ಜ್ಞಾನಿಯಾದ ಜನಕರಾಜನು ಯೋಗ್ಯಸಮಯದಲ್ಲಿ ಕನ್ಯೆಯನ್ನು ದಾನಮಾಡಲು ಇಷ್ಟವುಳ್ಳವನಾದನು.

ಅಘೋಷಯದಮಿತ್ರಘ್ನೋ ಲೋಕೇಽಸ್ಮಿನ್ ದ್ವಿಜಪುಂಗವಾಃ ।
ಇದಂ ಧನುಃ ಸಮಾದಾತುಂ ಯಃ ಶಕ್ನೋತಿ ಜಗತ್ತ್ರಯೇ ॥ ೨೪ ॥

ದೇವೋ ವಾ ದಾನವೋ ವಾಪಿ ಸ ಸೀತಾಂ ಲಬ್ಧುಮರ್ಹತಿ ।
ವಿಜ್ಞಾಯ ರಾಮೋ ಬಲವಾನ್ ಜನಕಸ್ಯ ಗೃಹಂ ಪ್ರಭುಃ ॥ ೨೫ ॥

ಭಂಜಯಾಮಾಸ ಚಾದಾಯ ಗತ್ವಾಸೌ ಲೀಲಯೈವ ಹಿ ।
ಉದ್ವವಾಹಾಥ ತಾಂ ಕನ್ಯಾಂ ಪಾರ್ವತೀಮಿವ ಶಂಕರಃ ॥ ೨೬ ॥

ರಾಮಃ ಪರಮಧರ್ಮಾತ್ಮಾ ಸೇನಾಮಿವ ಚ ಷಣ್ಮುಖಃ ।
ತತೋ ಬಹುತಿಥೇ ಕಾಲೇ ರಾಜಾ ದಶರಥಃ ಸ್ವಯಮ್ ॥ ೨೭ ॥

---

೨೪. ಆಗ ಶತ್ರು ಸಂಹಾರಿಯಾದ ಜನಕರಾಜನು ಮರ್ತ್ಯಲೋಕದಲ್ಲಿ ಹೀಗೆ ಘೋಷಿಸಿದನು. ದ್ವಿಜೋತ್ತಮರೇ ! ಮೂರು ಲೋಕಗಳಲ್ಲಿ ನನ್ನ ಅದ್ಭುತ ದನುಸ್ಸನ್ನು ತೆಗೆದುಕೊಳ್ಳಲು ಶಕ್ತರಾರಿರುವರು.

೨೫. ಬಿಲ್ಲನ್ನು ಪರಿಗ್ರಹಿಸಲು ಶಕ್ತನಾದ ದೇವ ಅಥವಾ ದಾನವನು ಸೀತೆಯ ಪಾಣಿಗ್ರಹಣಮಾಡಲು ಅರ್ಹನಾಗಿರುವನು. ಈ ವೃತ್ತಾಂತವನ್ನು ಸರ್ವಸಮರ್ಥನೂ, ಬಲಿಷ್ಠನೂ ಆದ ಶ್ರೀರಾಮನು ತಿಳಿದು ಜನಕರಾಜನ ಗೃಹಕ್ಕೆ ಬಂದನು.

೨೬. ಅಲ್ಲಿ ಶ್ರೀರಾಮನು ಲೀಲೆಯಿಂದಲೇ ಆ ಧನುಸ್ಸನ್ನು ತೆಗೆದುಕೊಂಡು ಭಂಗಪಡಿಸಿದನು. ಮತ್ತು ಶಂಕರನು ಪಾರ್ವತಿಯನ್ನು ಪರಿಗ್ರಹಿಸಿದಂತೆ ಕನ್ಯೆಯಾದ ಸೀತೆಯನ್ನು ಮದುವೆಯಾದನು.

೨೭. ಮತ್ತು ಷಣ್ಮುಖಸ್ವಾಮಿಯು ದೇವಸೈನ್ಯವನ್ನು ವಶಪಡಿಸಿಕೊಂಡಂತೆ ಪರಮಧರ್ಮಾತ್ಮಕನಾದ ಶ್ರೀರಾಮನು ಸೀತೆಯ ಪಾಣಿಯನ್ನು ಪರಿಗ್ರಹಿಸಿದನು: ಹಾಗೆ ಪುತ್ರ ಸೌಖ್ಯದಿಂದ ಕೂಡಿದ ದಶರಥರಾಜನಿಗೆ ಅನೇಕ ಕಾಲವು ಕಳೆಯಿತು.

ರಾಮಂ ಜ್ಯೇಷ್ಠಸುತಂ ವೀರಂ ರಾಜಾನಂ ಕರ್ತುಮಾರಭತ್ ।
ತಸ್ಯಾಥ ಪತ್ನೀ ಸುಭಗಾ ಕೈಕೇಯೀ ಚಾರುಹಾಸಿನೀ ॥ ೨೮ ॥

ನಿವಾರಯಾಮಾಸ ಪತಿಂ ಪ್ರಾಹ ಸಂಭ್ರಾಂತಮಾನಸಾ ।
ಮತ್ಸುತಂ ಭರತಂ ವೀರಂ ರಾಜಾನಂ ಕರ್ತುಮರ್ಹಸಿ ॥ ೨೯ ॥

ಪೂರ್ವಮೇವ ವರೌ ಯಸ್ಮಾದ್ದತ್ತೌ ಮೇ ಭವತಾ ಯತಃ ।
ಸ ತಸ್ಯಾ ವಚನಂ ಶ್ರುತ್ವಾ ರಾಜಾ ದುಃಖಿತಮಾನಸಃ ॥ ೩೦ ॥

ಬಾಢಮಿತ್ಯಬ್ರವೀದ್ವಾಕ್ಯಂ ತಥಾ ರಾಮೋಽಪಿ ಧರ್ಮವಿತ್ ।
ಪ್ರಣಮ್ಯಾಥ ಪಿತುಃ ಪಾದೌ ಲಕ್ಷ್ಮಣೇನ ಸಹಾಚ್ಯುತಃ ॥ ೩೧ ॥

---

೨೮. ಆಗ ದಶರಥನು ಜ್ಯೇಷ್ಠಪುತ್ರನೂ ವೀರನೂ ಆದ ಶ್ರೀರಾಮನನ್ನು ರಾಜನನ್ನಾಗಿ ಮಾಡುವ ಮಂತ್ರಾಲೋಚನೆಯನ್ನು ಆರಂಭಿಸಿದನು. ಆಗ ಸುಂದರಿಯೂ, ಮಂದಹಾಸದಿಂದ ಸುಂದರಮುಖಿಯೂ ಆದ ಕೈಕೇಯಿ ಎಂಬ ಅವನ ಪತ್ನಿಯು ಅದನ್ನು ತಡೆದಳು.

೨೯. ಕೈಕೇಯಿಯು ಭಯಗೊಂಡ ಮಾನಸವುಳ್ಳವಳಾಗಿ ರಾಮನ ರಾಜ್ಯಾಭಿಷೇಕವನ್ನು ತಡೆದು ವೀರನೂ, ತನ್ನ ಪುತ್ರನೂ ಆದ ಭರತನನ್ನು ರಾಜನನ್ನಾಗಿ ಮಾಡೆಂದು ಪತಿಯನ್ನು ಕೇಳಿಕೊಂಡಳು.

೩೦. ಪತಿಯೇ ! ಪೂರ್ವದಲ್ಲಿಯೇ ನನಗೆ ಎರಡು ವರಗಳು ನಿನ್ನಿಂದ ಕೊಡಲ್ಪಟ್ಟಿವೆ. ಅದರಂತೆ ಈಗ ವರ್ತಿಸು, ಹೀಗೆಂಬ ಕೈಕೆಯಿಯ ವಚನವನ್ನು ದಶರಥ ರಾಜನು ಕೇಳಿ ಮನಸ್ಸಿನಲ್ಲಿ ಬಹಳ ದುಃಖಗೊಂಡನು.

೩೧. ಆದರೆ ಕೈಕೆಯಿಯ ವಚನವನ್ನು ಹಾಗೆಯೇ ಆಗಲೆಂದು ಅಂಗೀಕರಿಸಿದನು. ಆಗ ಧರ್ಮಜ್ಞನಾದ ರಾಮನು ಲಕ್ಷ್ಮಣನೊಂದಿಗೆ ಪಿತ್ರಾಜ್ಞೆಯನ್ನು ಲಂಘಿಸದೆ ತಂದೆಯ ಪಾದಗಳಲ್ಲಿ ನಮಸ್ಕರಿಸಿದನು.

ಯಯೌ ವನಂ ಸಪತ್ನೀಕಃ ಕೃತ್ವಾ ಸಮಯಮಾಪ್ತವಾನ್ ।
ಸಂವತ್ಸರಾಣಾಂ ಚತ್ವಾರಿ ದಶ ಚೈವ ಮಹಾಬಲಃ ॥ ೩೨ ॥

ಉವಾಸ ತತ್ರ ಭಗವಾನ್ ಲಕ್ಷ್ಮಣೇನ ಸಹ ಪ್ರಭುಃ ।
ಕದಾಚಿದ್ವಸತೋಽರಣ್ಯೇ ರಾವಣೋ ನಾಮ ರಾಕ್ಷಸಃ ॥ ೩೩ ॥

ಪರಿವ್ರಾಜಕವೇಷೇಣ ಸೀತಾಂ ಹೃತ್ವಾ ಯಯೌ ಪುರೀಮ್ ।
ಅದೃಷ್ಟ್ವಾ ಲಕ್ಷ್ಮಣೋ ರಾಮಃ ಸೀತಾಮಾಕುಲಿತೇಂದ್ರಿಯೌ ॥ ೩೪ ॥

ದುಃಖಶೋಕಾಭಿಸಂತಪ್ತೌ ಬಭೂವತುರರಿಂದಮೌ ।
ತತಃ ಕದಾಚಿತ್ಕಪಿನಾ ಸುಗ್ರೀವೇಣ ದ್ವಿಜೋತ್ತಮಾಃ ॥ ೩೫ ॥

---

೩೨. ಮತ್ತು ಮಹಾಬಲಿಷ್ಠನಾದ ರಾಮನು ಲಕ್ಷ್ಮಣ ಮತ್ತು ಸೀತಾ ದೇವಿಯರೊಡನೆ , ಹದಿನಾಲ್ಕು ಸಂವತ್ಸರಗಳವರೆಗೆ ವನವಾಸವನ್ನು ಮಾಡುವ ಶಪಥವನ್ನು ಮಾಡಿ ವನಕ್ಕೆ ತೆರಳಿದನು

೩೩. ಅರಣ್ಯದಲ್ಲಿ ಶಕ್ತನೂ, ಪೂಜ್ಯನೂ ಆದ ಶ್ರೀ ರಾಮನು ಲಕ್ಷ್ಮಣನೊಂದಿಗೆ ವಾಸಮಾಡಿದನು. ಹೀಗೆ ಅರಣ್ಯದಲ್ಲಿ ಶ್ರೀರಾಮನು ವಾಸಮಾಡುತ್ತಿರಲು ರಾವಣನೆಂಬ ರಾಕ್ಷಸರಾಜನು ಅಸನ್ಮಾರ್ಗದಲ್ಲಿ ಪ್ರವರ್ತಿಸಿದನು.

೩೪. ಆ ರಾವಣನು ಸನ್ಯಾಸಿವೇಷದಿಂದ ಬಂದು ಸೀತೆಯನ್ನು ಅಪಹರಿಸಿ ತನ್ನ ಲಂಕಾನಗರಕ್ಕೆ ಹೊರಟುಹೋದನು. ಇತ್ತ ರಾಮಲಕ್ಷ್ಮಣರು ಸೀತೆಯನ್ನು ಕಾಣದೆ ವ್ಯಥೆಗೊಂಡ ಇಂದ್ರಿಯವುಳ್ಳವರಾದರು.

೩೫. ದ್ವಿಜೋತ್ತಮರೇ ! ಮತ್ತು ಶತ್ರು ನಿಗ್ರಹಪರರಾದ ಆ ರಾಮ ಲಕ್ಷ್ಮಣರು ಸೀತೆಯ ವಿಯೋಗದ ದುಃಖ-ಶೋಕಗಳಿಂದ ತಪಿಸಿದರು. ಹೀಗಿರಲು ಒಂದು ಸಮಯದಲ್ಲಿ ಕಪಿರಾಜನಾದ ಸುಗ್ರೀವನ ಸಖ್ಯವು ರಾಮನಿಗೆ ಪ್ರಾಪ್ತವಾಯಿತು.

ವಾನರಾಣಾಮಭೂತ್ ಸಖ್ಯಂ ರಾಮಸ್ಯಾಕ್ಲಿಷ್ಟಕರ್ಮಣಃ ।
ಸುಗ್ರೀವಸ್ಯಾನುಗೋ ವೀರೋ ಹನುಮಾನ್ನಾಮ ವಾನರಃ ॥ ೩೬ ॥

ವಾಯುಪುತ್ರೋ ಮಹಾತೇಜಾ ರಾಮಸ್ಯಾಸೀತ್ ಪ್ರಿಯಃ ಸದಾ ।
ಸ ಕೃತ್ವಾ ಪರಮಂ ಧೈರ್ಯಂ ರಾಮಾಯ ಕೃತನಿಶ್ಚಯಃ ॥ ೩೭ ॥

ಆನಯಿಷ್ಯಾಮಿ ತಾಂ ಸೀತಾಮಿತ್ಯುಕ್ತ್ವಾ ವಿಚಚಾರ ಹ ।
ಮಹೀಂ ಸಾಗರಪರ್ಯಂತಾಂ ಸೀತಾದರ್ಶನ ತತ್ಪರಃ ॥ ೩೮ ॥

ಜಗಾಮ ರಾವಣಪುರೀಂ ಲಂಕಾಂ ಸಾಗರಸಂಸ್ಥಿತಾಮ್ ।
ತತ್ರಾಥ ನಿರ್ಜನೇ ದೇಶೇ ವೃಕ್ಷಮೂಲೇ ಶುಚಿಸ್ಮಿತಾಮ್ ॥ ೩೯ ॥

---

೩೬. ಶ್ಲಾಘ್ಯವಾದ ವ್ಯಾಪಾರವುಳ್ಳ ರಾಮನಿಗೆ ವಾನರರೊಂದಿಗೆ ಸ್ನೇಹವು ಉಂಟಾಯಿತು. ಸುಗ್ರೀವನಿಗೆ ಹನೂಮಾನ್ ಎಂಬ ಒಬ್ಬ ವೀರವಾನರನು ಸೇವಕನಾಗಿದ್ದನು.

೩೭. ಮಹಾತೇಜಸ್ವಿಯೂ, ವಾಯುಪುತ್ರನೂ ಆದ ಆ ಹನುಮಂತನು ಯಾವಾಗಲೂ ರಾಮನಿಗೆ ಪ್ರಿಯನಾಗಿದ್ದನು. ಅವನು ದೃಢವಾದ ಧೈರ್ಯವನ್ನು ಹೊಂದಿ ರಾಮನಿಗೆ ತನ್ನ ನಿಶ್ಚಯವನ್ನು ನಿವೇದಿಸಿದನು.

೩೮. ಆ ಹನುಮಂತನು ಸೀತೆಯನ್ನು ತಂದುಕೊಡುವೆನೆಂದು ಹೇಳಿ ಸೀತಾದೇವಿಯ ದರ್ಶನಲಾಭದಲ್ಲಿ ಬಹಳ ಹೆಚ್ಚಾದ ಆಸೆಯುಳ್ಳವನಾಗಿ ಸಮುದ್ರಪರ್ಯಂತವಾದ ಭೂಮಿಯನ್ನು ಸಂಚರಿಸಿದನು.

೩೯. ಹಾಗೆ ಸಮುದ್ರದ ಮಧ್ಯದಲ್ಲಿ ರಾಜಿಸುವ ಲಂಕಾ ಎಂಬ ರಾವಣನ ನಗರವನ್ನು ಪ್ರವೇಶಿಸಿದನು, ಅಲ್ಲಿ ನಿರ್ಜನಪ್ರದೇಶವಾದ ಒಂದು ಮರದ ಅಡಿಯಲ್ಲಿ ಶುದ್ಧವಾದ ಮಂದಹಾಸದಿಂದ ಕೂಡಿದ ಸೀತೆಯನ್ನು ನೋಡಿದನು.

ಅಪಶ್ಯದಮಲಾಂ ಸೀತಾಂ ರಾಕ್ಷಸೀಭಿಃ ಸಮಾವೃತಾಮ್ ।
ಅಶ್ರುಪೂರ್ಣೇಕ್ಷಣಾಂ ಹೃದ್ಯಾಂ ಸಂಸ್ಮರಂತೀಮನಿಂದಿತಾಮ್ ॥ ೪೦ ॥

ರಾಮಮಿಂದೀವರಶ್ಯಾಮಂ ಲಕ್ಷ್ಮಣಂ ಚಾತ್ಮಸಂಸ್ಥಿತಾಮ್ ।
ನಿವೇದಯಿತ್ವಾ ಚಾತ್ಮಾನಂ ಸೀತಾಯೈ ರಹಸಿ ಪ್ರಭುಃ ॥ ೪೧ ॥

ಅಸಂಶಯಾಯ ಪ್ರದದಾವಸ್ಯೈ ರಾಮಾಂಗುಲೀಯಕಮ್ ।
ದೃಷ್ಟ್ವಾಂಗುಲೀಯಕಂ ಸೀತಾ ಪತ್ಯುಃ ಪರಮಶೋಭನಮ್ ॥ ೪೨ ॥

ಮೇನೇ ಸಮಾಗತಂ ರಾಮಂ ಪ್ರೀತಿವಿಸ್ಫುರಿತೇಕ್ಷಣಾ ।
ಸಮಾಶ್ವಾಸ್ಯ ತದಾ ಸೀತಾಂ ದೃಷ್ಟ್ವಾ ರಾಮಸ್ಯ ಚಾಂತಿಕಮ್" ॥ ೪೩ ॥

---

೪೦. ಅಲ್ಲಿ ನಿರ್ಮಲಳೂ ರಮಣೀಯಳೂ, ಕಾವಲಿರುವ ರಾಕ್ಷಸ ಸ್ತ್ರೀಯರಿಂದ ಸುತ್ತಲ್ಪಟ್ಟವಳೂ, ಕಣ್ಣೀರಿನಿಂದ ತುಂಬಿದ ಕಣ್ಣುಳ್ಳವಳೂ, ಅದುಷ್ಟಳೂ ಮತ್ತು ರಾಮನನ್ನು ಸ್ಮರಿಸುತ್ತಿರುವಳೂ ಆದ ಸೀತೆಯನ್ನು ನೋಡಿದನು.

೪೧. ಮತ್ತು ಕನ್ನೈದಿಲೆಯಂತೆ ನೀಲವರ್ಣನಾದ ರಾಮನನ್ನೂ, ಲಕ್ಷ್ಮಣನನ್ನೂ ಅಂತಃಕರಣದಲ್ಲಿ ಧ್ಯಾನಿಸುತ್ತಿದ್ದ ಸೀತೆಗೆ ದಕ್ಷನಾದ ಹನುಮಂತನು ತನ್ನ ಪರಿಚಯುವನ್ನು ತಿಳಿಸಿದನು.

೪೨. ಮತ್ತು ಅವಳಿಗೆ ಸಂಶಯವನ್ನು ಹೋಗಲಾಡಿಸಲು ರಾಮನ ಉಂಗುರವನ್ನು ಕೊಟ್ಟನು. ಆಗ ಸೀತೆಯು ಪತಿಗೆ ಉತ್ತಮಭೂಷಣವಾದ ಆ ಉಂಗುರವನ್ನು ನೋಡಿದಳು.

೪೩. ಆಗ ಪ್ರೀತಿಯಿಂದ ಅರಳಿದ ದೃಷ್ಟಿಯುಳ್ಳ ಸೀತಾದೇವಿಯು ರಾಮನೇ ಪ್ರತ್ಯಕ್ಷವಾಗಿ ಬಂದಂತೆ ಅಂಗುಳೀಯಕ ದರ್ಶನದಿಂದ ಭಾವಿಸಿದಳು. ಆಂಜನೇಯನು ಆಗ ರಾಮನ ಸನ್ನಿಧಿಗೆ ನಿನ್ನನ್ನು ಒಯ್ಯುವೆನೆಂದು ಹೇಳಿ ಸೀತೆಯನ್ನು ಸಮಾಧಾನ ಮಾಡಿದನು.

ನಯಿಷ್ಯೇ ತ್ವಾಂ ಮಹಾಬಾಹುಮುಕ್ತ್ವಾ ರಾಮಂ ಯಯೌ ಪುನಃ ।
ನಿವೇದಯಿತ್ವಾ ರಾಮಾಯ ಸೀತಾದರ್ಶನಮಾತ್ಮವಾನ್ ॥ ೪೪ ॥

ತಸ್ಥೌ ರಾಮೇಣ ಪುರತೋ ಲಕ್ಷ್ಮಣೇನ ಚ ಪೂಜಿತಃ ।
ತತಃ ಸ ರಾಮೋ ಬಲವಾನ್ ಸಾರ್ಧಂ ಹನುಮತಾ ಸ್ವಯಮ್ ॥ ೪೫ ॥

ಲಕ್ಷ್ಮಣೇನ ಚ ಯುದ್ಧಾಯ ಬುದ್ಧಿಂ ಚಕ್ರೇ ಹಿ ರಾಕ್ಷಸಃ ।
ಕೃತ್ವಾಥ ವಾನರಶತೈರ್ಲಂಕಾಮಾರ್ಗಂ ಮಹೋದಧೇಃ ॥ ೪೬ ॥

ಸೇತುಂ ಪರಮಧರ್ಮಾತ್ಮಾ ರಾವಣಂ ಹತವಾನ್ ಪ್ರಭುಃ ।
ಸಪತ್ನೀಕಂ ಹಿ ಸಸುತಂ ಸಭ್ರಾತೃಕಮರಿಂದಮಃ ॥ ೪೭ ॥

---

೪೪. ತರುವಾಯ ಮಹಾಬಾಹು ಬಲಶಾಲಿಯಾದ ರಾಮನ ಸನ್ನಿಧಿಗೆ ಮತ್ತೆ ಹೋಗಿ ರಾಮನಿಗೆ ಸೀತೆಯ ದರ್ಶನವಾದುದನ್ನು ಯಥೋಚಿತವಾಗಿ ತಿಳಿಸಿದನು.

೪೫. ಆಗ ಶ್ರೀರಾಮನಿಂದಲೂ ಲಕ್ಷ್ಮಣನಿಂದಲೂ ಮುಂಭಾಗದಲ್ಲಿ ನಿಂತಿರುವ ಆಂಜನೇಯನು ಸತ್ಕರಿಸಲ್ಪಟ್ಟನು. ಆಮೇಲೆ ಬಲಿಷ್ಠನಾದ ಆ ರಾಮನು ಆಂಜನೇಯನ ಸಹಾಯದೊಡನೆ ಮುಂದಿನ ಕರ್ತವ್ಯವನ್ನು ನೆನೆಸಿದನು.

೪೬. ಕಡೆಯಲ್ಲಿ ಆಂಜನೇಯ ಮತ್ತು ಲಕ್ಷ್ಮಣರೊಂದಿಗೆ ಹೋಗಿ ರಾವಣ ನೊಡನೆ ಯುದ್ಧಮಾಡುವ ನಿಶ್ಚಯವನ್ನು ಮಾಡಿದನು, ತರುವಾಯ ಅನೇಕ ಸಂಖ್ಯೆಯ ವಾನರರಿಂದ ಮಹೋದಧಿಯಲ್ಲಿ ಲಂಕಾಗನರವನ್ನು ಸೇರುವ ಮಾರ್ಗ ವನ್ನು ಕಲ್ಪಿಸಿದನು.

೪೭. ಧಾರ್ಮಿಕೋತ್ತಮನೂ, ಸರ್ವಸಮರ್ಥನೂ, ಶತ್ರುನಿಗ್ರಹಪರನೂ ಆದ ಶ್ರೀರಾಮನು ರಾಮಸೇತುವನ್ನು ಮಾಡಿಸಿ ತನ್ಮೂಲಕ ಪತ್ನೀ-ಪುತ್ರ-ಭ್ರಾತೃ ಮುಂತಾದ ಪರಿವಾರದಿಂದ ಕೂಡಿದ ರಾವಣಾಸುರನನ್ನು ಸಂಹರಿಸಿದನು.

ಆನಯಾಮಾಸ ತಾಂ ಸೀತಾಂ ವಾಯುಪುತ್ರಸಹಾಯವಾನ್ ।
ಸೇತುಮಧ್ಯೇ ಮಹಾದೇವಮೀಶಾನಂ ಕೃತ್ತಿವಾಸಸಮ್ ॥ ೪೮ ॥

ಸ್ಥಾಪಯಾಮಾಸ ಲಿಂಗಸ್ಥಂ ಪೂಜಯಾಮಾಸ ರಾಘವಃ ।
ತಸ್ಯ ದೇವೋ ಮಹಾದೇವಃ ಪಾರ್ವತ್ಯಾ ಸಹ ಶಂಕರಃ ॥ ೪೯ ॥

ಪ್ರತ್ಯಕ್ಷಮೇವ ಭಗವಾನ್ ದತ್ತವಾನ್ ವರಮುತ್ತಮಮ್ ।
ಯತ್ತ್ವಯಾ ಸ್ಥಾಪಿತಂ ಲಿಂಗಂ ದ್ರಕ್ಷ್ಯಂತೀದಂ ದ್ವಿಜಾತಯಃ ॥ ೫೦ ॥

ಮಹಾಪಾತಕಸಂಯುಕ್ತಾಸ್ತೇಷಾಂ ಪಾಪಂ ವಿನಂಕ್ಷ್ಯತಿ ।
ಅನ್ಯಾನಿ ಚೈವ ಪಾಪಾನಿ ಸ್ನಾತಸ್ಯಾತ್ರ ಮಹೋದಧೌ ॥ ೫೧ ॥

---

೪೮. ಆ ಮೇಲೆ ವಾಯುಪುತ್ರನಾದ ಆಂಜನೇಯನ ಸಹಾಯದಿಂದ ಆ ಸೀತಾದೇವಿಯನ್ನು ಕರೆತಂದನು. ಆಗ ಸೇತುವಿನ ಮಧ್ಯದಲ್ಲಿ ಗಜಚರ್ಮಾಂಬರ ಧಾರಿಯೂ, ಸರ್ವೇಶ್ವರನೂ ಆದ ಮಹಾದೇವನನ್ನು ಪ್ರತಿಷ್ಠೆಮಾಡಿದನು.

೪೯. ರಘುವಂಶದೀಪನಾದ ಶ್ರೀರಾಮನು ಲಿಂಗರೂಪಿಯಾದ ಶಂಕರನನ್ನು ಸ್ಥಾಪಿಸಿ ಪೂಜಿಸಿದನು. ಆಗ ಮಹಾದೇವನಾದ ಶಂಕರಸ್ವಾಮಿಯು ಪಾರ್ವತಿ ಯೊಡನೆ ಶ್ರೀರಾಮನಿಗೆ ಪ್ರತ್ಯಕ್ಷದರ್ಶನವನ್ನು ಕೊಟ್ಟನು.

೫೦. ಮತ್ತು ಭಗವಂತನಾದ ಶಂಕರನು ಪ್ರತ್ಯಕ್ಷವಾಗಿ ಬಂದು ಶ್ರೀರಾಮನಿಗೆ ಉತ್ಕೃಷ್ಟ ವರಗಳನ್ನು ಕೊಟ್ಟನು. ದ್ವಿಜರು ನಿನ್ನಿಂದ ಸ್ಥಾಪಿಸಲ್ಪಟ್ಟಿರುವ ಈ ಶಿವ ಲಿಂಗವನ್ನು ನೋಡುವುದು ಶ್ರೇಯಸ್ಕರವಾಗಲಿ.

೫೧. ಮತ್ತು ಮಹಾಪಾಪಗಳಿಂದ ಕೂಡಿದವರು ಈ ಶಿವಲಿಂಗ ದರ್ಶನದಿಂದ ತಮ್ಮ ಪಾಪವನ್ನು ಕಳೆದುಕೊಳ್ಳುವರು. ಹಾಗೂ ಮಿಕ್ಕ ಅನೇಕ ವಿಧ ಪಾಪಗಳ ನಿವಾರಣೆಗೆ ಈ ಮಹೋಧಿಯಲ್ಲಿ ಸ್ನಾನಮಾಡಬೇಕು.

ದರ್ಶನಾದೇವ ಲಿಂಗಸ್ಯ ನಾಶಂ ಯಾಂತಿ ನ ಸಂಶಯಃ ।
ಯಾವತ್ ಸ್ಥಾಸ್ಯಂತಿ ಗಿರಯೋ ಯಾವದೇಷಾ ಚ ಮೇದಿನೀ ॥ ೫೨ ॥

ಯಾವತ್ ಸೇತುಶ್ಚ ತಾವಚ್ಚ ಸ್ಥಾಸ್ಯಾಮ್ಯತ್ರ ತಿರೋಹಿತಃ ।
ಸ್ನಾನಂ ದಾನಂ ತಪಃ ಶ್ರಾದ್ಧಂ ಸರ್ವಂ ಭವತು ಚಾಕ್ಷಯಮ್ ॥ ೫೩ ॥

ಸ್ಮರಣಾದೇವ ಲಿಂಗಸ್ಯ ದಿನಪಾಪಂ ಪ್ರಣಶ್ಯತಿ ।
ಇತ್ಯುಕ್ತ್ವಾ ಭಗವಾನ್ ಶಂಭುಃ ಪರಿಷ್ವಜ್ಯ ತು ರಾಘವಮ್ ॥ ೫೪ ॥

ಸನಂದೀ ಸಗಣೋ ರುದ್ರಸ್ತತ್ರೈವಾಂತರಧೀಯತ ।
ರಾಮೋಽಪಿ ಪಾಲಯಾಮಾಸ ರಾಜ್ಯಂ ಧರ್ಮಪರಾಯಣಃ ॥ ೫೫ ॥

---

೫೨ ಮತ್ತು ಶಿವಲಿಂಗವನ್ನು ದರ್ಶನಮಾಡುವುದರಿಂದ ಆ ಸಮಸ್ತ ಪಾಪಗಳು ನಾಶವಾಗುವುದರಲ್ಲಿ ಸಂಶಯವಿಲ್ಲ. ಎಷ್ಟರವರೆಗೆ ಪರ್ವತಗಳು ಅಚಲವಾಗಿರುವುವೋ, ಭೂಮಿಯು ಸ್ಥಿರವಾಗಿ ನಿಲ್ಲುವುದೋ, ಅದುವರೆಗೆ ನಾನು ಇಲ್ಲಿ ಸನ್ನಿಹಿತನಾಗಿರುವೆನು.

೫೩. ಮತ್ತು ಈ ರಾಮಸೇತುವು ಇರುವವರೆಗೂ ನಾನು ಇಲ್ಲಿ ಅದೃಶ್ಯರೂಪನಾಗಿ ನೆಲೆಸಿರುವೆನು. ಈ ಕ್ಷೇತ್ರದಲ್ಲಿ ಆಚರಿಸಿದ ಸ್ನಾನ-ದಾನ-ತಪಸ್ಸು-ಶ್ರಾದ್ಧ ಮುಂತಾದ ಸಮಸ್ತ ಸತ್ಕರ್ಮಗಳು ಅಕ್ಷಯವಾಗಲಿ.

೫೪. ಮತ್ತು ಶಿವಲಿಂಗವನ್ನು ಸ್ಮರಣಮಾಡಿದ ಮಾತ್ರದಿಂದ ಮಾನವನ ಸಂಪೂರ್ಣವಾಗಿ ಒಂದು ದಿನದ ಪಾಪವು ನಾಶವಾಗುವುದು. ಹೀಗೆಂದು ಹೇಳಿ ಭಗವಂತನಾದ ಶಂಭುವು ಶ್ರೀರಾಮನನ್ನು ಆಲಿಂಗಿಸಿಕೊಂಡನು.

೫೫. ತರುವಾಯ ನಂದೀ ಪ್ರಮಥಗಣ ಮುಂತಾದ ಪರಿವಾರದೊಡನೆ ರುದ್ರನು ಅಲ್ಲಿಯೇ ಅಂತರ್ಧಾನ ಹೊಂದಿದನು. ಧರ್ಮಾನುಷ್ಠಾನದಲ್ಲಿ ತತ್ಪರನಾದ ಶ್ರೀ ರಾಮನು ಕ್ರಮವಾಗಿ ರಾಜ್ಯವನ್ನು ಪಾಲಿಸಿದನು.

ಅಭಿಷಿಕ್ತೋ ಮಹಾತೇಜಾ ಭರತೇನ ಮಹಾಬಲಃ ।
ವಿಶೇಷಾದ್ಬ್ರಾಹ್ಮಣಾನ್ ಸರ್ವಾನ್ ಪೂಜಯಾಮಾಸ ಚೇಶ್ವರಮ್ ॥

ಯಜ್ಞೇನ ಯಜ್ಞಹಂತಾರಮಶ್ವಮೇಧೇನ ಶಂಕರಮ್ ।
ರಾಮಸ್ಯ ತನಯೋ ಜಜ್ಞೇ ಕುಶ ಇತ್ಯಭಿವಿಶ್ರುತಃ ॥ ೫೭ ॥

ಲವಶ್ಚ ಸುಮಹಾಭಾಗಃ ಸರ್ವತತ್ತ್ವಾರ್ಥವಿತ್ ಸುಧೀಃ ।
ಅತಿಥಿಸ್ತು ಕುಶಾಜ್ಜಜ್ಞೇ ನಿಷಧಸ್ತತ್ಸುತೋಽಭವತ್ ॥ ೫೮ ॥

ನಲಶ್ಚ ನಿಷಧಸ್ಯಾಸೀನ್ನಭಾಸ್ತಸ್ಮಾದಜಾಯತ ।
ನಭಸಃ ಪುಂಡರೀಕಾಕ್ಷಃ ಕ್ಷೇಮಧನ್ವಾ ತು ತತ್ಸುತಃ ॥ ೫೯ ॥

---

೫೬. ಮಹಾತೇಜಸ್ವಿಯೂ, ಅತಿಶಯ ಬಲಿಷ್ಠನೂ ಆದ ಶ್ರೀರಾಮನು ಭರತನಿಂದ ಪಟ್ಟಾಭಿಷಿಕ್ತನಾಗಿ ಸಮಸ್ತ ಬ್ರಾಹ್ಮಣರನ್ನೂ ಮತ್ತು ಈಶ್ವರನನ್ನೂ ವಿಶೇಷವಾಗಿ ಪೂಜಿಸಿದನು.

೫೭. ಮತ್ತು ದಕ್ಷಯಜ್ಞ ವಿಧ್ವಂಸಕನಾದ ಶಂಕರನನ್ನು ಅಶ್ವಮೇಧ ಯಜ್ಞಾನುಷ್ಠಾನದಿಂದ ಪೂಜಿಸಿದನು. ಆ ಶ್ರೀರಾಮನಿಗೆ ಕುಶ ಎಂಬ ನಾಮದಿಂದ ಪ್ರಸಿದ್ಧಿಹೊಂದಿದ ಪುತ್ರನು ಹುಟ್ಟಿದನು.

೫೮. ಮತ್ತು ಸಮಸ್ತ ತತ್ತ್ವಾರ್ಥಗಳನ್ನು ಅರಿತವನೂ, ಸೂಕ್ಷ್ಮಬುದ್ಧಿಯುಳ್ಳವನೂ ಮತ್ತು ಮಹಾಭಾಗ್ಯಶಾಲಿಯೂ ಆದ ಲವ ಎಂಬ ಮತ್ತೊಬ್ಬ ಪುತ್ರನು ಹುಟ್ಟಿದನು. ಮುಂದೆ ಕುಶನಿಗೆ ಅತಿಥಿ ಎಂಬ ಪುತ್ರನೂ, ಅತಿಥಿಗೆ ನಿಷಧ ಎಂಬ ಪುತ್ರನೂ ಹುಟ್ಟಿದರು.

೫೯. ನಿಷಧನಿಗೆ ನಲನು ಪುತ್ರನಾಗಿದ್ದನು, ನಳನಿಗೆ ನಭಾ ಎಂಬ ಪುತ್ರನು ಹುಟ್ಟಿದನು, ನಭ ಎಂಬುವನಿಗೆ ಪುಂಡರೀಕಾಕ್ಷ ಎಂಬ ಕುಮಾರನು ಜನಿಸಿದನು, ಮತ್ತು ಪುಂಡರೀಕಾಕ್ಷನಿಗೆ ಕ್ಷೇಮಧನ್ವ ಎಂಬ ಮಗನಿದ್ದನು.

ತಸ್ಯ ಪುತ್ರೋಽಭವದ್ವೀರೋ ದೇವಾನೀಕಃ ಪ್ರತಾಪವಾನ್ ।
ಅಹೀನಗುಸ್ತಸ್ಯ ಸುತೋ ಮಹಸ್ವಾಂಸ್ತತ್ಸುತೋಽಭವತ್ ॥ ೬೦ ॥

ತಸ್ಮಾಚ್ಚಂದ್ರಾವಲೋಕಸ್ತು ತಾರಾಧೀಶಶ್ಚ ತತ್ಸುತಃ ।
ತಾರಾಧೀಶಾಚ್ಚಂದ್ರಗಿರಿರ್ಭಾನುವಿತ್ತಸ್ತತೋಽಭವತ್ ॥ ೬೧ ॥

ಶ್ರುತಾಯುರಭವತ್ತಸ್ಮಾದೇತೇ ಚೇಕ್ಷ್ವಾಕುವಂಶಜಾಃ ।
ಸರ್ವೇ ಪ್ರಾಧಾನ್ಯತಃ ಪ್ರೋಕ್ತಾಃ ಸಮಾಸೇನ ದ್ವಿಜೋತ್ತಮಾಃ ॥೬೨ ॥

ಯ ಇಮಂ ಶೃಣುಯಾನ್ನಿತ್ಯಮಿಕ್ಷ್ವಾಕೋರ್ವಂಶಮುತ್ತಮಮ್ ।
ಸರ್ವಪಾಪವಿನಿರ್ಮುಕ್ತೋ ದೇವಲೋಕೇ ಮಹೀಯತೇ ॥ ೬೩ ॥

ಇತಿ ಶ್ರೀ ಕೂರ್ಮಪುರಾಣೇ ಏಕವಿಂಶೋಽಧ್ಯಾಯಃ.

---

೬೦. ಕ್ಷೇಮಧನ್ವನಿಗೆ ಪ್ರತಾಪಶಾಲಿಯೂ, ಮಹಾವೀರನೂ ಆದ ದೇವಾನೀಕ ಎಂಬ ಪುತ್ರನೂ, ಅವನಿಗೆ ಅಹೀನಗು ಎಂಬ ಕುಮಾರನೂ ಮತ್ತು ಅವನಿಗೆ ಮಹಸ್ವಾನ್ ಎಂಬ ಸುತನೂ ಇದ್ದರು.

೬೧. ಮಹಸ್ವಂತನಿಗೆ ಚಂದ್ರಾವಲೋಕ ಎಂಬ ಕುಮಾರನೂ ಅವನಿಗೆ ತಾರಾಧೀಶ ಎಂಬ ಪುತ್ರನೂ, ಅವನಿಗೆ ಚಂದ್ರಗಿರಿ ಎಂಬ ಸುತನೂ ಮತ್ತು ಅವನಿಗೆ ಭಾನುವಿತ್ತ ಎಂಬ ಕುಮಾರನೂ ಜನಿಸಿದರು

೬೨. ಭಾನುವಿತ್ತನಿಂದ ಶ್ರುತಾಯು ಎಂಬ ಪುತ್ರನು ಜನಿಸಿದನು. ಬ್ರಾಹ್ಮಣೋತ್ತಮರೇ ! ಹೀಗೆ ಇಕ್ಷ್ವಾಕು ವಂಶದಲ್ಲಿ ಜನಿಸಿದ ಎಲ್ಲ ರಾಜರಲ್ಲಿ ಪ್ರಧಾನ ವ್ಯಕ್ತಿಗಳು ಸಂಗ್ರಹವಾಗಿ ನನ್ನಿಂದ ಹೇಳಲ್ಪಟ್ಟಿರುವರು.

೬೩. ಯಾವ ಮಾನವನು ಇಕ್ಷ್ವಾಕು ರಾಜನ ಉತ್ತಮವಾದ ಈ ವಂಶಾವಳಿಯನ್ನು ನಿತ್ಯದಲ್ಲಿ ಶ್ರವಣ ಮಾಡುವನೋ ಅವನು ಸರ್ವಪಾಪಗಳಿಂದ ನಿರ್ಮುಕ್ತನಾಗಿ ದೇವಲೋಕದಲ್ಲಿ ಪೂಜ್ಯತೆಯನ್ನು ಹೊಂದುತ್ತಾನೆ.

(ಕೂರ್ಮಪುರಾಣದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಸಮಾಪ್ತವು)

ಶ್ರೀಃ

# ಕೂರ್ಮಪುರಾಣಂ

## ದ್ವಾವಿಂಶೋಽಧ್ಯಾಯಃ

**ಸೂತ ಉವಾಚ :—**

ಐಲಃ ಪುರೂರವಾಶ್ಚಾಥ ರಾಜಾ ರಾಜ್ಯಮಪಾಲಯತ್ ।
ತಸ್ಯ ಪುತ್ರಾ ಬಭೂವುರ್ಹಿ ಷಡಿಂದ್ರಸಮತೇಜಸಃ ॥ ೧ ॥

ಆಯುರ್ಮಾಯುರಮಾಯುಶ್ಚ ವಿಶ್ವಾಯುಶ್ಚೈವ ವೀರ್ಯವಾನ್ ।
ಶತಾಯುಶ್ಚ ಶ್ರುತಾಯುಶ್ಚ ದಿವ್ಯಾಶ್ಚೈವೋರ್ವಶೀಸುತಾಃ ॥ ೨ ॥

ಆಯುಷಸ್ತನಯಾ ವೀರಾಃ ಪಂಚೈವಾಸನ್ ಮಹೌಜಸಃ ।
ಸ್ವರ್ಭಾನುತನಯಾಯಾಂ ವೈ ಪ್ರಭಾಯಾಮಿತಿ ನಃ ಶ್ರುತಮ್ ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯವು

೧. ಸೂತಮುನಿಯು ಹೀಗೆ ಮುಂದುವರಿಸಿದನು:— ಇಲಾಪುತ್ರನಾದ ಪುರೂರವರಾಜನು ರಾಜ್ಯವನ್ನು ಚೆನ್ನಾಗಿ ಪಾಲಿಸಿದನು. ಅವನಿಗೆ ದೇವೇಂದ್ರನಿಗೆ ತುಲ್ಯವಾದ ತೇಜಸ್ಸುಳ್ಳ ಆರುಮಂದಿ ಪುತ್ರರಿದ್ದರು.

೨. ಆ ಆರುಮಂದಿಯು ಆಯು, ಮಾಯು, ಅಮಾಯು, ವಿಶ್ವಾಯು, ಶತಾಯು ಮತ್ತು ಶ್ರುತಾಯು ಎಂದು ಕ್ರಮವಾಗಿ ನಾಮಾಂಕಿತರಾದವರೂ, ವೀರ್ಯವಂತರೂ, ಆಗಿ ಊರ್ವಶೀದೇವಿಯಲ್ಲಿ ಹುಟ್ಟಿದ ದಿವ್ಯಪುತ್ರರಾಗಿದ್ದರು.

೩. ಇವರಲ್ಲಿ ಆಯು ಎಂಬುವನಿಗೆ ಸ್ವರ್ಭಾನುವಿನ ಪುತ್ರಿಯಾದ ಪ್ರಭಾ ಎಂಬುವಳಲ್ಲಿ ಮಹಾತೇಜಸ್ವಿಗಳೂ, ವೀರರೂ, ಆದ ಐದು ಮಂದಿ ಪುತ್ರರಿದ್ದರೆಂದು ನಾವು ಶ್ರವಣಮಾಡಿರುವೆವು.

ನಹುಷಃ ಪ್ರಥಮಸ್ತೇಷಾಂ ಧರ್ಮಜ್ಞೋ ಲೋಕವಿಶ್ರುತಃ ।
ನಹುಷಸ್ಯ ತು ದಾಯಾದಾಃ ಪಂಚೇಂದ್ರೋಪಮತೇಜಸಃ ॥ ೪ ॥

ಉತ್ಪನ್ನಾಃ ಪಿತೃಕನ್ಯಾಯಾಂ ವಿರಜಾಯಾಂ ಮಹಾಬಲಾಃ ।
ಯಾತಿರ್ಯಯಾತಿಃ ಸಂಯಾತಿರಾಯಾತಿಃ ಪಂಚಮೋಽಶ್ವಕಃ ॥ ೫ ॥

ತೇಷಾಂ ಯಯಾತಿಃ ಪಂಚಾನಾಂ ಮಹಾಬಲಪರಾಕ್ರಮಃ ।
ದೇವಯಾನೀಮುಶನಸಃ ಸುತಾಂ ಭಾರ್ಯಾಮವಾಪ ಸಃ ॥ ೬ ॥

ಶರ್ಮಿಷ್ಠಾಮಾಸುರೀಂ ಚೈವ ತನಯಾಂ ವೃಷಪರ್ವಣಃ ।
ಯದುಂ ಚ ತುರ್ವಸುಂ ಚೈವ ದೇವಯಾನೀ ವ್ಯಜಾಯತ ॥ ೭ ॥

---

೪. ಅವರಲ್ಲಿ ಧರ್ಮಜ್ಞನೂ, ಲೋಕವಿಖ್ಯಾತನೂ ಆದ ನಹುಷನು ಪ್ರಥಮ ಪುತ್ರನಾಗಿದ್ದನು. ನಹುಷನಿಗೆ ಇಂದ್ರನಿಗೆ ತುಲ್ಯವಾದ ವಿಕ್ರಮವುಳ್ಳ ಐದುಮಂದಿ ಪುತ್ರರು ಜನಿಸಿದರು.

೫. ಪಿತೃದೇವತೆಗಳಿಗೆ ಕನ್ಯೆಯಾದ ವಿರಜಾ ಎಂಬಾಕೆಯಲ್ಲಿ ಮಹಾಬಲಿಷ್ಠರಾದ ನಹುಷ ಪುತ್ರರು ಹುಟ್ಟಿರುವರು. ಆ ಐದು ಮಂದಿಯು ಕ್ರಮವಾಗಿ ಯಾತಿ, ಯಯಾತಿ, ಸಂಯಾತಿ, ಆಯಾತಿ ಮತ್ತು ಅಶ್ವಕ ಎಂಬ ನಾಮಾಂಕಿತರಾಗಿದ್ದರು.

೬. ಆ ಐದು ಮಂದಿಯಲ್ಲಿ ಹೆಚ್ಚಾದ ಬಲ ಮತ್ತು ಪರಾಕ್ರಮಗಳಿಂದ ಕೂಡಿದ ಯಯಾತಿ ರಾಜನು ಶುಕ್ರಾಚಾರ್ಯನ ಕನ್ಯೆಯಾದ ದೇವಯಾನಿಯನ್ನು ಪತ್ನಿಯನ್ನಾಗಿ ಹೊಂದಿದನು.

೭. ಮತ್ತು ವೃಷಪರ್ವ ಎಂಬ ಅಸುರನ ಪುತ್ರಿಯಾದ ಶರ್ಮಿಷ್ಠಾ ಎಂಬ ಅಸುರ ಕನ್ಯೆಯನ್ನು ಪಾಣಿಗ್ರಹಣಮಾಡಿದನು. ಇವರಲ್ಲಿ ದೇವಯಾನಿಯು ಯದು ತುರ್ವಸು ಎಂಬ ಇಬ್ಬರು ಪುತ್ರರನ್ನು ಪ್ರಸವಿಸಿದಳು.

ದ್ರುಹ್ಯುಂ ಚಾನುಂ ಚ ಪೂರುಂ ಚ ಶರ್ಮಿಷ್ಠಾ ಚಾಪ್ಯಜೀಜನತ್ ।
ಸೋಽಭ್ಯಷಿಂಚದತಿಕ್ರಮ್ಯ ಜ್ಯೇಷ್ಠಂ ಯದುಮನಿಂದಿತಮ್ ॥ ೮ ॥

ಪೂರುಮೇವ ಕನೀಯಾಂಸಂ ಪಿತುರ್ವಚನಪಾಲಕಮ್ ।
ದಿಶಿ ದಕ್ಷಿಣಪೂರ್ವಸ್ಯಾಂ ತುರ್ವಸುಂ ಪುತ್ರಮಾದಿಶತ್ ॥ ೯ ॥

ದಕ್ಷಿಣಾಪರಯೋ ರಾಜಾ ಯದುಂ ಶ್ರೇಷ್ಠಂ ನ್ಯಯೋಜಯತ್ ।
ಪ್ರತೀಚ್ಯಾಮುತ್ತರಾಯಾಂ ಚ ದ್ರುಹ್ಯುಂ ಚಾನುಮಕಲ್ಪಯತ್॥ ೧೦ ॥

ತೈರಿಯಂ ಪೃಥಿವೀ ಸರ್ವಾ ಧರ್ಮತಃ ಪರಿಪಾಲಿತಾ ।
ರಾಜಾಪಿ ದಾರಸಹಿತೋ ವನಂ ಪ್ರಾಪ ಮಹಾಯಶಾಃ ॥ ೧೧ ॥

---

೮. ಶರ್ಮಿಷ್ಠಾದೇವಿಯು ದ್ರುಹ್ಯು, ಅನು ಮತ್ತು ಪೂರು ಎಂಬ ಮೂರು ಮಂದಿ ಪುತ್ರರನ್ನು ಹೊಂದಿದಳು. ಆ ಯಯಾತಿ ರಾಜನು ಜ್ಯೇಷ್ಠನೂ, ಪ್ರಶಸ್ತನೂ ಆದ ಯದು ಎಂಬ ಪುತ್ರನನ್ನು ಬಿಟ್ಟು ಕನಿಷ್ಠನಾದ ಪೂರುವಿಗೆ ಪಟ್ಟಾಭಿಷೇಕ ಮಾಡಿದನು.

೯. ತನ್ನ ಪುತ್ರರಲ್ಲಿ ಕಿರಿಯವನಾದರೂ ಪಿತ್ರಾಜ್ಞೆಯನ್ನು ಪಾಲಿಸುವ ಪೂರು ಎಂಬುವನಿಗೆ ರಾಜ್ಯವನ್ನು ಕೊಟ್ಟನು. ದಕ್ಷಿಣ ಮತ್ತು ಪೂರ್ವ ದಿಕ್ಕುಗಳ ಅಂತರಾಳ ದಿಕ್ಕಿನ ರಾಜ್ಯದಲ್ಲಿ ತುರ್ವಸು ಪುತ್ರನನ್ನು ನಿಯಮಿಸಿದನು.

೧೦. ದಕ್ಷಿಣ ಮತ್ತು ಪಶ್ಚಿಮಗಳ ಅಂತರಾಳ ರಾಜ್ಯದಲ್ಲಿ ಜ್ಯೇಷ್ಠನಾದ ಯದುವನ್ನು ನಿಯೋಜಿಸಿದನು. ಹಾಗೆ ಪಶ್ಚಿಮದಲ್ಲಿ ದ್ರುಹ್ಯು ಎಂಬ ಪುತ್ರನನೂ ಉತ್ತರದಲ್ಲಿ ಅನು ಎಂಬ ಪುತ್ರನನ್ನೂ ಪ್ರಭುವನ್ನಾಗಿ ಕಲ್ಪಿಸಿದನು.

೧೧. ಆ ಯಯಾತಿ ಪುತ್ರರಿಂದ ಸಮಸ್ತ ಭೂಮಿಯು ಧರ್ಮದಿಂದ ಪಾಲಿಸಲ್ಪಟ್ಟಿತು. ಆಗ ಮಹಾಯಶಸ್ವಿಯಾದ ಯಯಾತಿ ರಾಜನು ಪತ್ನಿಯೊಡನೆ ಅರಣ್ಯಕ್ಕೆ ಹೋದನು.

ಯದೋರಸ್ಯಭವನ್ ಪುತ್ರಾಃ ಪಂಚ ದೇವಸುತೋಪಮಾಃ ।
ಸಹಸ್ರಜಿತ್ತಥಾ ಶ್ರೇಷ್ಠಃ ಕ್ರೋಷ್ಟುರ್ನೀಲೋ ಜಿನೋ ರಘುಃ ॥ ೧೨ ॥

ಸಹಸ್ರಜಿತ್ಸುತಸ್ತದ್ವಚ್ಛತಜಿನ್ನಾಮ ಪಾರ್ಥಿವಃ ।
ಸುತಾಃ ಶತಜಿತೋಽಸ್ಯಾಸಂಸ್ತ್ರಯಃ ಪರಮಧಾರ್ಮಿಕಾಃ ॥ ೧೩ ॥

ಹೈಹಯಶ್ಚ ಹಯಶ್ಚೈವ ರಾಜಾ ವೇಣುಹಯಶ್ಚ ಯಃ ।
ಹೈಹಯಸ್ಯಾಭವತ್ಪುತ್ರೋ ಧರ್ಮ ಇತ್ಯಭಿವಿಶ್ರುತಃ ॥ ೧೪ ॥

ತಸ್ಯ ಪುತ್ರೋಽಭವದ್ವಿಪ್ರಾ ಧರ್ಮನೇತ್ರಃ ಪ್ರತಾಪವಾನ್ ।
ಧರ್ಮನೇತ್ರಸ್ಯ ಕೀರ್ತಿಸ್ತು ಸಂಜಿತಸ್ತತ್ಸುತೋಽಭವತ್ ॥ ೧೫ ॥

---

೧೨. ಯದುವಿಗೆ ದೇವಪುತ್ರರಿಗೆ ಸಮಾನರೂ ಶ್ರೇಷ್ಠರೂ ಆದ ಸಹಸ್ರಜಿತು, ಕ್ರೋಷ್ಟು, ನೀಲ, ಜಿನ ಮತ್ತು ರಘು ಎಂಬ ನಾಮಾಂಕಿತರಾದ ಐದು ಮಂದಿ ಪುತ್ರರು ಹುಟ್ಟಿದರು.

೧೩. ಇವರಲ್ಲಿ ಸಹಸ್ರಜಿತು ಎಂಬುದನಿಗೆ ಶತಜಿತು ಎಂಬ ರಾಜನು ಪುತ್ರನಾಗಿ ಹುಟ್ಟಿದನು. ಶತಜಿತು ಎಂಬುವನಿಗೆ ಧಾರ್ಮಿಕೋತ್ತಮರೆನಿಸಿದ ಮೂರು ಮಂದಿ ಪುತ್ರರಿದ್ದರು.

೧೪. ಆ ರಾಜಪುತ್ರರು ಹೈಹಯ, ಹಯ ಮತ್ತು ವೇಣುಹಯ ಎಂಬ ನಾಮಾಂಕಿತರಾಗಿದ್ದರು. ಇವರಲ್ಲಿ ಹೈಹಯ ಎಂಬುವನಿಗೆ ಧರ್ಮ ಎಂದು ಪ್ರಖ್ಯಾತನಾಗಿರುವ ಪುತ್ರನು ಜನಿಸಿದನು.

೧೫. ಮುನೀಶ್ವರರೇ! ಧರ್ಮನಿಗೆ ಪ್ರತಾಪಶಾಲಿಯಾದ ಧರ್ಮನೇತ್ರ ಎಂಬ ಪುತ್ರನಿದ್ದನು. ಧರ್ಮನೇತ್ರನಿಗೆ ಕೀರ್ತಿ ಎಂಬುವನೂ, ಕೀರ್ತಿಗೆ ಸಂಜಿತ ಎಂಬುವನೂ ಪುತ್ರರಾಗಿದ್ದರು.

ಮಹಿಷ್ಮಾಃ ಸಂಜಿತಸ್ಯಾಭೂದ್ಭದ್ರಶ್ರೇಣ್ಯಸ್ತದನ್ವಯಃ ।
ಭದ್ರಶ್ರೇಣ್ಯಸ್ಯ ದಾಯಾದೋ ದುರ್ದಮೋ ನಾಮ ಪಾರ್ಥಿವಃ ॥ ೧೬ ॥

ದುರ್ದಮಸ್ಯ ಸುತೋ ಧೀಮಾನಂಧಕೋ ನಾಮ ವೀರ್ಯವಾನ್ ।
ಅಂಧಕಸ್ಯ ತು ದಾಯಾದಾಶ್ಚತ್ವಾರೋ ಲೋಕಸಮ್ಮತಾಃ ॥ ೧೭ ॥

ಕೃತವೀರ್ಯಃ ಕೃತಾಗ್ನಿಶ್ಚ ಕೃತವರ್ಮಾ ಚ ತತ್ಸುತಃ ।
ಕೃತೌಜಾಶ್ಚ ಚತುರ್ಥೋಽಭೂತ್ಕಾರ್ತವೀರ್ಯಸ್ತಥಾರ್ಜುನಃ ॥ ೧೮ ॥

ಸಹಸ್ರಬಾಹುರ್ದ್ಯುತಿಮಾನ್ ಧನುರ್ವೇದವಿದಾಂ ವರಃ ।
ತಸ್ಯ ರಾಮೋಽಭವನ್ಮೃತ್ಯುರ್ಜಾಮದಗ್ನ್ಯೋ ಜನಾರ್ದನಃ ॥ ೧೯ ॥

---

೧೬. ಆ ಸಂಜಿತನಿಗೆ ಮಹಿಷ್ಮ ಎಂಬ ಪುತ್ರನೂ, ಅವನಿಗೆ ಭದ್ರಶ್ರೇಣ್ಯ ಎಂಬ ಪುತ್ರನೂ, ಅವನಿಗೆ ರಾಜನಾದ ದುರ್ದಮ ಎಂಬ ಪುತ್ರನೂ ಹುಟ್ಟಿದರು.

೧೭. ವೀರ್ಯಶಾಲಿಯೂ ಮಹಾಜ್ಞಾನಿಯೂ ಆದ ಅಂಧಕ ಎಂಬುವನು ದುರ್ದಮನಿಗೆ ಪುತ್ರನಾಗಿದ್ದನು. ಅಂಧಕನಿಗೆ ಲೋಕದಲ್ಲಿ ಎಲ್ಲರ ಪ್ರೀತಿಯನ್ನು ಗಳಿಸಿದ ನಾಲ್ಕು ಮಂದಿ ಪುತ್ರರು ಸಂಭವಿಸಿದರು.

೧೮. ಅವರು ಕೃತವೀರ್ಯ, ಕೃತಾಗ್ನಿ, ಕೃತವರ್ಮಾ, ಮತ್ತು ಕೃತೌಜ ಎಂಬ ಪವಿತ್ರನಾಮಾಂಕಿತರಾಗಿದ್ದರು. ಕೃತವೀರ್ಯನ ಪುತ್ರನು ಅರ್ಜುನನೆಂದು ಪ್ರಸಿದ್ಧನಾದನು.

೧೯. ಆ ಕಾರ್ತವೀರ್ಯಾರ್ಜುನನು ಸಹಸ್ರಬಾಹುಗಳಿಂದ ಕೂಡಿದವನೂ, ಮಹಾತೇಜಸ್ವಿಯೂ ಮತ್ತು ಧನುರ್ವೇದ ಪಾರಂಗತನೂ ಆಗಿದ್ದನು. ಅವನಿಗೆ ಮಹಾವಿಷ್ಣುವಿನ ಅವತಾರವಾದ ಜಮದಗ್ನಿ ಪುತ್ರನಾದ ಪರಶುರಾಮನು ಮೃತ್ಯುವಾದನು.

ತಸ್ಯ ಪುತ್ರಶತಾನ್ಯಾಸನ್ ಪಂಚ ತತ್ರ ಮಹಾರಥಾಃ ।
ಕೃತಾಸ್ತ್ರಾ ಬಲಿನಃ ಶೂರಾ ಧರ್ಮಾತ್ಮಾನೋ ಮನಸ್ವಿನಃ ॥ ೨೦ ॥

ಶೂರಶ್ಚ ಶೂರಸೇನಶ್ಚ ಕೃಷ್ಣೋ ಧೃಷ್ಣಸ್ತಥೈವ ಚ ।
ಜಯಧ್ವಜಶ್ಚ ಬಲವಾನ್ನಾರಾಯಣಪರೋ ನೃಪಃ ॥ ೨೧ ॥

ಶೂರಸೇನಾದಯಃ ಸರ್ವೇ ಚತ್ವಾರಃ ಪ್ರಥಿತೌಜಸಃ ।
ರುದ್ರಭಕ್ತಾ ಮಹಾತ್ಮಾನಃ ಪೂಜಯಂತಿ ಸ್ಮ ಶಂಕರಮ್ ॥ ೨೨ ॥

ಜಯಧ್ವಜಸ್ತು ಮತಿಮಾನ್ ದೇವಂ ನಾರಾಯಣಂ ಹರಿಮ್ ।
ಜಗಾಮ ಶರಣಂ ವಿಷ್ಣುಂ ದೈವತಂ ಧರ್ಮತತ್ಪರಃ ॥ ೨೩ ॥

---

೨೦. ಆ ಅರ್ಜುನನಿಗೆ ಒಂದು ನೂರು ಮಂದಿ ಪುತ್ರರಿದ್ದರು. ಅವರಲ್ಲಿ ಐದು ಮಂದಿ ಮಾತ್ರ ಅಸ್ತ್ರವಿದ್ಯಾವಿದರೂ, ಬಲಿಷ್ಠರೂ, ಶೂರರೂ, ಧರ್ಮಾತ್ಮಕರೂ, ಮತ್ತು ಮಹಾಮುನಿಗಳೂ ಆಗಿ ಪ್ರಧಾನರಾಗಿದ್ದರು.

೨೧. ಅವರು ಶೂರ, ಶೂರಸೇನ. ಕೃಷ್ಣ, ಧೃಷ್ಣ ಮತ್ತು ಜಯಧ್ವಜ ಎಂಬ ನಾಮಾಂಕಿತರಾಗಿದ್ದರು. ಅವರಲ್ಲಿ ಬಲಿಷ್ಠನಾದ ಜಯಧ್ವಜರಾಜನು ನಾರಾಯಣ ಭಕ್ತನಾಗಿದ್ದನು.

೨೨. ಶೂರಸೇನ ಮುಂತಾದ ಅಗ್ರಜರಾದ ನಾಲ್ಕುಮಂದಿಯು ಮಹಾತ್ಮರೂ ಪ್ರಸಿದ್ಧವಾದ ತೇಜಸ್ಸುಳ್ಳವರೂ ಮತ್ತು ರುದ್ರಭಕ್ತರೂ ಆಗಿ ಶಂಕರನನ್ನು ಪೂಜಿಸುತ್ತಿದ್ದರು.

೨೩. ಧರ್ಮಮಾರ್ಗತತ್ಪರನೂ, ವಿವೇಕಿಯೂ ಆದ ಜಯಧ್ವಜರಾಜನು ಪಾಪಭಂಜಕನೂ, ಸಾಗರಶಾಯಿಯೂ ಆದ ಮಹಾವಿಷ್ಣುವನ್ನು ಪರಮದೈವವೆಂದು ಶರಣುಹೊಂದಿದನು.

ತಮೂಚುರಿತರೇ ಪುತ್ರಾ ನಾಯಂ ಧರ್ಮಸ್ತವಾನಘ ।
ಈಶ್ವರಾರಾಧನರತಃ ಪಿತಾಸ್ಮಾಕಮಿತಿ ಶ್ರುತಿಃ ॥ ೨೪ ॥

ತಾನಬ್ರವೀನ್ಮಹಾತೇಜಾ ಹ್ಯೇಷ ಧರ್ಮಃ ಪರೋ ಮಮ ।
ವಿಷ್ಣೋರಂಶೇನ ಸಂಭೂತಾ ರಾಜಾನೋ ಯೇ ಮಹೀತಲೇ ॥ ೨೫ ॥

ರಾಜ್ಯಂ ಪಾಲಯಿತಾವಶ್ಯಂ ಭಗವಾನ್ ಪುರುಷೋತ್ತಮಃ ।
ಪೂಜನೀಯೋ ಜಿತೋ ವಿಷ್ಣುಃ ಪಾಲಕೋ ಜಗತಾಂ ಹರಿಃ ॥ ೨೬ ॥

ಸಾತ್ವಿಕೀ ರಾಜಸೀ ಚೈವ ತಾಮಸೀ ಚ ಸ್ವಯಂ ಪ್ರಭುಃ ।
ತಿಸ್ರಸ್ತು ಮೂರ್ತಯಃ ಪ್ರೋಕ್ತಾಃ ಸೃಷ್ಟಿಸ್ಥಿತ್ಯಂತಹೇತವಃ ॥ ೨೭ ॥

---

೨೪. ಇತರ ಸಹೋದರರು ಜಯಧ್ವಜನಿಗೆ ಹೀಗೆಂದು ಹೇಳಿದರು—ಸಾಧುವೇ ! ನಮ್ಮ ಜನಕನು ಈಶ್ವರಾರಾಧನದಲ್ಲಿ ನಿರತನೆಂದು ಕೇಳಿರುವೆವು. ಈ ವಿಷ್ಣುವಿನ ಆರಾಧನವು ನಿನಗೆ ಧರ್ಮವಲ್ಲ.

೨೫. ಆಗ ಮಹಾತೇಜಸ್ವಿಯಾದ ಜಯಧ್ವಜರಾಜನು ಸಹೋದರರಿಗೆ ಹೀಗೆಂದು ಉತ್ತರ ಹೇಳಿದನು—ಇದು ನನಗೆ ಉತ್ತಮ ಧರ್ಮವಾಗಿರುವುದು. ಭೂಮಂಡಲದಲ್ಲಿ ರಾಜರಾಗಿರುವವರು ಮಹಾವಿಷ್ಣುವಿನ ಅಂಶದಿಂದ ಜನ್ಮವೆತ್ತಿರುವರು.

೨೬. ರಾಜ್ಯವನ್ನು ಪಾಲಿಸುವವನು ನಿಜವಾಗಿ ಪೂಜ್ಯನಾದ ಮಹಾವಿಷ್ಣುವೇ ಆಗಿದ್ದಾನೆ. ಆದ್ದರಿಂದ ಜಯಶಾಲಿಯೂ, ವ್ಯಾಪಕನೂ, ಜಗತ್ಪಾಲಕನೂ ಆದ ಶ್ರೀಹರಿಯು ಅವಶ್ಯವಾಗಿ ಪೂಜಿಸಲ್ಪಡಬೇಕು.

೨೭. ಪ್ರಭುವಾದ ಪರಮಾತ್ಮನಿಗೆ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿ ಸತ್ತ್ವ, ರಜಸ್ಸು ಮತ್ತು ತಮೋಗುಣಗಳಿಂದ ಪೂರ್ಣರಾದ ಮೂರು ಮೂರ್ತಿಗಳು ಇವೆ ಎಂದು ಕೀರ್ತಿಸಲ್ಪಟ್ಟಿದೆ.

ಸತ್ತ್ವಾತ್ಮಾ ಭಗವಾನ್ ವಿಷ್ಣುಃ ಸಂಸ್ಥಾಪಯತಿ ಸರ್ವದಾ ।
ಸೃಜೇದ್ಬ್ರಹ್ಮಾ ರಜೋಮೂರ್ತಿಃ ಸಂಹರೇತ್ತಾಮಸೀ ಹರಃ ॥ ೨೮ ॥

ತಸ್ಮಾನ್ಮಹೀಪತೀನಾಂ ತು ರಾಜ್ಯಂ ಪಾಲಯತಾಮಿದಮ್ ।
ಆರಾಧ್ಯೋ ಭಗವಾನ್ ವಿಷ್ಣುಃ ಕೇಶವಃ ಕೇಶಿಮರ್ದನಃ ॥ ೨೯ ॥

ನಿಶಮ್ಯ ತಸ್ಯ ವಚನಂ ಭ್ರಾತರೋಽನ್ಯೇ ಮನಸ್ವಿನಃ ।
ಪ್ರೋಚುಃ ಸಂಹಾರಕೋ ರುದ್ರಃ ಪೂಜನೀಯೋ ಮುಮುಕ್ಷುಭಿಃ॥೩೦॥

ಅಯಂ ಹಿ ಭಗವಾನ್ ರುದ್ರಃ ಸರ್ವಂ ಜಗದಿದಂ ಶಿವಃ ।
ತಮೋಗುಣಂ ಸಮಾಶ್ರಿತ್ಯ ಕಾಲಾಂತೇ ಸಂಹರೇತ್ ಪ್ರಭುಃ ॥ ೩೧ ॥

---

೨೮. ಭಗವಂತನಾದ ಮಹಾವಿಷ್ಣುವು ಸತ್ತ್ವಗುಣ ಮಯನಾಗಿ ಯಾವಾಗಲೂ ಪ್ರಪಂಚವನ್ನು ಪಾಲಿಸುತ್ತಾನೆ. ರಜೋಮೂರ್ತಿಯಾದ ಬ್ರಹ್ಮನು ಜಗತ್ತನ್ನು ನಿರ್ಮಿಸುತ್ತಾನೆ. ಮತ್ತು ತಮೋಗುಣಮೂರ್ತಿಯಾದ ಈಶ್ವರನು ಸಂಹರಿಸುತ್ತಾನೆ.

೨೯. ಆದುದರಿಂದ ರಾಜ್ಯದ ಪಾಲನಾಧಿಕಾರವುಳ್ಳ ರಾಜರಿಗೆ ಕೇಶಿರಾಕ್ಷಸನನ್ನು ಕೊಂದಿರುವನೂ, ಭಗವಂತನೂ, ಸರ್ವವ್ಯಾಪಕನೂ ಆದ ಮಹಾವಿಷ್ಣುವು ಪೂಜ್ಯನಾಗಿರುವನು.

೩೦. ಅತಿಮಾನಿಗಳಾದ, ಇತರ ಸಹೋದರರು ಜಯಧ್ವಜನ ವಚನಗಳನ್ನು ಕೇಳಿ ಸಂಹಾರಮೂರ್ತಿಯಾದ, ರುದ್ರದೇವನು ಮುಮುಕ್ಷುಜನರಿಂದ ಪೂಜಿಸಲ್ಪಡಬೇಕೆಂದು ಹೇಳಿದರು.

೩೧. ಭಗವಂತನೂ, ಮಂಗಳಕರನೂ, ಸರ್ವಸಮರ್ಥನೂ ಆದ ಈ ರುದ್ರಮೂರ್ತಿಯು ಕಲ್ಪಾಂತ ಕಾಲದಲ್ಲಿ ತಮೋಗುಣವನ್ನು ಆಶ್ರಯಿಸಿ ಸಮಸ್ತ ಪ್ರಪಂಚವನ್ನು ಸಂಹರಿಸುವನು.

ಯಾ ಸಾ ಘೋರತಮಾ ಮೂರ್ತಿರಸ್ಯ ತೇಜೋಮಯೀ ಪರಾ ।
ಸಂಹರೇದ್ವಿದ್ಯಯಾ ಪೂರ್ವಂ ಸಂಸಾರಂ ಶೂಲಭೃತ್ತಯಾ ॥ ೩೨ ॥

ತತಸ್ತಾನಬ್ರವೀದ್ರಾಜಾ ವಿಚಿಂತ್ಯಾಸೌ ಜಯಧ್ವಜಃ ।
ಸತ್ತ್ವೇನ ಮುಚ್ಯತೇ ಜಂತುಃ ಸತ್ತ್ವಾತ್ಮಾ ಭಗವಾನ್ ಹರಿಃ ॥ ೩೩ ॥

ತಮೂಚುರ್ಭ್ರಾತರೋ ರುದ್ರಃ ಸೇವಿತಃ ಸಾತ್ತ್ವಿಕೈರ್ಜನೈಃ ।
ಮೋಚಯೇತ್ಸತ್ತ್ವಸಂಯುಕ್ತಃ ಪೂಜಯೇತ್ ಸತತಂ ಹರಮ್ ॥೩೪॥

ಅಥಾಬ್ರವೀದ್ರಾಜಪುತ್ರಃ ಪ್ರಹಸನ್ ವೈ ಜಯಧ್ವಜಃ ।
ಸ್ವಧರ್ಮೋ ಮುಕ್ತಯೇ ಯುಕ್ತೋ ನಾನ್ಯೋ ಮುನಿಭಿರಿಷ್ಯತೇ ॥೩೫॥

---

೩೨. ಶೂಲಧಾರಿಯಾದ ಈ ಶಂಕರನ ತೇಜೋಮಯವೂ, ಅತ್ಯಂತ ಘೋರ ರೂಪವೂ, ಆದ ಆಯಾಯ ದಿವ್ಯಮೂರ್ತಿಯು ಆತ್ಮ ವಿದ್ಯೆಯಿಂದ ಮೊದಲು ಸಂಸಾರ ದುಃಖವನ್ನು ಸಂಹರಿಸುವುದು.

೩೩. ಆಗ ಈ ಜಯಧ್ವಜರಾಜನು ಮತ್ತೆ ಯೋಚಿಸಿ ಸಹೋದರರಿಗೆ ಹೀಗೆಂದು ಹೇಳಿದನು– ಪ್ರಾಣಿಯು ಸತ್ತ್ವಗುಣದಿಂದ ಮುಕ್ತಿಯನ್ನು ಹೊಂದು ವನು, ಭಗವಂತನಾದ ಶ್ರೀಹರಿಯು ಸತ್ತ್ವಗುಣ ಪೂರ್ಣನಾಗಿರುವನು.

೩೪. ಆಗ ಸಹೋದರರು ಸಾತ್ವಿಕರಾದ ಜನರಿಂದ ಸೇವಿಸಲ್ಪಟ್ಟ ರುದ್ರನು ಭಕ್ತಜನರಿಗೆ ಮುಕ್ತಿಯನ್ನು ಕೊಡುವವನಾದ್ದರಿಂದ ಸಂತತವಾಗಿ ಸತ್ತ್ವಗುಣದಿಂದ ಕೂಡಿ ಈಶ್ವರನನ್ನು ಪೂಜಿಸಬೇಕು, ಎಂದು ಹೇಳಿದರು.

೩೫. ಮತ್ತೆ ರಾಜಪುತ್ರನಾದ ಜಯಧ್ವಜನು ಸಹೋದರರನ್ನು ಕುರಿತು ನಗುತ್ತ ಹೀಗೆ ನುಡಿದನು--ಮುಕ್ತಿಪ್ರಾಪ್ತಿಗೆ ಸ್ವಧರ್ಮಾನುಷ್ಠಾನವು ಯೋಗ್ಯ ವಾದ ಸಾಧನವು. ಅದನ್ನು ಬಿಟ್ಟು ಮತ್ತೊಂದು ಸಾಧನವಿಲ್ಲ ಎಂದು ಮುನಿಗಳಿಂದ ಹೇಳಲ್ಪಟ್ಟಿದೆ.

ತಥಾ ಚ ವೈಷ್ಣವೀಂ ಶಕ್ತಿಂ ನೃಪಾಣಾಂ ದಧತಾಂ ಸದಾ ।
ಆರಾಧನಂ ಪರೋ ಧರ್ಮೋ ಮುರಾರೇರಮಿತೌಜಸಃ ॥ ೩೬ ॥

ತಮಬ್ರವೀದ್ರಾಜಪುತ್ರಃ ಕೃಷ್ಣೋ ಮತಿಮತಾಂ ವರಃ ।
ಯದರ್ಜುನೋಽಸ್ಮಜ್ಜನಕಃ ಸ ಧರ್ಮಂ ಕೃತವಾನಿತಿ ॥ ೩೭ ॥

ಏವಂ ವಿವಾದೇ ವಿತತೇ ಶೂರಸೇನೋಽಬ್ರವೀದ್ವಚಃ ।
ಪ್ರಮಾಣಮೃಷಯೋ ಹ್ಯತ್ರ ಬ್ರೂಯುಸ್ತೇ ಯತ್ತಥೈವ ತತ್ ॥ ೩೮ ॥

ತತಸ್ತೇ ರಾಜಶಾರ್ದೂಲಾಃ ಪಪ್ರಚ್ಛುರ್ಬ್ರಹ್ಮವಾದಿನಃ ।
ಗತ್ವಾ ಸರ್ವೇ ಸುಸಂರಬ್ಧಾಃ ಸಪ್ತರ್ಷೀಣಾಂ ತದಾಶ್ರಮಮ್ ॥ ೩೯ ॥

---

೩೬. ಹೀಗೆಂದ ಬಳಿಕ ವಿಷ್ಣುವಿನ ಅಂಶ ಶಕ್ತಿಯನ್ನು ಧರಿಸಿ ರಾಜ್ಯಪಾಲಕರಾದ ರಾಜರಿಗೆ ಅಪಾರ ಪ್ರಭಾವವುಳ್ಳ ಶ್ರೀಮನ್ನಾರಾಯಣನ ಆರಾಧನವು ಯಾವಾಗಲೂ ಪರಮಧರ್ಮವಾಗಿರುವುದು.

೩೭. ಆಗ ರಾಜಪುತ್ರನೂ ವಿವೇಕಿಗಳಲ್ಲಿ ಶ್ರೇಷ್ಠನೂ ಆದ ಕೃಷ್ಣ ಎಂಬುವನು ಅಗ್ರಜನಿಗೆ ಹೇಳಿದನು—ನಮ್ಮ ಜನಕನಾದ ಕಾರ್ತವೀರ್ಯಾರ್ಜುನನು ಧರ್ಮವನ್ನು ಮಾಡಿರುವನಲ್ಲವೇ.

೩೮. ಈ ರೀತಿಯಾಗಿ ಸಹೋದರರಿಗೆ ಮಹಾವಿವಾದವು ಬೆಳೆಯುತ್ತಿರಲು ಶೂರಸೇನನು ಈ ವಚನವನ್ನು ಹೇಳಿದನು. ಈ ವಿಷಯದಲ್ಲಿ ಮಹರ್ಷಿಗಳು ಪ್ರಮಾಣಭೂತರಾಗಿರುವರು, ಅವರು ಏನು ಹೇಳುವರೋ ಅದು ಸತ್ಯವು.

೩೯. ತರುವಾಯ ಆ ರಾಜಶ್ರೇಷ್ಠರೆಲ್ಲರೂ ಅಧಿಕವಾದ ಆಗ್ರಹ ಬುದ್ಧಿಯುಳ್ಳವರಾಗಿ ಸಪ್ತರ್ಷಿಗಳ ಆಶ್ರಮಕ್ಕೆ ಹೋಗಿ ಅಲ್ಲಿದ್ದ ಬ್ರಹ್ಮವಾದಿಗಳಾದ ಮಹರ್ಷಿಗಳನ್ನು ಕುರಿತು ಪ್ರಶ್ನಿಸಿದರು.

ತಾನಬ್ರುವಂಸ್ತೇ ಮುನಯೋ ವಸಿಷ್ಠಾದ್ಯಾ ಯಥಾರ್ಥತಃ ।
ಯಾ ಯಸ್ಯಾಭಿಮತಾ ಪುಂಸಃ ಸಾ ಹಿ ತಸ್ಯೈವ ದೇವತಾ ॥ ೪೦ ॥

ಕಿಂತು ಕಾರ್ಯವಿಶೇಷೇಣ ಪೂಜಿತಾ ಚೇಷ್ಟದಾ ನೃಣಾಮ್ ।
ವಿಶೇಷಾತ್ಸರ್ವದಾ ನಾಯಂ ನಿಯಮೋ ಹ್ಯನ್ಯಥಾ ನೃಪಾಃ ॥ ೪೧ ॥

ನೃಪಾಣಾಂ ದೈವತಂ ವಿಷ್ಣುಸ್ತಥೇಶಶ್ಚ ಪುರಂದರಃ ।
ವಿಪ್ರಾಣಾಮಗ್ನಿರಾದಿತ್ಯೋ ಬ್ರಹ್ಮಾ ಚೈವ ಪಿನಾಕಧೃಕ್ ॥ ೪೨ ॥

ದೇವಾನಾಂ ದೈವತಂ ವಿಷ್ಣುರ್ದಾನವಾನಾಂ ತ್ರಿಶೂಲಧೃಕ್ ।
ಗಂಧರ್ವಾಣಾಂ ತಥಾ ಸೋಮೋ ಯಕ್ಷಾಣಾಮಪಿ ಕಥ್ಯತೇ ॥ ೪೩ ॥

ವಿದ್ಯಾಧರಾಣಾಂ ವಾಗ್ದೇವೀ ಸಿದ್ಧಾನಾಂ ಭಗವಾನ್ ಹರಿಃ ।
ರಕ್ಷಸಾಂ ಶಂಕರೋ ರುದ್ರಃ ಕಿನ್ನರಾಣಾಂ ಚ ಪಾರ್ವತೀ ॥ ೪೪ ॥

---

೪೦. ಆಗ ವಸಿಷ್ಠ ಮುಂತಾದ ಸಪ್ತರ್ಷಿಗಳು ಅವರನ್ನು ಕುರಿತು ಯಥಾರ್ಥವಾದ ಉತ್ತರವನ್ನು ಹೇಳಿದರು. ಯಾವ ಮಾನವನಿಗೆ ಯಾವ ದೇವತಾ ಮೂರ್ತಿಯು ಅಭಿಮತವಾಗಿರುವುದೋ ಅವನಿಗೆ ಆ ಮೂರ್ತಿಯೇ ದೇವತೆಯು.

೪೧. ಆದರೆ ಕಾರ್ಯವಿಶೇಷಗಳ ಪ್ರಸಂಗದಿಂದ ವಿಶೇಷವಾಗಿ ಪೂಜಿಸಲ್ಪಟ್ಟ ಮತ್ತಾವ ದೇವತೆಯೂ ಮನುಷ್ಯರಿಗೆ ಇಷ್ಟವನ್ನು ಕೊಡುವುದು. ಆಗ ಒಂದು ವಿಶೇಷವಾದ ನಿಯಮವು ಇಲ್ಲ.

೪೨. ಆದುದರಿಂದ ರಾಜರಿಗೆ ವಿಷ್ಣು ಈಶ್ವರ ಮತ್ತು ಇಂದ್ರನೂ ಕೂಡ ಪೂಜ್ಯದೇವತೆಗಳು. ಹಾಗು ವಿಪ್ರರಿಗೆ ಅಗ್ನಿ, ಆದಿತ್ಯ, ಬ್ರಹ್ಮ ಮತ್ತು ಪಿನಾಕಾಯುಧ ಧಾರಿಯಾದ ಮಹೇಶ್ವರನು ಪೂಜ್ಯದೇವತೆಗಳು.

೪೩. ದೇವತೆಗಳಿಗೆ ವಿಷ್ಣುವೂ, ದಾನವರಿಗೆ ತ್ರಿಶೂಲಧಾರಿಯಾದ ಈಶ್ವರನೂ ಗಂಧರ್ವ-ಯಕ್ಷರಿಗೆ ಚಂದ್ರನೂ, ಪೂಜ್ಯದೇವತೆಗಳೆಂದು ವರ್ಣಿಸಲ್ಪಟ್ಟಿರುವರು.

೪೪. ಮತ್ತು ವಿದ್ಯಾಧರರಿಗೆ ವಾಗ್ದೇವತೆಯು ಪೂಜ್ಯಳು. ಸಿದ್ಧರಿಗೆ ಭಗವಂತನಾದ ಹರಿಯು ಪೂಜ್ಯನು. ರಾಕ್ಷಸರಿಗೆ ಸುಖಕರನಾದ ರುದ್ರಮೂರ್ತಿಯು ಪೂಜ್ಯನು. ಮತ್ತು ಕಿನ್ನರರಿಗೆ ಪಾರ್ವತೀದೇವಿಯು ಪೂಜ್ಯಳು.

ಋಷೀಣಾಂ ಭಗವಾನ್ ಬ್ರಹ್ಮಾ ಮಹಾದೇವಸ್ತ್ರಿಶೂಲಭೃತ್ ।
ಮಾನ್ಯಾ ಸ್ತ್ರೀಣಾಮುಮಾ ದೇವೀ ತಥಾ ವಿಷ್ಣ್ವೀಶಭಾಸ್ಕರಾಃ ॥ ೪೫ ॥

ಗೃಹಸ್ಥಾನಾಂ ಚ ಸರ್ವೇ ಸ್ಯುರ್ಬ್ರಹ್ಮ ವೈ ಬ್ರಹ್ಮಚಾರಿಣಾಮ್ ।
ವೈಖಾನಸಾನಾಮರ್ಕಃ ಸ್ಯಾದ್ಯತೀನಾಂ ಚ ಮಹೇಶ್ವರಃ ॥ ೪೬ ॥

ಭೂತಾನಾಂ ಭಗವಾನ್ ರುದ್ರಃ ಕೂಷ್ಮಾಂಡಾನಾಂ ವಿನಾಯಕಃ ।
ಸರ್ವೇಷಾಂ ಭಗವಾನ್ ಬ್ರಹ್ಮಾ ದೇವದೇವಃ ಪ್ರಜಾಪತಿಃ ॥ ೪೭ ॥

ಇತ್ಯೇವಂ ಭಗವಾನ್ ಬ್ರಹ್ಮಾ ಸ್ವಯಂ ದೇವೋ ಹ್ಯಭಾಷತ ।
ತಸ್ಮಾಜ್ಜಯಧ್ವಜೋ ನೂನಂ ವಿಷ್ಣ್ವಾರಾಧನಮರ್ಹತಿ ॥ ೪೮ ॥

---

೪೫. ಋಷಿಗಳಿಗೆ ಪೂಜ್ಯನಾದ ಬ್ರಹ್ಮದೇವನೂ, ತ್ರಿಶೂಲಧಾರಿಯಾದ ಮಹೇಶ್ವರನೂ ಪೂಜ್ಯರಾಗಿರುವರು. ಸ್ತ್ರೀಯರಿಗೆ ವಿಷ್ಣು, ಈಶ್ವರ, ಸೂರ್ಯ ಮತ್ತು ಉಮಾದೇವಿಯು ಮಾನ್ಯದೇವತೆಗಳಾಗಿರುವರು.

೪೬. ಗ್ರಹಸ್ಥಾಶ್ರಮಿಗಳಿಗೆ ಸರ್ವದೇವತೆಗಳೂ ಪೂಜ್ಯರು. ಬ್ರಹ್ಮಚಾರಿಗಳಿಗೆ ವೇದರೂಪವಾದ ಶಬ್ಧಬ್ರಹ್ಮವು ಸೇವ್ಯವು. ವಾನಪ್ರಸ್ಥಾಶ್ರಮಿಗಳಿಗೆ ಸೂರ್ಯನು ಮಾನ್ಯನು ಮತ್ತು ಯತಿಗಳಿಗೆ ಈಶ್ವರನು ಉಪಾಸ್ಯನಾಗಿರುವನು.

೪೭. ಭೂತಗಣಗಳಿಗೆ ಮಹಿಮೆಯಿಂದ ಕೂಡಿದ ರುದ್ರನೂ, ಕೂಷ್ಮಾಂಡ ಗಣಗಳಿಗೆ ವಿನಾಯಕನೂ ಪೂಜ್ಯದೇವತೆಗಳು. ಮತ್ತು ಸಮಸ್ತ ಪ್ರಜೆಗಳಿಗೂ ಭಗವಂತನೂ, ದೇವೋತ್ತಮನೂ ಮತ್ತು ಪ್ರಜಾಪಾಲಕನೂ ಆದ ಬ್ರಹ್ಮದೇವನು ಪೂಜ್ಯನಾಗಿರುವನು.

೪೮. ಈ ರೀತಿಯಾಗಿ ಷಡ್ಗುಣೈಶ್ವರ್ಯಸಂಪನ್ನನಾದ ಬ್ರಹ್ಮದೇವನು ತಾನಾಗಿ ಉಪದೇಶಿಸಿರುವನು. ಆದುದರಿಂದ ಈ ಜಯಧ್ವಜರಾಜನು ನಿಜವಾಗಿಯೂ ಮಹಾವಿಷ್ಣುವಿನ ಆರಾಧನವನ್ನು ನೆರವೇರಿಸಲು ಅರ್ಹನಾಗಿದ್ದಾನೆ.

ಕಿಂ ತು ರುದ್ರೇಣ ತಾದಾತ್ಮ್ಯಂ ಬುದ್ಧ್ವಾ ಪೂಜ್ಯೋ ಹರಿರ್ನರೈಃ ।
ಅನ್ಯಥಾ ನೃಪತೇಃ ಶತ್ರುಂ ನ ಹರಿಃ ಸಂಹರೇದ್ಯತಃ ॥ ೪೯ ॥

ಸಂಪ್ರಣಮ್ಯಾಥ ತೇ ಜಗ್ಮುಃ ಪುರೀಂ ಪರಮಶೋಭನಾಮ್ ।
ಪಾಲಯಾಂಚಕ್ರಿರೇ ಪೃಥ್ವೀಂ ಜಿತ್ವಾ ಸರ್ವಾನ್ ರಿಪೂನ್ ರಣೇ ॥೫೦॥

ತತಃ ಕದಾಚಿದ್ವಿಪ್ರೇಂದ್ರಾ ವಿದೇಹೋ ನಾಮ ದಾನವಃ ।
ಭಿಷಣಃ ಸರ್ವಸತ್ತ್ವಾನಾಂ ಪುರೀಂ ತೇಷಾಂ ಸಮಾಯಯೌ ॥ ೫೧ ॥

ದಂಷ್ಟ್ರಾಕರಾಲೋ ದೀಪ್ತಾತ್ಮಾ ಯುಗಾಂತದಹನೋಪಮಃ ।
ಶೂಲಮಾದಾಯ ಸೂರ್ಯಾಭಂ ನಾದಯನ್ ವೈ ದಿಶೋ ದಶ ॥ ೫೨ ॥

---

೪೯. ಆದರೆ ಮಾನವರಿಂದ ಶ್ರೀಹರಿಯು ರುದ್ರದೇವನತಾದಾತ್ಮ್ಯದಿಂದ ಇರುವನೆಂದು ತಿಳಿದು ಪೂಜಿಸಲ್ಪಡಬೇಕು. ಹಾಗಿಲ್ಲದಿದ್ದರೆ ರಾಜನ ಶತ್ರುವನ್ನು ಶ್ರೀ ಹರಿಯು ಸಂಹಾರ ಮಾಡುವುದಿಲ್ಲ.

೫೦. ತರುವಾಯ ಅವರೆಲ್ಲರೂ ಮುನಿಜನರನ್ನು ವಂದಿಸಿ ಹೆಚ್ಚುಕಲ್ಯಾಣ ಮಯವಾಗಿರುವ ತಮ್ಮ ನಗರಕ್ಕೆ ಹೊರಟುಹೋದರು. ಮತ್ತು ರಣರಂಗದಲ್ಲಿ ಸಮಸ್ತ ಶತ್ರುಗಳನ್ನು ನಿಗ್ರಹಿಸಿ ಪೃಥಿವಿಯನ್ನು ಧರ್ಮದಿಂದ ಪಾಲಿಸಿದರು.

೫೧. ವಿಪ್ರೋತ್ತಮರೆ! ಅನಂತರದಲ್ಲಿ ಒಂದು ಸಮಯದಲ್ಲಿ ಸಮಸ್ತ ಪ್ರಾಣಿಗಳಿಗೆ ಭಯವನ್ನು ಉಂಟುಮಾಡುವ ವಿದೇಹ ಎಂಬ ನಾಮಾಂಕಿತನಾದ ದಾನವನು ಆ ರಾಜರ ನಗರಕ್ಕೆ ಬಂದನು.

೫೨. ಕೋರೆಹಲ್ಲುಗಳಿಂದ ಕರಾಲನೂ, ಜ್ವಲಿಸುತ್ತಿದ್ದ ಅಂತಃಕರಣ ವುಳ್ಳವನೂ, ಕಲ್ಪಾಂತಕಾಲದ ಅಗ್ನಿಯಂತೆ ಜ್ವಲಿಸುವವನೂ ಆದ ಆ ರಾಕ್ಷಸನು ಸೂರ್ಯನಂತೆ ತಪಿಸುವ ಶೂಲವನ್ನು ಹಸ್ತದಲ್ಲಿ ಹಿಡಿದು ಹತ್ತು ದಿಕ್ಕುಗಳನ್ನು ಶಬ್ದಾಯಮಾನವಾಗಿ ಮಾಡುತ್ತ ಬಂದನು.

ತಸ್ಮಾದಶ್ರವಣಾನ್ಮರ್ತ್ಯಾಸ್ತತ್ರ ಯೇ ನಿವಸಂತಿ ತೇ ।
ತತ್ಯಜುರ್ಜೀವಿತಂ ತ್ವನ್ಯೇ ದುದ್ರುವುರ್ಭಯವಿಹ್ವಲಾಃ ॥ ೫೩ ॥

ತತಃ ಸರ್ವೇ ಸುಸಂಯತ್ತಾಃ ಕಾರ್ತವೀರ್ಯಾತ್ಮಜಾಸ್ತದಾ ।
ಶೂರಸೇನಾದಯಃ ಪಂಚ ರಾಜಾನಸ್ತು ಮಹಾಬಲಾಃ ॥ ೫೪ ॥

ಯುಯುಧುರ್ದಾನವಂ ಶಕ್ತಿಗಿರಿಕೂಟಾಸಿಮುದ್ಗರೈಃ ।
ತಾನ್ ಸರ್ವಾನ್ ಸ ಹಿ ವಿಪ್ರೇಂದ್ರಾಃ ಶೂಲೇನ ಪ್ರಹಸನ್ನಿವ ॥ ೫೫ ॥

ಯುದ್ಧಾಯ ಕೃತಸಂರಂಭಾ ವಿದೇಹಂ ತ್ವಭಿದುದ್ರುವುಃ ।
ಶೂರೋಽಸ್ತ್ರಂ ಪ್ರಾಹಿಣೋದ್ರೌದ್ರಂ ಶೂರಸೇನಸ್ತು ವಾರುಣಮ್ ॥೫೬॥

---

೫೩. ಆ ನಗರದಲ್ಲಿ ವಾಸಮಾಡುವ ಮರ್ತ್ಯರಲ್ಲಿ ಕೆಲವರು ಆ ಶಬ್ದವನ್ನು ಶ್ರವಣಮಾಡಿದ ಕೂಡಲೆ ಪ್ರಾಣವನ್ನು ಬಿಟ್ಟರು, ಮತ್ತೆ ಕೆಲವರು ಭಯದಿಂದ ಕೂಡಿದವರಾಗಿ ಬಹಳದೂರ ಓಡಿಹೋದರು.

೫೪. ತರುವಾಯ ಮಹಾಬಲಿಷ್ಠರಾಗಿರುವ, ಕಾರ್ತವೀರ್ಯಾರ್ಜುನರಾಜನ ಪುತ್ರರಾದ ಶೂರಸೇನ ಮುಂತಾದ ಐದು ಮಂದಿಯು ಒಟ್ಟು ಸೇರಿ ಯುದ್ಧಕ್ಕೆ ಸಿದ್ಧರಾದರು.

೫೫. ಮತ್ತು ಶಕ್ತಿ, ಪರ್ವತಶಿಖರ, ಖಡ್ಗ, ದಂಡ ಮುಂತಾದ ಅಸ್ತ್ರಗಳನ್ನು ಪ್ರಯೋಗಿಸಿ ದಾನವನೊಡನೆ ಯುದ್ಧಮಾಡಿದರು. ವಿಪ್ರೇಂದ್ರರೆ! ಆಗ ಆ ದಾನವನು ನಗುತ್ತ ಅವರೆಲ್ಲರನ್ನೂ ಎದುರಿಸಿದನು.

೫೬. ರಾಜಪುತ್ರರು ಯುದ್ಧವನ್ನು ಮಾಡುವ ದೃಢವಾದ ಸಂಭ್ರಮವುಳ್ಳವರಾಗಿ ವಿದೇಹ ದಾನವವನ್ನು ಎದುರಿಸಿ ಬಂದರು. ರಾಜಪುತ್ರರಲ್ಲಿ ಶೂರ ಎಂಬುವನು ರೌದ್ರಾಸ್ತ್ರವನ್ನೂ, ಶೂರಸೇನನು ವಾರುಣಾಸ್ತ್ರವನ್ನೂ ಪ್ರಯೋಗಿಸಿದರು.

ಪ್ರಾಜಾಪತ್ಯಂ ತಥಾ ಕೃಷ್ಣೋ ವಾಯವ್ಯಂ ಧೃಷ್ಣ ಏವ ಚ ।
ಜಯಧ್ವಜಶ್ಚ ಕೌಬೇರಮೈಂದ್ರಮಾಗ್ನೇಯಮೇವ ಚ ॥ ೫೭ ॥

ಭಂಜಯಾಮಾಸ ಶೂಲೇನ ತಾನ್ಯಸ್ತ್ರಾಣಿ ಸ ದಾನವಃ ।
ತತಃ ಕೃಷ್ಣೋ ಮಹಾವೀರ್ಯೋ ಗದಾಮಾದಾಯ ಭೀಷಣಾಮ್॥೫೮॥

ಸ್ಪೃಷ್ಟಮಾತ್ರೇಣ ತರಸಾ ಚಿಕ್ಷೇಪ ಚ ನನಾದ ಚ ।
ಸಂಪ್ರಾಪ್ಯ ಸಾ ಗದಾಸ್ಯೋರೋ ವಿದೇಹಸ್ಯ ಶಿಲೋಪಮಮ್ ॥ ೫೯ ॥

ನ ದಾನವಂ ಚಾಲಯಿತುಂ ಶಶಾಕಾಂತಕಸನ್ನಿಭಮ್ ।
ದುದ್ರುವುಸ್ತೇ ಭಯಗ್ರಸ್ತಾ ದೃಷ್ಟ್ವಾ ತಸ್ಯಾತಿಪೌರುಷಮ್ ॥ ೬೦ ॥

---

೫೭. ಹಾಗೆ ಕೃಷ್ಣನು ಪ್ರಾಜಾಪತ್ಯಾಸ್ತ್ರವನ್ನೂ, ಧೃಷ್ಣನು ವಾಯವ್ಯಾಸ್ತ್ರವನ್ನೂ ಪ್ರಯೋಗಿಸಿದರು, ಜಯಧ್ವಜನು ಕುಬೇರ-ಇಂದ್ರ-ಅಗ್ನಿ ದೇವತಾಸ್ವರೂಪವಾದ ಅಸ್ತ್ರಗಳನ್ನು ವೃಷ್ಟಿಯಂತೆ ಸುರಿಸಿದನು.

೫೮. ಆಗ ಆ ಅಸುರನು ಆ ಸಮಸ್ತಾಸ್ತ್ರಗಳನ್ನು ತನ್ನ ಶೂಲಾಯುಧದಿಂದ ಭಂಗಪಡಿಸಿದನು, ತರುವಾಯ ಮಹಾವೀರ್ಯೋನ್ಮತ್ತನಾದ ಕೃಷ್ಣನು ಭೀಷಣವಾದ ಗದೆಯನ್ನು ಕೈಯಲ್ಲಿ ತೆಗೆದುಕೊಂಡನು.

೫೯. ಆ ಗದೆಯನ್ನು ಮಂತ್ರಪಠನಪೂರ್ವಕವಾಗಿ ಸ್ಪರ್ಶಿಸಿ ವೇಗದಿಂದ ಅದನ್ನು ಶತ್ರುವಿನಮೇಲೆ ಬಿಟ್ಟು ಗರ್ಜಿಸಿದನು, ಆ ಗದೆಯು ಕಲ್ಲಿನಂತೆ ಕಠಿನವಾದ ವಿದೇಹಾಸುರನ ಹೃದಯವನ್ನು ಹೊಂದಿತು.

೬೦. ಆದರೆ ಯಮನಂತೆ ಇರುವ ದಾನವನನ್ನು ಚಲನಮಾಡಿಸಲು ಗದೆಯು ಶಕ್ತವಾಗಲಿಲ್ಲ, ಆಗ ಆ ರಾಜಪುತ್ರರು ಅತಿ ಪೌರುಷದಿಂದ ಕೂಡಿದ ಅಸುರನನ್ನು ನೋಡಿ ಭೀತಿಗ್ರಸ್ತರಾಗಿ ಪಲಾಯನಮಾಡಿದರು.

ಜಯಧ್ವಜಸ್ತು ಮತಿಮಾನ್ ಸಸ್ಮಾರ ಜಗತಃ ಪತಿಮ್ ।
ವಿಷ್ಣುಂ ಜಯಿಷ್ಣುಂ ಲೋಕಾದಿಮಪ್ರಮೇಯಮನಾಮಯಮ್ ॥೬೧॥

ತ್ರಾತಾರಂ ಪುರುಷಂ ಪೂರ್ವಂ ಶ್ರೀಪತಿಂ ಪೀತವಾಸಸಮ್ ।
ತತಃ ಪ್ರಾದುರಭೂಚ್ಚಕ್ರಂ ಸೂರ್ಯಾಯುತಸಮಪ್ರಭಮ್ ॥ ೬೨ ॥

ಆದೇಶಾದ್ವಾಸುದೇವಸ್ಯ ಭಕ್ತಾನುಗ್ರಹಣಾತ್ತದಾ ।
ಜಗ್ರಾಹ ಜಗತಾಂ ಯೋನಿಂ ಸ್ಮೃತ್ವಾ ನಾರಾಯಣಂ ನೃಪಃ ॥ ೬೩ ॥

ಪ್ರಾಹಿಣೋದ್ವೈ ವಿದೇಹಾಯ ದಾನವೇಭ್ಯೋ ಯಥಾ ಹರಿಃ ।
ಸಂಪ್ರಾಪ್ಯ ತಸ್ಯ ಘೋರಸ್ಯ ಸ್ಕಂಧದೇಶಂ ಸುದರ್ಶನಮ್ ॥ ೬೪ ॥

---

೬೧. ಆಗ ಜಯಧ್ವಜನು ವಿವೇಕಪೂರ್ಣನಾಗಿ ಜಗತ್ತಿಗೆ ಪ್ರಭುವೂ, ಜಯಶಾಲಿಯೂ, ಲೋಕಗಳಿಗೆ ಕಾರಣನೂ, ಪ್ರಮಾಣಾಗೋಚರನೂ ಮತ್ತು ನಿರ್ದೋಷನೂ ಆದ ಮಹಾವಿಷ್ಣುವನ್ನು ಸ್ಮರಿಸಿದನು.

೬೨. ಜಯಧ್ವಜರಾಜನು ಸರ್ವರಕ್ಷಕನೂ, ಪುರಾಣಪುರುಷನೂ, ಪೀತಾಂಬರಧಾರಿಯೂ ಮತ್ತು ಲಕ್ಷ್ಮೀಪತಿಯೂ ಆದ ಮಹಾವಿಷ್ಣುವನ್ನು ಸ್ಮರಿಸಿದ ಕೂಡಲೆ ಅಯುತ ಸಂಖ್ಯೆಯ ಸೂರ್ಯಬಿಂಬಗಳಂತೆ ಅತಿ ತೇಜೋಮಯವಾದ ವೈಷ್ಣವ ಚಕ್ರವು ಪ್ರಾದುರ್ಭವಿಸಿತು.

೬೩. ಆಗ ಶ್ರೀಮನ್ನಾರಾಯಣನ ಆಜ್ಞೆಯಿಂದಲೂ, ಭಕ್ತರನ್ನು ಅನುಗ್ರಹಿಸುವ ನಿಮಿತ್ತದಿಂದಲೂ ಜಗತ್ಕಾರಣನಾದ ಮಹಾವಿಷ್ಣುವನ್ನು ಧ್ಯಾನಿಸಿ ಆ ಚಕ್ರಾಯುಧವನ್ನು ತೆಗೆದುಕೊಂಡನು.

೬೪. ಮತ್ತು ಹರಿಯು ದಾನವರ ಮೇಲೆ ಚಕ್ರವನ್ನು ಬಿಟ್ಟಂತೆ ವಿದೇಹಾಸುರನಮೇಲೆ ಅದನ್ನು ಪ್ರಯೋಗಿಸಿದನು. ಆ ಸುದರ್ಶನ ಚಕ್ರವು ಘೋರನಾದ ವಿದೇಹಾಸುರನ ಸ್ಕಂಧದೇಶವನ್ನು ಮುಟ್ಟಿತು.

ಪೃಥಿವ್ಯಾಂ ಪಾತಯಾಮಾಸ ಶಿರೋಽದ್ರಿಶಿಖರಾಕೃತಿ ।
ತಸ್ಮಿನ್ ಹತೇ ದೇವರಿಪೌ ಶೂರಾದ್ಯಾ ಭ್ರಾತರೋ ನೃಪಾಃ ॥ ೬೫ ॥

ತದ್ಧಿ ಚಕ್ರಂ ಪುರಾ ವಿಷ್ಣುಸ್ತಪಸಾಽಽರಾಧ್ಯ ಶಂಕರಮ್ ।
ಯಸ್ಮಾದವಾಪ ತತ್ತಸ್ಮಾದಸುರಾಣಾಂ ವಿನಾಶಕಮ್ ॥ ೬೬ ॥

ಸಮಾಯಯುಃ ಪುರೀಂ ರಮ್ಯಾಂ ಭ್ರಾತರಂ ಚಾಪ್ಯಪೂಜಯನ್ ।
ಶ್ರುತ್ವಾಜಗಾಮ ಭಗವಾನ್ ಜಯಧ್ವಜಪರಾಕ್ರಮಮ್ ॥ ೬೭ ॥

ಕಾರ್ತವೀರ್ಯಸುತಂ ದ್ರಷ್ಟುಂ ವಿಶ್ವಾಮಿತ್ರೋ ಮಹಾಮುನಿಃ ।
ತಮಾಗತಮಥೋ ದೃಷ್ಟ್ವಾ ರಾಜಾ ಸಂಭ್ರಾಂತಲೋಚನಃ ॥ ೬೮ ॥

---

೬೫. ಮತ್ತು ಬೆಟ್ಟದ ಶಿಖರದಂತೆ ಮಹತ್ತಾದ ಅವನ ಶಿರವನ್ನು ನೆಲದಲ್ಲಿ ಬೀಳಿಸಿತು. ದೇವಶತ್ರುವಾದ ವಿದೇಹಾಸುರನು ಮರಣವನ್ನು ಹೊಂದಲು ಶೂರ ಮುಂತಾದ ರಾಜಸಹೋದರರು ನಗರಕ್ಕೆ ಬಂದರು.

೬೬. ಪೂರ್ವದಲ್ಲಿ ಮಹಾವಿಷ್ಣುವು ತಪಶ್ಚರ್ಯೆಯಿಂದ ಶಂಕರನನ್ನು ಪ್ರಸನ್ನನನ್ನಾಗಿ ಮಾಡಿ ಆ ಸುದರ್ಶನ ಚಕ್ರವನ್ನು ಹೊಂದಿರುವನು. ಆದ್ದರಿಂದ ಆ ಚಕ್ರವು ಅಸುರರನ್ನು ಸಂಹರಿಸುವ ಉಗ್ರಶಕ್ತಿಯನ್ನು ಹೊಂದಿದೆ

೬೭. ಹೀಗೆ ರಾಜಪುತ್ರರು ರಮ್ಯವಾದ ತಮ್ಮ ನಗರಿಗೆ ಬಂದುಸೇರಿ ವಿಷ್ಣು ಭಕ್ತನಾದ ಜಯಧ್ವಜನನ್ನು ಸತ್ಕರಿಸಿದರು. ಈ ಸಮಯದಲ್ಲಿ ಭಗವಂತನಾದ ವಿಶ್ವಾಮಿತ್ರಮುನಿಯು ಲೋಕೋತ್ತರವಾದ ಜಯಧ್ವಜನ ಪರಾಕ್ರಮವನ್ನು ಕೇಳಿ ಅಲ್ಲಿಗೆ ಬಂದನು.

೬೮. ಕಾರ್ತವೀರ್ಯಾರ್ಜುನನ ಪುತ್ರನಾದ ಜಯಧ್ವಜನನ್ನು ನೋಡಲು ವಿಶ್ವಾಮಿತ್ರಮುನಿಯು ರಾಜನ' ಸನ್ನಿಧಿಗೆ ಬಂದನು, ಆಗ ವಿಶ್ವಾಮಿತ್ರಮುನಿಯು ಬಂದಿರುವುದನ್ನು ರಾಜನು ತಿಳಿದು ಸಂಭ್ರಮದಿಂದ ಕೂಡಿದ ಲೋಚನವುಳ್ಳವ ನಾದನು.

ಸಮಾವೇಶ್ಯಾಸನೇ ರಮ್ಯೇ ಪೂಜಯಾಮಾಸ ಭಾವತಃ ।
ಉವಾಚ ಭಗವಾನ್ ಘೋರಃ ಪ್ರಸಾದಾದ್ಭವತೋಽಸುರಃ ॥ ೬೯ ॥

ನಿಪಾತಿತೋ ಮಯಾ ಸೋಽಥ ವಿದೇಹೋ ದಾನವೇಶ್ವರಃ ।
ತ್ವದ್ವಾಕ್ಯಾಚ್ಛಿನ್ನಸಂದೇಹೋ ವಿಷ್ಣುಂ ಸತ್ಯಪರಾಕ್ರಮಮ್ ॥ ೭೦ ॥

ಪ್ರಪನ್ನಃ ಶರಣಂ ತೇನ ಪ್ರಸಾದೋ ಮೇ ಕೃತಃ ಶುಭಃ ।
ಯಕ್ಷ್ಯಾಮಿ ಪರಮೇಶಾನಂ ವಿಷ್ಣುಂ ಪದ್ಮದಲೇಕ್ಷಣಮ್ ॥ ೭೧ ॥

ಕಥಂ ಕೇನ ವಿಧಾನೇನ ಸಂಪೂಜ್ಯೋ ಹರಿರೀಶ್ವರಃ ।
ಕೋಽಯಂ ನಾರಾಯಣೋ ದೇವಃ ಕಿಂಪ್ರಭಾವಶ್ಚ ಸುವ್ರತ ॥ ೭೨ ॥

---

೬೯. ಮತ್ತು ಮುನಿಯನ್ನು ರಮಣೀಯವಾದ ಆಸನದಲ್ಲಿ ಕುಳ್ಳಿರಿಸಿ ಭಕ್ತಿಪೂರ್ವಕವಾಗಿ ಪೂಜೆಮಾಡಿದನು, ಅನಂತರ ಹೀಗೆಂದು ಹೇಳಿದನು :—ಪೂಜ್ಯನೆ ! ನಿನ್ನ ಅನುಗ್ರಹವಿಶೇಷದಿಂದ ಘೋರರೂಪಿಯಾದ ಅಸುರನು ನನ್ನಿಂದ ಜಯಿಸಲ್ಪಟ್ಟನು.

೭೦. ದಾನವೇಶ್ವರನಾದ ವಿದೇಹಾಸುರನು ನನ್ನಿಂದ ಸಂಹರಿಸಲ್ಪಟ್ಟನು. ನಿನ್ನ ಉಪದೇಶವಚನದಿಂದ ಸತ್ಯವಾದ ಪರಾಕ್ರಮವುಳ್ಳ ಮಹಾವಿಷ್ಣುವಿನ ಮಹಿಮಾತಿಶಯದಲ್ಲಿ ಸಂಶಯರಹಿತನಾದೆನು.

೭೧. ಮತ್ತು ಆ ಮಹಾವಿಷ್ಣುವನ್ನು ಶರಣುಹೊಂದಿದೆನು. ಆದ್ದರಿಂದ ವಿಷ್ಣುವಿನಿಂದ ನನಗೆ ಕಲ್ಯಾಣಕರವಾದ ಅನುಗ್ರಹವು ಮಾಡಲ್ಪಟ್ಟಿತು. ಈಗ ಕಮಲದಳದಂತೆ ಸುಂದರವಾದ ನೇತ್ರವುಳ್ಳ, ಸರ್ವೇಶ್ವರನಾದ ವಿಷ್ಣುವನ್ನು ಅರ್ಚಿಸುತ್ತೇನೆ.

೭೨. ಉತ್ತಮವಾದ ವ್ರತಾನುಷ್ಠಾನತತ್ಪರನೆ! ನಾರಾಯಣಸ್ವಾಮಿಯೆಂದರೆ ಯಾರು ? ಆ ಸ್ವಾಮಿಯ ಮಹಿಮೆಯು ಯಾವುದು ? ಅಂತಹ ಸರ್ವೇಶ್ವರನಾದ ಶ್ರೀಹರಿಯು ಹೇಗೆ ಯಾವ ವಿಧಾನದಿಂದ ಅರ್ಚಿಸಲ್ಪಡಬೇಕು ?

ಸರ್ವಮೇತನ್ಮಮಾಚಕ್ಷ್ವ ಪರಂ ಕೌತೂಹಲಂ ಹಿ ಮೇ ।
ಜಯಧ್ವಜಸ್ಯ ವಚನಂ ಶ್ರುತ್ವಾ ಶಾಂತೋ ಮುನಿಸ್ತತಃ ॥ ೭೩ ॥

ದೃಷ್ಟ್ವಾ ಹರೌ ಪರಾಂ ಭಕ್ತಿಂ ವಿಶ್ವಾಮಿತ್ರ ಉವಾಚ ಹ ।

ವಿಶ್ವಾಮಿತ್ರ ಉವಾಚ :--

ಯತಃ ಪ್ರವೃತ್ತಿರ್ಭೂತಾನಾಂ ಯಸ್ಮಿನ್ ಸರ್ವಂ ಯತೋ ಜಗತ್ ॥

ಸ ವಿಷ್ಣುಃ ಸರ್ವಭೂತಾತ್ಮಾ ತಮಾಶ್ರಿತ್ಯ ವಿಮುಚ್ಯತೇ ।
ಯಮಕ್ಷರಾತ್ಪರತರಾತ್ಪರಂ ಪ್ರಾಹುರ್ಗುಹಾಶ್ರಯಮ್ ॥ ೭೫ ॥

ಆನಂದಂ ಪರಮಂ ವ್ಯೋಮ ಸ ವೈ ನಾರಾಯಣಃ ಸ್ಮೃತಃ ।
ನಿತ್ಯೋದಿತೋ ನಿರ್ವಿಕಲ್ಪೋ ನಿತ್ಯಾನಂದೋ ನಿರಂಜನಃ ॥ ೭೬ ॥

---

೭೩. ಈ ಎಲ್ಲ ವಿಷಯಗಳನ್ನು ನನಗೆ ಹೇಳು. ಇದರಲ್ಲಿ ನನಗೆ ಮಹತ್ತಾದ ಕುತೂಹಲವಿರುವುದು. ಹೀಗೆಂಬ ಜಯಧ್ವಜರಾಜನ ವಚನವನ್ನು ಶಮಗುಣಾನ್ವಿತನಾದ ವಿಶ್ವಾಮಿತ್ರ ಮಹಾಮುನಿಯು ಕೇಳಿದನು.

೭೪. ಮತ್ತು ಮುನಿಯು ವಿಷ್ಣುವಿನಲ್ಲಿರುವ ತೀವ್ರಭಕ್ತಿಯನ್ನು ನೋಡಿ ಮಾತನಾಡಿದನು. ವಿಶ್ವಾಮಿತ್ರಮಹಾಮುನಿಯು ಹೀಗೆ ಉತ್ತರವಚನವನ್ನು ಹೇಳಿದನು :—ಜಗತ್ತಿನಲ್ಲಿರುವ ಸಮಸ್ತ ಪ್ರಾಣಿಗಳ ವ್ಯಾಪಾರಗಳೂ ನಾರಾಯಣನಿಂದ ನಡೆಯುವುವು, ಸಮಸ್ತ ಜಗತ್ತು ನಾರಾಯಣನಿಂದ ಜನಿಸಿ ನಾರಾಯಣನಲ್ಲಿಯೆ ಸ್ಥಿತಿಯನ್ನು ಹೊಂದಿದೆ.

೭೫. ಸರ್ವಭೂತಾತ್ಮಕನಾದ ಆ ಮಹಾವಿಷ್ಣುವನ್ನು ಆಶ್ರಯಿಸಿದರೆ ಮಾನವನು ಮುಕ್ತಿಯನ್ನು ಹೊಂದುತ್ತಾನೆ. ಹೃದಯ ಗುಹೆಯಲ್ಲಿ ವಾಸಮಾಡಿದ ಪರಮಾತ್ಮನನ್ನು ಸೂಕ್ಷ್ಮವಾದ ಅಕ್ಷರಕ್ಕಿಂತಲೂ ಶ್ರೇಷ್ಠನೆಂದು ವರ್ಣಿಸುತ್ತಾರೆ.

೭೬. ಹೃದಯ ಗುಹೆಯಲ್ಲಿ ವಾಸಿಸುವ ಪರಮಾನಂದವು ನಾರಾಯಣಸ್ವಾಮಿಯೆಂದು ಸ್ಮರಿಸಲ್ಪಟ್ಟಿರುವುದು. ಆ ನಾರಾಯಣನು ಯಾವಾಗಲೂ ಪ್ರಕಾಶರೂಪನೂ, ವಿಕಲ್ಪರಹಿತನೂ, ನಿತ್ಯಾನಂದರೂಪನೂ ಮತ್ತು ನಿರ್ದೋಷನೂ ಆಗಿದ್ದಾನೆ.

ಚತುರ್ವ್ಯೂಹಧರೋ ವಿಷ್ಣುರವ್ಯೂಹಃ ಪ್ರೋಚ್ಯತೇ ಸ್ವಯಮ್ ।
ಪರಮಾತ್ಮಾ ಪರಂ ಧಾಮ ಪರಂ ವ್ಯೋಮ ಪರಂ ಪದಮ್ ॥ ೭೭ ॥

ತ್ರಿಪಾದಮಕ್ಷರಂ ಬ್ರಹ್ಮ ತಮಾಹುರ್ಬ್ರಹ್ಮವಾದಿನಃ ।
ಸ ವಾಸುದೇವೋ ವಿಶ್ವಾತ್ಮಾ ಯೋಗಾತ್ಮಾ ಪುರುಷೋತ್ತಮಃ ॥ ೭೮ ॥

ಯಸ್ಯಾಂಶಸಂಭವೋ ಬ್ರಹ್ಮಾ ರುದ್ರೋಽಪಿ ಪರಮೇಶ್ವರಃ।
ಸ್ವವರ್ಣಾಶ್ರಮಧರ್ಮೇಣ ಪುಂಸಾಯಂ ಪುರುಷೋತ್ತಮಃ ॥ ೭೯ ॥

ಅಕಾಮಾದ್ವ್ರತಭಾವೇನ ಸಮಾರಾಧ್ಯೋ ನ ಚಾನ್ಯಥಾ ।
ಏತಾವದುಕ್ತ್ವಾ ಭಗವಾನ್ ವಿಶ್ವಾಮಿತ್ರೋ ಮಹಾತಪಾಃ ॥ ೮೦ ॥

---

೭೭. ಪರಮಾತ್ಮಸ್ವರೂಪನೂ, ಪರಮಧಾಮರೂಪನೂ, ಸೂಕ್ಷ್ಮಾಕಾಶ ರೂಪನೂ, ಪರಮಪದಸ್ವರೂಪನೂ ಆದ ಮಹಾವಿಷ್ಣುವು ನಾಲ್ಕು ವ್ಯೂಹಗಳನ್ನು ಧರಿಸಿದವನಾದರೂ, ಪರಮಾರ್ಥರೂಪದಿಂದ ವ್ಯೂಹರಹಿತನೆಂದು ವರ್ಣಿಸಲ್ಪಡುತ್ತಾನೆ

೭೮. ಮೂರು ಪಾದಗಳಿಂದ ಕೂಡಿದ ಅಕ್ಷರರೂಪಿಯಾದ, ಬ್ರಹ್ಮವಸ್ತುವನ್ನು ವಾಸುದೇವನೆಂದು ಬ್ರಹ್ಮವಾದಿಗಳು ಹೇಳುತ್ತಾರೆ. ಆ ವಾಸುದೇವನು ಯೋಗಾತ್ಮ, ವಿಶ್ವಾತ್ಮ ಮತ್ತು ಪುರುಷೋತ್ತಮನೆಂದು ಹೇಳಲ್ಪಡುತ್ತಾನೆ.

೭೯. ಆ ಪರಮಾತ್ಮನ ಅಂಶದಿಂದ ಬ್ರಹ್ಮನೂ, ಪರಮೇಶ್ವರನಾದ ರುದ್ರನೂ, ಜನಿಸಿರುವರು. ಇಂತಹ ಪುರುಷೋತ್ತಮನು ಮಾನವನಿಂದ ತನ್ನ ವರ್ಣಾಶ್ರಮ ಆಚಾರಧರ್ಮದಿಂದ ಅರ್ಚಿಸಲ್ಪಡಬೇಕು.

೮೦. ಮತ್ತು ನಿಯಮರೂಪದಿಂದ ಅರ್ಚಿಸಬೇಕೇ ಹೊರತು ಮತ್ತಾವ ಕಾಮ್ಯಾರ್ಚನೆಯು ಯುಕ್ತವಲ್ಲ, ಮಹಾತಪಸ್ವಿಯೂ, ಪೂಜ್ಯನೂ ಆದ ವಿಶ್ವಾಮಿತ್ರ ಮುನಿಯು ಈ ವಚನವನ್ನು ಹೇಳಿದನು.

ಶೂರಾದ್ಯೈಃ ಪೂಜಿತೋ ವಿಪ್ರೋ ಜಗಾಮಾಥ ಸ್ವಮಾಶ್ರಮಮ್ ।
ಅಥ ಶೂರಾದಯೋ ದೇವಮಯಜಂತ ಮಹೇಶ್ವರಮ್ ॥ ೮೧ ॥

ಯಜ್ಞೇನ ಯಜ್ಞಗಮ್ಯಂ ತಂ ನಿಷ್ಕಾಮಾ ರುದ್ರಮವ್ಯಯಮ್ ।
ತಾನ್ ವಸಿಷ್ಠಸ್ತು ಭಗವಾನ್ ಯಾಜಯಾಮಾಸ ಧರ್ಮವಿತ್ ॥ ೮೨ ॥

ಗೌತಮೋಽಗಸ್ತ್ಯರತ್ರಿಶ್ಚ ಸರ್ವೇ ರುದ್ರಪರಾಕ್ರಮಾಃ ।
ವಿಶ್ವಾಮಿತ್ರಸ್ತು ಭಗವಾನ್ ಜಯಧ್ವಜಮರಿಂದಮಮ್ ॥ ೮೩ ॥

ಯಾಜಯಾಮಾಸ ಭೂತಾದಿಮಾದಿದೇವಂ ಜನಾರ್ದನಮ್ ।
ತಸ್ಯ ಯಜ್ಞೇ ಮಹಾಯೋಗೀ ಸಾಕ್ಷಾದ್ದೇವಃ ಸ್ವಯಂ ಹರಿಃ ॥ ೮೪ ॥

---

೮೧. ಮತ್ತು ಶೂರ ಮುಂತಾದ ರಾಜರಿಂದ ಸತ್ಕರಿಸಲ್ಪಟ್ಟ ಮುನಿಯು ತನ್ನ ಆಶ್ರಮಕ್ಕೆ ಪ್ರಯಾಣಮಾಡಿದನು, ತರುವಾಯ ಶೂರ ಮುಂತಾದವರು ಮಹೇಶ್ವರನನ್ನು ಪೂಜಿಸಿದರು.

೮೨. ರಾಜಪುತ್ರರು ನಿಷ್ಕಾಮರಾಗಿ ಅವ್ಯಯನೂ, ರುದ್ರಮೂರ್ತಿಯೂ, ಯಜ್ಞದಿಂದ ವೇದ್ಯನೂ ಆದ ಸ್ವಾಮಿಯನ್ನು ಯಜ್ಞಕರ್ಮದಿಂದ ಅರ್ಚಿಸಿದರು. ಧರ್ಮಜ್ಞನೂ, ಪೂಜ್ಯನೂ ಆದ ವಸಿಷ್ಠಮುನಿಯು ಅವರಿಗೆ ಯಜ್ಞಕರ್ಮವನ್ನು ಮಾಡಿಸಿದನು.

೮೩. ಗೌತಮ, ಅಗಸ್ತಿ ಮತ್ತು ಅತ್ರಿ ಮುಂತಾದ ರುದ್ರಭಕ್ತರಾದ ಮಹರ್ಷಿಗಳು ರಾಜಪುತ್ರರಿಂದ ಯಾಗಮಾಡಿಸಿದರು. ಪೂಜ್ಯನಾದ ವಿಶ್ವಾಮಿತ್ರಮುನಿಯು ಶತ್ರುಂಜಯನಾದ ಜಯಧ್ವಜನಿಗೆ ಯಾಗಮಾಡಿಸಿದನು.

೮೪. ಸರ್ವಭೂತಗಳಿಗೆ ಆದಿಯೂ, ಆದಿದೇವನೂ ಆದ ವಿಷ್ಣುವನ್ನು ಜಯಧ್ವಜನು ಅರ್ಚಿಸಿದನು. ಜಯಧ್ವಜರಾಜನ ಯಜ್ಞದಲ್ಲಿ ಮಹಾಯೋಗಿಯಾದ ಶ್ರೀಮನ್ನಾರಾಯಣಸ್ವಾಮಿಯು ಪ್ರತ್ಯಕ್ಷವಾಗಿ ಬಂದನು.

ಆಪಿರಾಸೀತ್ ಸ ಭಗವಾನ್ ತದದ್ಭುತಮಿವಾಭವತ್ ॥ ೮೫॥

ಜಯಧ್ವಜೋಽಪಿ ತಂ ವಿಷ್ಣುಂ ರುದ್ರಸ್ಯ ವರಮಾಂ ತನುಮ್ ।
ಇತ್ಯೇವಂ ಸರ್ವದಾ ಬುದ್ಧ್ವಾ ಯತ್ನೇನಾಯಜದಚ್ಯುತಮ್ ॥ ೮೬ ॥

ಯ ಇಮಂ ಶೃಣುಯಾನ್ನಿತ್ಯಂ ಜಯಧ್ವಜಪರಾಕ್ರಮಮ್ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಗಚ್ಛತಿ ॥ ೮೭ ॥

ಇತಿ ಶ್ರೀ ಕೂರ್ಮಪುರಾಣೇ ದ್ವಾವಿಂಶೋಽಧ್ಯಾಯಃ.

---

೮೫. ಸಮಸ್ತ ಮಹರ್ಷಿಗಳಿಂದ ಎಲ್ಲಾ ರಾಜಪುತ್ರರೂ ಯಜ್ಞ ಕರ್ಮವನ್ನು ನಡೆಸಿದರು. ಜಯಧ್ವಜನ ಯಜ್ಞದಲ್ಲಿ ಸ್ವಾಮಿಯು ಪ್ರತ್ಯಕ್ಷವಾಗಿ ಬಂದಿರುವುದು ಅದ್ಭುತದಂತೆ ಆಯಿತು.

೮೬. ಜಯಧ್ವಜನೂ ಕೂಡ ಮಹಾ ವಿಷ್ಣುವನ್ನು ರುದ್ರದೇವನ ಉತ್ತಮ ಮೂರ್ತಿಯನ್ನಾಗಿ ಯಾವಾಗಲೂ ಭಾವಿಸಿ ಪ್ರಯತ್ನದಿಂದ ವಿಷ್ಣುವನ್ನು ಪೂಜಿಸುತ್ತಿದ್ದನು.

೮೭ ಹೀಗೆ ಜಯಧ್ವಜನ ಪರಾಕ್ರಮ ಗರ್ಭಿತವಾದ ಚರಿತ್ರವನ್ನು ನಿತ್ಯದಲ್ಲಿ ಶ್ರವಣಮಾಡಿದ ಮಾನವನು ಸಮಸ್ತಪಾತಕಗಳಿಂದ ಬಿಡಲ್ಪಟ್ಟವನಾಗಿ ವಿಷ್ಣು ಲೋಕಕ್ಕೆ ಹೋಗುತ್ತಾನೆ.

( ಕೂರ್ಮಪುರಾಣದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಸಮಾಪ್ತವು. )



ಶ್ರೀಃ

# ಕೂರ್ಮಪುರಾಣಂ

---

## ತ್ರಯೋವಿಂಶೋಽಧ್ಯಾಯಃ.

ಸೂತ ಉವಾಚ :—

ಜಯಧ್ವಜಸ್ಯ ಪುತ್ರೋಽಭೂತ್ತಾಲಜಂಘ ಇತಿ ಸ್ಮೃತಃ ।
ಶತಂ ಪುತ್ರಾಸ್ತು ತಸ್ಯಾಸನ್ ತಾಲಜಂಘಾ ಇತಿ ಸ್ಮೃತಾಃ ॥ ೧ ॥

ತೇಷಾಂ ಜ್ಯೇಷ್ಠೋ ಮಹಾವೀರ್ಯೋ ವೀತಿಹೋತ್ರೋಽಭವನ್ನೃಪಃ ।
ವೃಷಪ್ರಭೃತಯಶ್ಚಾನ್ಯೇ ಯಾದವಾಃ ಪುಣ್ಯಕರ್ಮಿಣಃ ॥ ೨ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :—ಜಯಧ್ವಜನಿಗೆ ತಾಲಜಂಘ ಎಂದು ಸ್ಮರಿಸಲ್ಪಟ್ಟ ಒಬ್ಬ ಕುಮಾರನಿದ್ದನು. ಅವನಿಗೆ ತಾಲಜಂಘ ಎಂಬ ವಂಶ ನಾಮದಿಂದ ಸ್ಮರಿಸಲ್ಪಟ್ಟ ಒಂದುನೂರು ಮಂದಿ ಪುತ್ರರಿದ್ದರು.

೨. ಅವರಲ್ಲಿ ಮಹಾವೀರ್ಯಶಾಲಿಯಾದ ವೀತಿಹೋತ್ರ ಎಂಬ ರಾಜನು ಜೇಷ್ಠಪುತ್ರನಾಗಿದ್ದನು. ವೃಷ ಮುಂತಾದ ಯದುವಂಶೋತ್ಪನ್ನರಾದ ಇತರ ರಾಜಪುತ್ರರು ಪುಣ್ಯಕರ್ಮನಿರತರಾಗಿದ್ದರು.

ವೃಷೋ ವಂಶಕರಸ್ತೇಷಾಂ ತಸ್ಯ ಪುತ್ರೋಽಭವನ್ಮಧುಃ ।
ಮಧೋಃ ಪುತ್ರಶತಂ ತ್ವಾಸೀದ್ವೃಷಣಸ್ತಸ್ಯ ವಂಶಭಾಕ್ ॥ ೩ ॥

ವೀತಿಹೋತ್ರಸುತಶ್ಚಾಪಿ ವಿಶ್ರುತೋಽನಂತ ಇತ್ಯತಃ ।
ದುರ್ಜಯಸ್ತಸ್ಯ ಪುತ್ರೋಽಭೂತ್ ಸರ್ವಶಾಸ್ತ್ರವಿಶಾರದಃ ॥ ೪ ॥

ತಸ್ಯ ಭಾರ್ಯಾ ರೂಪವತೀ ಗುಣೈಃ ಸರ್ವೈರಲಂಕೃತಾ ।
ಪತಿವ್ರತಾಸೀತ್ ಪತಿನಾ ಸ್ವಧರ್ಮಪರಿಪಾಲಿಕಾ ॥ ೫ ॥

ಸ ಕದಾಚಿನ್ಮಹಾರಾಜಃ ಕಾಲಿಂದೀತೀರಸಂಸ್ಥಿತಾಮ್ ।
ಅಪಶ್ಯದುರ್ವಶೀಂ ದೇವೀಂ ಗಾಯಂತೀಂ ಮಧುರಶ್ರುತಿಮ್ ॥ ೬ ॥

ತತಃ ಕಾಮಾಹತಮನಾಸ್ತತ್ಸಮೀಪಮುಪೇತ್ಯ ವೈ ।
ಪ್ರೋವಾಚ ಸುಚಿರಂ ಕಾಲಂ ದೇವಿ ರಂತುಂ ಮಯಾರ್ಹಸಿ ॥ ೭ ॥

---

೩. ಅವರಲ್ಲಿ ವೃಷ ಎಂಬುವನು ವಂಶಪ್ರತಿಷ್ಠಾಪಕನಾಗಿದ್ದನು. ಅವನಿಗೆ ಮಧು ಎಂಬ ಪುತ್ರನಿದ್ದನು, ಮಧುವಿಗೆ ನೂರುಮಂದಿ ಪುತ್ರರಿದ್ದರು. ಅವರಲ್ಲಿ ವೃಷಣ ಎಂಬುವನು ವಂಶಸ್ಥಾಪಕನಾದನು.

೪. ವೀತಿಹೋತ್ರನಿಗೆ ಅನಂತ ಎಂದು ವಿಖ್ಯಾತಿಯನ್ನು ಪಡೆದ ಪುತ್ರನು ಹುಟ್ಟಿದನು. ಆ ಅನಂತನಿಗೆ ಸರ್ವಶಾಸ್ತ್ರಗಳಲ್ಲಿ ನಿಷ್ಣಾತನಾದ ದುರ್ಜಯ ಎಂಬ ಪುತ್ರನಿದ್ದನು.

೫. ಅವನಿಗೆ ಸ್ವಧರ್ಮವನ್ನು ಪಾಲಿಸುವವಳೂ, ಸಮಸ್ತ ಗುಣಗಳಿಂದ ಶೋಭಿತಳೂ, ರೂಪವತಿಯೂ ಆದ ಪತಿವ್ರತೆಯು ಭಾರ್ಯೆಯಾಗಿದ್ದಳು.

೬. ಆ ದುರ್ಜಯ ಮಹಾರಾಜನು ಒಂದು ಸಮಯದಲ್ಲಿ ಕಾಳಿಂದೀ ನದಿಯ ತೀರದಲ್ಲಿ ಮಧುರ ಶ್ರುತಿಯಿಂದ ಗಾನಮಾಡುತ್ತಿದ್ದ ಉರ್ವಶಿ ಎಂಬ ದೇವಾಂಗನೆಯನ್ನು ನೋಡಿದನು.

೭. ಆಮೇಲೆ ಕಾಮವಿಕಾರದಿಂದ ಕೆಟ್ಟ ಮಾನಸವುಳ್ಳವನಾಗಿ ಉರ್ವಶಿಯ ಸಮೀಪಕ್ಕೆ ಹೋಗಿ ಉರ್ವಶಿಯೇ ! ನನ್ನೊಡನೆ ರಮಿಸಲು ಅರ್ಹಳಾಗಿದ್ದೀಯೆ, ಹೀಗೆಂದು ಬಹಳಹೊತ್ತು ಹೇಳಿದನು.

ಸಾ ದೇವೀ ನೃಪತಿಂ ದೃಷ್ಟ್ವಾ ರೂಪಲಾವಣ್ಯಸಂಯುತಮ್ ।
ರೇಮೇ ತೇನ ಚಿರಂ ಕಾಲಂ ಕಾಮದೇವಮಿವಾಪರಮ್ ॥ ೮ ॥

ಕಾಲಾತ್ಪ್ರಬುದ್ಧೋ ರಾಜಾ ತಾಮುರ್ವಶೀಂ ಪ್ರಾಹ ಶೋಭನಾಮ್ ।
ಗಮಿಷ್ಯಾಮಿ ಪುರೀಂ ರಮ್ಯಾಂ ಹಸಂತೀತ್ಯಬ್ರವೀದ್ವಚಃ ॥ ೯ ॥

ನ ಹ್ಯೇತೇನೋಪಭೋಗೇನ ಭವತೋ ರಾಜಸುಂದರ ।
ಪ್ರೀತಿಃ ಸಂಜಾಯತೇ ಮಹ್ಯಂ ಸ್ಥಾತವ್ಯಂ ವತ್ಸರಂ ಪುನಃ ॥ ೧೦ ॥

ತಾಮಬ್ರವೀತ್ಸ ಮತಿಮಾನ್ ಗತ್ವಾ ಶೀಘ್ರತರಂ ಪುರೀಮ್ ।
ಆಗಮಿಷ್ಯಾಮಿ ಭೂಯೋಽತ್ರ ತನ್ಮೇಽನುಜ್ಞಾತುಮರ್ಹಸಿ ॥ ೧೧ ॥

ತಮಬ್ರವೀತ್ ಸಾ ಸುಭಗಾ ತಥಾ ಕುರು ವಿಶಾಂಪತೇ ।
ನಾನ್ಯಯಾಪ್ಸರಸಾ ತಾವದ್ರಂತವ್ಯಂ ಭವತಾ ಪುನಃ ॥ ೧೨ ॥

---

೮. ಆ ಉರ್ವಶೀದೇವಿಯು ರೂಪಲಾವಣ್ಯಗಳಿಂದ ಕೂಡಿ ಮತ್ತೊಬ್ಬ ಕಾಮದೇವನಂತಿರುವ ಆ ರಾಜನನ್ನು ಕಂಡು ಅವನೊಡನೆ ಬಹಳಕಾಲ ರಮಿಸಿದಳು.

೯. ತರುವಾಯ ಬಹುಕಾಲದಮೇಲೆ ಪ್ರಬುದ್ಧನಾದ ರಾಜನು ಮಂಗಳಕರಳಾದ ಉರ್ವಶಿಯನ್ನು ಕುರಿತು ನಾನು ರಮ್ಯವಾದ ನನ್ನ ನಗರಕ್ಕೆ ಹೋಗುವೆನೆಂದು ಕೇಳಿದನು. ಆಗ ಉರ್ವಶಿಯು ನಗುತ್ತ ಹೀಗೆಂದು ಹೇಳಿದಳು.

೧೦. ಸುಂದರನಾದ ರಾಜನೇ ! ನಿನ್ನೊಡನೆ ಈ ಅಲ್ಪಭೋಗದಿಂದ ನನಗೆ ಪ್ರೀತಿಯು ಉಂಟಾಗಲಾರದು. ಆದ್ದರಿಂದ ಮತ್ತೆ ಒಂದು ವರ್ಷಕಾಲ ಇಲ್ಲಿಯೇ ಇರಬೇಕು.

೧೧. ಆಗ ವಿವೇಕಿಯಾದ ರಾಜನು ನಾನು ಬಹಳಬೇಗ ನನ್ನ ನಗರಕ್ಕೆ ಹೋಗಿ ಮತ್ತೆ ಇಲ್ಲಿಗೆ ಬಂದುಸೇರುತ್ತೇನೆ. ಅದಕ್ಕೆ ನೀನು ಅನುಮತಿಯನ್ನು ಕೊಡು, ಹೀಗೆಂದು ಹೇಳಿದನು.

೧೨. ಸುಂದರಿಯಾದ ಊರ್ವಶಿಯು ರಾಜನಿಗೆ ಹೀಗೆ ಹೇಳಿದಳು. ಮಹಾರಾಜನೇ ! ನೀನು ಹಾಗೆ ಮಾಡು. ಆದರೆ ಮತ್ತಾವ ಅಪ್ಸರಾಂಗನೆಯೊಡನೆ ನೀನು ರತಿಕ್ರೀಡೆಯನ್ನು ಅನುಭವಿಸಬಾರದು.

ಓಮಿತ್ಯುಕ್ತ್ವಾ ಯಯೌ ತೂರ್ಣಂ ಪುರೀಂ ಪರಮಶೋಭನಾಮ್ ।
ಗತ್ವಾ ಪತಿವ್ರತಾಂ ಪತ್ನೀಂ ದೃಷ್ಟ್ವಾ ಭೀತೋಽಭವನ್ನೃಪಃ ॥ ೧೩ ॥

ಸಂಪ್ರೇಕ್ಷ್ಯ ಸಾ ಗುಣವತೀ ಭಾರ್ಯಾ ತಸ್ಯ ಪತಿವ್ರತಾ ।
ಭೀತಂ ಪ್ರಸನ್ನಯಾ ಪ್ರಾಹ ವಾಚಾ ಪೀನಪಯೋಧರಾ ॥ ೧೪ ॥

ಸ್ವಾಮಿನ್ ಕಿಮತ್ರ ಭವತೋ ಭೀತಿರದ್ಯ ಪ್ರವರ್ತತೇ ।
ತದ್ಬ್ರೂಹಿ ಮೇ ಯಥಾತತ್ತ್ವಂ ನ ರಾಜ್ಞಾಂ ಕೀರ್ತಯೇ ತ್ವಿದಮ್ ॥

ಸ ತಸ್ಯಾ ವಾಕ್ಯಮಾಕರ್ಣ್ಯ ಲಜ್ಜಾವನತಮಾನಸಃ ।
ನೋವಾಚ ಕಿಂಚಿನ್ನೃಪತಿರ್ಜ್ಞಾನದೃಷ್ಟ್ಯಾ ವಿವೇದ ಸಾ ॥ ೧೬ ॥

---

೧೩. ರಾಜನು ಹಾಗಾಗಲೆಂದು ಒಪ್ಪಿ ಪರಮಮಂಗಳವಾದ ತನ್ನ ನಗರಕ್ಕೆ ಶೀಘ್ರವಾಗಿ ಬಂದನು. ಅಲ್ಲಿ ಪತಿವ್ರತೆಯಾದ ತನ್ನ ಪತ್ನಿಯನ್ನು ನೋಡಿ ರಾಜನು ಭಯಗೊಂಡವನಾದನು.

೧೪. ಸದ್ಗುಣಗಳಿಂದ ಕೂಡಿದ ಪತಿವ್ರತೆಯಾದ ಮತ್ತು ಸ್ಥೂಲವಾದ ಸ್ತನಗಳುಳ್ಳ ಅವನ ಭಾರ್ಯೆಯು ಪತಿಯು ಭೀತನಾಗಿರುವುದನ್ನು ಕಂಡು ಪ್ರಸನ್ನವಾದ ಮಾತುಗಳಿಂದ ಸಮಾಧಾನಮಾಡಿದಳು.

೧೫. ಸ್ವಾಮಿಯೇ ! ಪೂಜ್ಯನಾದ ನಿನಗೆ ಈ ರೀತಿ ಭೀತಿಯು ಏಕೆ ಉಂಟಾಗಿದೆ ? ಅದನ್ನು ತಾತ್ವಿಕವಾಗಿ ನನಗೆ ಹೇಳು, ನಾನು ಇದನ್ನು ಮತ್ತಾವ ರಾಜಪುತ್ರರಿಗೂ ಹೇಳುವುದಿಲ್ಲ.

೧೬. ಆ ರಾಜನು ಆ ಸತಿಯ ವಚನವನ್ನು ಕೇಳಿ ಲಜ್ಜೆಯಿಂದ ನಮ್ರವಾದ ಮಾನಸವುಳ್ಳವನಾಗಿ ಏನನ್ನೂ ಹೇಳದೆ ಸುಮ್ಮನಾದನು. ಆ ಪತಿವ್ರತೆಯು ಜ್ಞಾನ ದೃಷ್ಟಿಯಿಂದ ನಡೆದ ಸಂಗತಿಯನ್ನು ತಿಳಿದಳು.

ನ ಭೇತವ್ಯಂ ತ್ವಯಾ ರಾಜನ್ ಕಾರ್ಯಂ ಪಾಪವಿಶೋಧನಮ್ ।
ಭೀತೇ ತ್ವಯಿ ಮಹಾರಾಜ ರಾಷ್ಟ್ರಂ ತೇ ನಾಶಮೇಷ್ಯತಿ ॥ ೧೭ ॥

ತತಃ ಸ ರಾಜಾ ದ್ಯುತಿಮಾನ್ ನಿರ್ಗತ್ಯ ತು ಪುರಾತ್ತತಃ ।
ಗತ್ವಾ ಕಣ್ವಾಶ್ರಮಂ ಪುಣ್ಯಂ ದೃಷ್ಟ್ವಾ ತತ್ರ ಮಹಾಮುನಿಮ್ ॥ ೧೮ ॥

ನಿಶಮ್ಯ ಕಣ್ವವದನಾತ್ ಪ್ರಾಯಶ್ಚಿತ್ತವಿಧಿಂ ಶುಭಮ್ ।
ಜಗಾಮ ಹಿಮವತ್ಪೃಷ್ಠಂ ಸಮುದ್ದಿಷ್ಟಂ ಮಹಾಬಲಃ ॥ ೧೯ ॥

ಸೋಽಪಶ್ಯತ್ ಪಥಿ ರಾಜೇಂದ್ರೋ ಗಂಧರ್ವವರಮುತ್ತಮಮ್ ।
ಭ್ರಾಜಮಾನಂ ಶ್ರಿಯಾ ವ್ಯೋಮ್ನಿ ಭೂಷಿತಂ ದಿವ್ಯಮಾಲಯಾ ॥ ೨೦ ॥

---

೧೭. ರಾಜನೇ! ನೀನು ಹೀಗೆ ಭಯಪಡಲಾಗದು, ನೀನು ಆಚರಿಸಿದ ಪಾಪಕ್ಕೆ ಪ್ರಾಯಶ್ಚಿತ್ತವು ಮಾಡಲ್ಪಡಬೇಕು, ಮಹಾರಾಜನೆ! ನೀನು ಭೀತನಾದರೆ ನಿನ್ನ ರಾಷ್ಟ್ರವು ನಾಶಹೊಂದುವುದು.

೧೮. ಅನಂತರದಲ್ಲಿ ತೇಜಸ್ವಿಯಾದ ಆ ರಾಜನು ತನ್ನ ನಗರದಿಂದ ಹೊರಕ್ಕೆ ಹೊರಟು ಕಣ್ವಮುನಿಯ ಆಶ್ರಮಕ್ಕೆ ಹೋಗಿ ಅಲ್ಲಿ ಕಣ್ವಮಹಾಮುನಿಯನ್ನು ಸಂದರ್ಶಿಸಿದನು.

೧೯. ಮತ್ತು ಮಹಾಬಲಿಷ್ಠನಾದ ರಾಜನು ಕಣ್ವಮುನಿಯ ಉಪದೇಶದಿಂದ ಮಂಗಳಕರವಾದ ಪ್ರಾಯಶ್ಚಿತ್ತ ವಿಧಾನವನ್ನು ಕೇಳಿ ಮುನಿಯು ಬೋಧಿಸಿದಂತೆ ಹಿಮಾಚಲಶಿಖರಕ್ಕೆ ತೆರಳಿದನು.

೨೦. ಆ ರಾಜೇಂದ್ರನು ಮಾರ್ಗದಲ್ಲಿ ಪ್ರಯಾಣಮಾಡುತ್ತಾ ಸೌಂದರ್ಯದಿಂದ ಪ್ರಕಾಶಿಸುತ್ತಿರುವ ದಿವ್ಯಮಾಲೆಯಿಂದ ಅಲಂಕರಿಸಲ್ಪಟ್ಟ ಗಂಧರ್ವರಾಜನನ್ನು ಆಕಾಶದಲ್ಲಿ ನೋಡಿದನು.

ವೀಕ್ಷ್ಯ ಮಾಲಾಮಮಿತ್ರಘ್ನಃ ಸಸ್ಮಾರಾಪ್ಸರಸಂ ವರಾಮ್ ।
ಉರ್ವಶೀಂ ತಾಂ ಮನಶ್ಚಕ್ರೇ ತಸ್ಯಾ ಏವೇಯಮರ್ಹತಿ ॥ ೨೧ ॥

ಸೋಽತೀವ ಕಾಮುಕೋ ರಾಜಾ ಗಂಧರ್ವೇಣಾಥ ತೇನ ಹಿ ।
ಚಕಾರ ಸುಮಹದ್ಯುದ್ಧಂ ಮಾಲಾಮಾದಾತುಮುದ್ಯತಃ ॥ ೨೨ ॥

ವಿಜಿತ್ಯ ಸಮರೇ ಮಾಲಾಂ ಗೃಹೀತ್ವಾ ದುರ್ಜಯೋ ದ್ವಿಜಾಃ ।
ಜಗಾಮ ತಾಮಪ್ಸರಸಂ ಕಾಲಿಂದೀಂ ದ್ರಷ್ಟುಮಾದರಾತ್ ॥ ೨೩ ॥

ಅದೃಷ್ಟ್ವಾಪ್ಸರಸಂ ತತ್ರ ಕಾಮಬಾಣಾಭಿಪೀಡಿತಃ ।
ಬಭ್ರಾಮ ಸಕಲಾಂ ಪೃಥ್ವೀಂ ಸಪ್ತದ್ವೀಪಸಮನ್ವಿತಾಮ್ ॥ ೨೪ ॥

---

೨೧. ಆಗ ಶತ್ರುಸಂಹಾರಿಯಾದ ಆ ರಾಜನು ಗಂಧರ್ವನಲ್ಲಿದ್ದ ದಿವ್ಯಮಾಲೆಯನ್ನು ನೋಡಿ ಅಪ್ಸರಾಂಗನೆಯರಲ್ಲಿ ಶ್ರೇಷ್ಠಳಾದ ಆ ಉರ್ವಶಿಯನ್ನು ಸ್ಮರಿಸಿ ಈ ದಿವ್ಯಮಾಲೆಯು ಉರ್ವಶಿಯದಾಗಿದೆ, ಎಂದು ಮನಸ್ಸಿನಲ್ಲಿ ಚಿಂತಿಸಿದನು.

೨೨. ಆಗ ಅತ್ಯಂತ ಕಾಮುಕನಾದ ಆ ರಾಜನು ಗಂಧರ್ವರಾಜನಲ್ಲಿದ್ದ ಆ ದಿವ್ಯಮಾಲೆಯನ್ನು ಅಪಹರಿಸುವ ಇಷ್ಟವುಳ್ಳವನಾಗಿ ಆ ಗಂಧರ್ವನೊಡನೆ ಮಹಾಯುದ್ಧವನ್ನು ಮಾಡಿದನು.

೨೩. ದ್ವಿಜರೇ ! ದುರ್ಜಯನಾದ ರಾಜನು ಯುದ್ಧದಲ್ಲಿ ಗಂಧರ್ವನನ್ನು ಗೆದ್ದು ಆ ದಿವ್ಯಮಾಲೆಯನ್ನು ತೆಗೆದುಕೊಂಡು ಆ ಉರ್ವಶಿಯೆಂಬ ಅಪ್ಸರಾಂಗನೆಯನ್ನು ನೋಡಲು ಆದರದಿಂದ ಕಾಳಿಂದೀ ನದಿಗೆ ಹೋದನು.

೨೪. ಅಲ್ಲಿ ಆ ಉರ್ವಶಿಯನ್ನು ಕಾಣದೆ ಮನ್ಮಥಬಾಣದಿಂದ ಅತಿಶಯವಾಗಿ ಪೀಡಿಸಲ್ಪಟ್ಟ ಆ ರಾಜನು ಸಪ್ತದ್ವೀಪಗಳಿಂದ ಕೂಡಿದ ಸಮಸ್ತಭೂಮಿಯನ್ನೂ ಅಲೆದನು.

ಆಕ್ರಮ್ಯ ಹಿಮವತ್ಪಾರ್ಶ್ವಮುರ್ವಶೀದರ್ಶನೋತ್ಸುಕಃ ।
ಜಗಾಮ ಶೈಲಪ್ರವರಂ ಹೇಮಕೂಟಮಿತಿ ಶ್ರುತಮ್ ॥ ೨೫ ॥

ತತ್ರ ತತ್ರಾಪ್ಸರೋವರ್ಯಾ ದೃಷ್ಟ್ವಾ ತಂ ಸಿಂಹವಿಕ್ರಮಮ್ ।
ಕಾಮಂ ಸಂದಧಿರೇ ಘೋರಂ ಭೂಷಿತಂ ಚಿತ್ರಮಾಲಯಾ ॥ ೨೬ ॥

ಸಂಸ್ಮರನ್ನೂರ್ವಶೀವಾಕ್ಯಂ ತಸ್ಯಾಂ ಸಂಸಕ್ತಮಾನಸಃ ।
ನ ಪಶ್ಯತಿ ಸ್ಮ ತಾಃ ಸರ್ವಾ ಗಿರೇಃ ಶೃಂಗಾಣಿ ಜಗ್ಮಿವಾನ್ ॥ ೨೭ ॥

ತತ್ರಾಪ್ಯಪ್ಸರಸಂ ದಿವ್ಯಾಮದೃಷ್ಟ್ವಾ ಕಾಮಪೀಡಿತಃ ।
ದೇವಲೋಕಂ ಮಹಾಮೇರುಂ ಯಯೌ ದೇವಪರಾಕ್ರಮಃ ॥ ೨೮ ॥

---

೨೫. ಮತ್ತು ಉರ್ವಶೀದೇವಿಯ ದರ್ಶನದಲ್ಲಿ ಕುತೂಹಲವುಳ್ಳವನಾಗಿ ಹಿಮವತ್ಪರ್ವತದ ಪಾರ್ಶ್ವವನ್ನು ದಾಟಿ ಹೇಮಕೂಟವೆಂದು ಪ್ರಸಿದ್ಧವಾದ ಒಂದು ಶ್ರೇಷ್ಠ ಪರ್ವತವನ್ನು ಹೊಂದಿದನು.

೨೬. ಆಯಾಯ ಪ್ರದೇಶಗಳಲ್ಲಿ ಇರುವ ಸುಂದರಿಯರಾದ ಅಪ್ಸರಾಂಗನೆಯರು ಸಿಂಹದಂತೆ ವಿಕ್ರಮವುಳ್ಳವನೂ ಚಿತ್ರಮಾಲೆಯಿಂದ ಭೂಷಿಸಲ್ಪಟ್ಟವನೂ ಆದ ಆ ರಾಜನನ್ನು ನೋಡಿ ಘೋರವಾದ ಕಾಮವಿಕಾರವನ್ನುಂಟುಮಾಡಿದರು.

೨೭. ಆದರೆ ಊರ್ವಶಿಯಲ್ಲಿ ಅಂಟಿಕೊಂಡಿರುವ ಮಾನಸವುಳ್ಳ ಆ ರಾಜನು ಆ ಉರ್ವಶಿಯ ವಾಕ್ಯವನ್ನು ಸ್ಮರಿಸುತ್ತಾ ಆ ಎಲ್ಲ ವನಿತೆಯರನ್ನು ನೋಡದೆ ಪರ್ವತದ ಶಿಖರಗಳಲ್ಲಿ ಸುತ್ತಿದನು.

೨೮. ಅಲ್ಲಿಯೂ ದಿವ್ಯಳಾದ ಉರ್ವಶಿಯನ್ನು ಕಾಣದೆ ಕಾಮವಿಕಾರದಿಂದ ಪೀಡಿಸಲ್ಪಟ್ಟವನಾಗಿ ದೇವತೆಗಳಿಗೆ ತುಲ್ಯವಾದ ಪರಾಕ್ರಮವುಳ್ಳ ಆ ರಾಜನು ಮಹಾಮೇರುಪರ್ವತದಲ್ಲಿರುವ ದೇವಲೋಕಕ್ಕೆ ಹೋದನು.

ಸ ತತ್ರ ಮಾನಸಂ ನಾಮ ಸರಸ್ತ್ರೈಲೋಕ್ಯವಿಶ್ರುತಮ್ ।
ಭೇಜೇ ಶೃಂಗಮತಿಕ್ರಮ್ಯ ಸ್ವಬಾಹುಬಲಭಾವಿತಃ ॥ ೨೯ ॥

ತಸ್ಯ ತೀರೇಷು ಸುಭಗಾಂ ಚರಂತೀಮತಿಲಾಲಸಾಮ್ ।
ದೃಷ್ಟವಾನನವದ್ಯಾಂಗೀಂ ತಸ್ಯೈ ಮಾಲಾಂ ದದೌ ಪುನಃ ॥ ೩೦ ॥

ಸ ಮಾಲಯಾ ತದಾ ದೇವೀಂ ಭೂಷಿತಾಂ ಪ್ರೇಕ್ಷ್ಯ ಮೋಹಿತಃ ।
ರೇಮೇ ಕೃತಾರ್ಥಮಾತ್ಮಾನಂ ಜಾನಾನಃ ಸುಚಿರಂ ತಯಾ ॥ ೩೧ ॥

ಅಥೋರ್ವಶೀ ರಾಜವರ್ಯಂ ರತಾಂತೇ ವಾಕ್ಯಮಬ್ರವೀತ್ ।
ಕಿಂ ಕೃತಂ ಭವತಾ ವೀರ ಪುರೀಂ ಗತ್ವಾ ತದಾ ನೃಪ ॥ ೩೨ ॥

---

೨೯. ಅಲ್ಲಿ ತನ್ನ ಬಾಹುಬಲದಿಂದ ಪ್ರಖ್ಯಾತನಾದ ಆ ರಾಜನು ಆ ಗಿರಿಶೃಂಗವನ್ನು ದಾಟಿ ಮೂರು ಲೋಕಗಳಲ್ಲಿ ಪ್ರಸಿದ್ಧವಾದ ಮಾನಸವೆಂಬ ಸರೋವರವನ್ನು ಹೊಂದಿದನು.

೩೦ ಆ ಸರೋವರದ ತೀರಗಳಲ್ಲಿ ಸಂಚರಿಸುತ್ತಿರುವ ಅತಿ ಲಾಲಸೆಯುಳ್ಳವಳೂ. ಸುಂದರವಾದ ಅಂಗವುಳ್ಳವಳೂ ಆದ ಆ ಸುಂದರಿಯನ್ನು ಕಂಡು ಅವಳಿಗೆ ಮತ್ತೆ ಆ ದಿವ್ಯಮಾಲೆಯನ್ನು ಅರ್ಪಿಸಿದನು.

೩೧. ಆ ರಾಜನು ಮಾಲೆಯಿಂದ ಭೂಷಿಸಲ್ಪಟ್ಟ ಆ ಊರ್ವಶೀದೇವಿಯನ್ನು ನೋಡಿ ಮೋಹಗೊಂಡವನಾಗಿ ತನ್ನನ್ನು ಕೃತಾರ್ಥನೆಂದು ಭಾವಿಸಿದವನಾಗಿ ಅವಳೊಡನೆ ಬಹಳಕಾಲ ರಮಿಸಿದನು.

೩೨. ಅನಂತರದಲ್ಲಿ ರತಿವಿಹಾರದ ಕಡೆಯಲ್ಲಿ ಉರ್ವಶಿಯು ರಾಜಶ್ರೇಷ್ಠನನ್ನು ಕುರಿತು ಈ ವಚನವನ್ನು ಹೇಳಿದಳು. ವೀರರಾಜನೇ! ಆಗ ನೀನು ಪಟ್ಟಣಕ್ಕೆ ಹೋಗಿ ಏನು ಮಾಡಿದೆ ?

ಸ ತಸ್ಯೈ ಸರ್ವಮಾಚಷ್ಟ ಪತ್ನ್ಯಾ ಯತ್ಸಮುದೀರಿತಮ್ ।
ಕಣ್ವಸ್ಯ ದರ್ಶನಂ ಚೈವ ಮಾಲಾಪಹರಣಂ ತಥಾ　　　　॥ ೩೩ ॥

ಶ್ರುತ್ವೈತದ್ವ್ಯಾಹೃತಂ ತೇನ ಗಚ್ಛೇತ್ಯಾಹ ಹಿತೈಷಿಣೀ ।
ಶಾಪಂ ದಾಸ್ಯತಿ ತೇ ಕಣ್ವೋ ಮಮಾಪಿ ಭವತಃ ಪ್ರಿಯಾ　　　　॥ ೩೪ ॥

ತಯಾ ಸಕೃನ್ಮಹಾರಾಜಃ ಪ್ರೋಕ್ತೋಽಪಿ ಮದಮೋಹಿತಃ ।
ನ ಚ ತತ್ಕೃತವಾನ್ ವಾಕ್ಯಂ ತತ್ರ ಸಕ್ತಮಾನಸಃ　　　　॥ ೩೫ ॥

ತದೋರ್ವಶೀ ಕಾಮರೂಪಾ ರಾಜ್ಞೇ ಸ್ವಂ ರೂಪಮುತ್ಕಟಮ್ ।
ಸುರೋಮಶಂ ಪಿಂಗಲಾಕ್ಷಂ ದರ್ಶಯಾಮಾಸ ಸರ್ವದಾ　　　　॥ ೩೬ ॥

---

೩೩. ಆ ರಾಜನು ಪತ್ನಿಯಿಂದ ಹೇಳಲ್ಪಟ್ಟ ವಚನವನ್ನೂ ಕಣ್ವಮಹಾ ಮುನಿಯ ವಚನವನ್ನೂ ಗಂಧರ್ವನಿಂದ ಮಾಲೆಯ ಅಪಹಾರವನ್ನೂ ಎಲ್ಲಾ ವೃತ್ತಾಂತವನ್ನೂ ತಿಳಿಸಿದನು.

೩೪. ಊರ್ವಶಿಯು ಅವನಿಂದ ಹೇಳಲ್ಪಟ್ಟ ಸರ್ವವೃತ್ತಾಂತವನ್ನು ಕೇಳಿ ಹಿತೈಷಿಣಿಯಾಗಿ ನೀನು ನಿನ್ನ ನಗರಕ್ಕೆ ಹೋಗು. ಕಣ್ವಮುನಿಯು ನಿನಗೆ ಶಾಪ ಕೊಡುವನು. ನಿನ್ನ ಸತಿಯಾದ ಪತಿವ್ರತೆಯು ನನ್ನನ್ನು ಶಪಿಸುವಳು.

೩೫. ಆ ಊರ್ವಶಿಯಿಂದ ಮಹಾರಾಜನು ಒಂದುಸಲ ಹೀಗೆ ಹೇಳಲ್ಪಟ್ಟರೂ ಕಾಮಮದದಿಂದ ಪೀಡಿಸಲ್ಪಟ್ಟವನಾದನು. ಆ ವಿಷಯದಲ್ಲಿ ಪರಿತ್ಯಾಗಮಾಡಿದ ಮಾನಸವುಳ್ಳವನಾಗಿ ಆ ಮಾತನ್ನು ಆಚರಿಸಲಿಲ್ಲ.

೩೬. ಆಗ ಕಾಮರೂಪಿಣಿಯಾದ ಊರ್ವಶಿಯು ರಾಜನಿಗೆ ಹೆಚ್ಚಾದ ರೋಮಗಳಿಂದ ಕೂಡಿದ ಮತ್ತು ಪಿಂಗಲವರ್ಣದ ನೇತ್ರವುಳ್ಳ ಯಾವಾಗಲೂ ಭಯಂಕರವಾದ ತನ್ನ ರೂಪವನ್ನು ತೋರಿಸಿದಳು.

ತಸ್ಯಾಂ ವಿರಕ್ತಚೇತಸ್ಕಃ ಸ್ಮೃತ್ವಾ ಕಣ್ವಾಭಿಭಾಷಿತಮ್ ।
ಧಿಙ್ಮಾಮಿತಿ ವಿನಿಶ್ಚಿತ್ಯ ತಪಃ ಕರ್ತುಂ ಸಮಾರಭತ್ ॥ ೩೭ ॥

ಸಂವತ್ಸರದ್ವಾದಶಕಂ ಕಂದಮೂಲಫಲಾಶನಃ ।
ಭೂಯ ಏವ ದ್ವಾದಶಕಂ ವಾಯುಭಕ್ಷೋಽಭವನ್ನೃಪಃ ॥ ೩೮ ॥

ಗತ್ವಾ ಕಣ್ವಾಶ್ರಮಂ ಭೀತ್ಯಾ ತಸ್ಮೈ ಸರ್ವಂ ನ್ಯವೇದಯತ್ ।
ವಾಸಮಪ್ಸರಸಾ ಭೂಯಸ್ತಪೋಯೋಗಮನುತ್ತಮಮ್ ॥ ೩೯ ॥

ವೀಕ್ಷ್ಯ ತಂ ರಾಜಶಾರ್ದೂಲಂ ಪ್ರಸನ್ನೋ ಭಗವಾನೃಷಿಃ ।
ಕರ್ತುಕಾಮೋ ಹಿ ನಿರ್ಬೀಜಂ ತಸ್ಯಾಘಮಿದಮಬ್ರವೀತ್ ॥ ೪೦ ॥

---

೩೭. ಆ ಉಲ್ಬಣರೂಪವುಳ್ಳ ಊರ್ವಶಿಯಲ್ಲಿ ವೈರಾಗ್ಯ ಹೊಂದಿದ ಮಾನಸವುಳ್ಳ ರಾಜನು ಕಣ್ವಮುನಿಯ ಆದೇಶವನ್ನು ಸ್ಮರಿಸಿ ತನಗೆ ಧಿಕ್ಕಾರವುಂಟಾಯಿತು, ಎಂದು ನಿಶ್ಚಯಿಸಿ ತಪವನ್ನು ಆಚರಿಸಲು ಪ್ರಾರಂಭಿಸಿದನು.

೩೮. ಆ ತಪಶ್ಚರ್ಯೆಯಲ್ಲಿ ರಾಜನು ಹನ್ನೆರಡು ವರ್ಷಗಳವರೆಗೆ ಕಂದಮೂಲ ಪುಷ್ಪಗಳನ್ನು ಭುಂಜಿಸುತ್ತಿದ್ದನು. ಮತ್ತೆ ಹನ್ನೆರಡು ವರ್ಷಗಳವರೆಗೆ ರಾಜನು ವಾಯು ಭಕ್ಷನಾಗಿದ್ದನು.

೩೯. ಹಾಗೆ ಭೀತಿಯಿಂದ ಕಣ್ವಮುನಿಯ ಆಶ್ರಮಕ್ಕೆ ಹೋಗಿ ಊರ್ವಶಿಯೊಡನೆ ಮತ್ತೆ ವಾಸ ಮಾಡಿರುವುದು. ಅಲ್ಲಿಂದ ವಿರಕ್ತನಾಗಿ ನಿರುಪಮವಾದ ತಪೋಯೋಗದಲ್ಲಿ ನಿರತನಾಗಿರುವುದು, ಮುಂತಾದ ಸರ್ವವೃತ್ತಾಂತವನ್ನು ಮುನಿಗೆ ತಿಳಿಸಿದನು.

೪೦. ಆಗ ಪೂಜ್ಯನಾದ ಕಣ್ವಮುನಿಯು ಆ ರಾಜ ಶ್ರೇಷ್ಠನನ್ನು ನೋಡಿ ಪ್ರಸನ್ನನಾಗಿ ಅವನ ಸಮಸ್ತ ಪಾತಕವನ್ನೂ ನಿರ್ಬೀಜಮಾಡಲು ಇಷ್ಟವುಳ್ಳವನಾಗಿ ಈರೀತಿ ಹೇಳಿದನು.

ಕಣ್ವ ಉವಾಚ :-

ಗಚ್ಛ ವಾರಾಣಸೀಂ ದಿವ್ಯಾಮೀಶ್ವರಾಧ್ಯುಷಿತಾಂ ಪುರೀಮ್ ।
ಆಸ್ತೇ ಮೋಚಯಿತುಂ ಲೋಕಂ ತತ್ರ ದೇವೋ ಮಹೇಶ್ವರಃ ॥ ೪೧ ॥

ಸ್ನಾತ್ವಾ ಸಂತರ್ಪ್ಯ ವಿಧಿವದ್ಗಂಗಾಯಾಂ ದೇವತಾಃ ಪಿತೄನ್ ।
ದೃಷ್ಟ್ವಾ ವಿಶ್ವೇಶ್ವರಂ ಲಿಂಗಂ ಕಿಲ್ಬಿಷಾನ್ಮೋಕ್ಷ್ಯಸೇ ಕ್ಷಣಾತ್ ॥ ೪೨ ॥

ಪ್ರಣಮ್ಯ ಶಿರಸಾ ಕಣ್ವಮನುಜ್ಞಾಪ್ಯ ಚ ದುರ್ಜಯಃ ।
ವಾರಾಣಸ್ಯಾಂ ಹರಂ ದೃಷ್ಟ್ವಾ ಪಾಪಾನ್ಮುಕ್ತೋಽಭವತ್ತತಃ ॥ ೪೩ ॥

ಜಗಾಮ ಸ್ವಪುರೀಂ ಶುಭ್ರಾಂ ಯಾಜಯಾಮಾಸ ಮೇದಿನೀಮ್ ।
ಯಾಜಯಾಮಾಸ ತಂ ಕಣ್ವೋ ಯಾಚಿತೋ ಘೃಣಯಾ ಮುನಿಃ॥೪೪॥

---

೪೧. ಕಣ್ವಮಹಾಮುನಿಯು ಹೀಗೆಂದನು :— ರಾಜನೇ ! ಈಶ್ವರನಿಂದ ವಾಸಮಾಡಲ್ಪಟ್ಟ ದಿವ್ಯವಾದ ವಾರಾಣಸೀ ನಗರಕ್ಕೆ ನೀನು ಹೋಗು. ಆ ಕ್ಷೇತ್ರದಲ್ಲಿ ಭಕ್ತಜನರಿಗೆ ಮುಕ್ತಿಯನ್ನು ಕೊಡಲು ಮಹೇಶ್ವರನು ವಾಸಮಾಡಿದ್ದಾನೆ.

೪೨. ಅಲ್ಲಿ ಗಂಗಾತೀರ್ಥದಲ್ಲಿ ವಿಧಿವತ್ತಾಗಿ ಸ್ನಾನಮಾಡಿ ದೇವ ಮತ್ತು ಪಿತೃಗಣಕ್ಕೆ ತರ್ಪಣಾಂಜಲಿಯನ್ನು ಕೊಟ್ಟು ವಿಶ್ವೇಶ್ವರಸ್ವಾಮಿಯ ಲಿಂಗವನ್ನು ದರ್ಶನಮಾಡಿ ಸಮಸ್ತ ಪಾಪಗಳಿಂದ ನಿಮಿಷದಲ್ಲಿ ಮುಕ್ತನಾಗುವೆ.

೪೩. ಆಮೇಲೆ ದುರ್ಜಯರಾಜನು ಕಣ್ವಮುನಿಯನ್ನು ತಲೆಬಾಗಿ ನಮಸ್ಕರಿಸಿ ಅವನ ಅನುಮತಿಯನ್ನು ಪಡೆದು ವಾರಾಣಸೀಕ್ಷೇತ್ರಕ್ಕೆ ಹೋಗಿ ಮಹೇಶ್ವರನನ್ನು ಸಂದರ್ಶಿಸಿ ಪಾಪನಿರ್ಮುಕ್ತನಾದನು.

೪೪. ತರುವಾಯ ಪವಿತ್ರವಾದ ತನ್ನ ನಗರಿಗೆ ಹೋಗಿ ರಾಜ್ಯವನ್ನು ಪಾಲಿಸಿದನು. ಮತ್ತು ತಾನು ಯಜ್ಞಕರ್ಮವನ್ನು ನೆರವೇರಿಸಲು ಕಣ್ವಮುನಿಯನ್ನು ಪ್ರಾರ್ಥಿಸಲು ಕೃಪಾಳುವಾದ ಕಣ್ವಮುನಿಯು ಅವನಿಂದ ಯಾಗಮಾಡಿಸಿದನು.

ತಸ್ಯ ಪುತ್ರೋಽಥ ಮತಿಮಾನ್ ಸುಪ್ರತೀಕ ಇತಿ ಸ್ಮೃತಃ ।
ಬಭೂವ ಜಾತಮಾತ್ರಂ ತಂ ರಾಜಾನಮುಪತಿಸ್ಥಿರೇ ॥ ೪೫ ॥

ಉರ್ವಶ್ಯಾಂ ಚ ಮಹಾವೀರ್ಯಾಃ ಸಪ್ತ ದೇವಸುತೋಪಮಾಃ ।
ಕನ್ಯಾ ಜಗೃಹಿರೇ ಸರ್ವಾ ಗಂಧರ್ವೋ ದಯಿತಾ ದ್ವಿಜಾಃ ॥ ೪೬ ॥

ಏಷ ವಃ ಕಥಿತಃ ಸಮ್ಯಕ್ ಸಹಸ್ರಜಿತ ಉತ್ತಮಃ ।
ವಂಶಃ ಪಾಪಹರೋ ನೃಣಾಂ ಕ್ರೋಷ್ಟೋರಪಿ ನಿಬೋಧತ ॥ ೪೭ ॥

ಇತಿ ಶ್ರೀ ಕೂರ್ಮಪುರಾಣೇ ತ್ರಯೋವಿಂಶೋಽಧ್ಯಾಯಃ.

---

೪೫. ಆ ದುರ್ಜಯರಾಜನಿಗೆ ಸುಪ್ರತೀಕ ಎಂದು ಸ್ಮರಿಸಲ್ಪಟ್ಟ ವಿವೇಕಿಯಾದ ಪುತ್ರನಿದ್ದನು. ಆ ಪುತ್ರನು ಹುಟ್ಟಿದಕೂಡಲೆ ಸಮಸ್ತ ಪ್ರಜೆಗಳೂ ಅವನನ್ನು ರಾಜನಂತೆ ಸೇವಿಸಿದರು.

೪೬. ದ್ವಿಜರೇ ! ಊರ್ವಶಿಯಲ್ಲಿ ದೇವಪುತ್ರರಿಗೆ ಸಮಾನರಾದ ಮತ್ತು ವೀರ್ಯವಂತರಾದ ಏಳು ಮಂದಿ ಪುತ್ರರು ಜನಿಸಿದರು. ಅವರು ಗಂಧರ್ವಜಾತಿಯ ಸುಂದರ ಕನ್ಯೆಯರನ್ನು ಪತ್ನಿಯರನ್ನಾಗಿ ಪರಿಗ್ರಹಿಸಿದರು.

೪೭. ಮುನಿಗಳೇ ! ಈರೀತಿಯಾಗಿ ಮಾನವರ ಪಾಪವನ್ನು ಕಳೆಯುವ ಸಹಸ್ರಜಿತರಾಜನ ಉತ್ತಮವಂಶವು ನಿಮಗೆ ವರ್ಣಿಸಲ್ಪಟ್ಟಿದೆ. ಮುಂದೆ ಕ್ರೋಷ್ಟುರಾಜನ ವಂಶಾವಳಿಯನ್ನು ಕೇಳಿರಿ.

ಕೂರ್ಮಪುರಾಣದಲ್ಲಿ ಇಪ್ಪತ್ತಮೂರನೆಯ ಅಧ್ಯಾಯವು ಸಮಾಪ್ತವು.

ಶ್ರೀಃ

# ಕೂರ್ಮಪುರಾಣಂ

## ಚತುರ್ವಿಂಶೋಽಧ್ಯಾಯಃ

**ಸೂತ ಉವಾಚ :—**

**ಕ್ರೋಷ್ಟೋರೇಕೋಽಭವತ್ಪುತ್ರೋ ವಜ್ರವಾನಿತಿ ವಿಶ್ರುತಃ ।**
**ತಸ್ಯ ಪುತ್ರೋಽಭವಚ್ಛಾಂತಿಃ ಕುಶಿಕಸ್ತತ್ಸುತೋಽಭವತ್ ॥ ೧ ॥**

**ಕುಶಿಕಾದಭವತ್ಪುತ್ರೋ ನಾಮ್ನಾ ಚಿತ್ರರಥೋ ಬಲೀ ।**
**ಅಥ ಚೈತ್ರರಥಿರ್ಲೋಕೇ ಶಶಬಿಂದುರಿತಿ ಸ್ಮೃತಃ ॥ ೨ ॥**

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಕ್ರೋಷ್ಟುರಾಜನಿಗೆ ವಜ್ರವಾ೯ ಎಂಬ ಹೆಸರಿನಿಂದ ಪ್ರಸಿದ್ಧನಾದ ಪುತ್ರನಿದ್ದನು. ಅವನಿಗೆ ಶಾಂತಿ ಎಂಬ ಪುತ್ರನೂ ಶಾಂತಿಗೆ ಕುಶಿಕ ಎಂಬ ಪುತ್ರನೂ ಇದ್ದರು.

೨. ಕುಶಿಕನಿಂದ ಚಿತ್ರರಥ ಎಂಬ ಹೆಸರಿನಿಂದ ಅಂಕಿತನಾದ ಬಲಿಷ್ಠನಾದ ಪುತ್ರನು ಹುಟ್ಟಿದನು. ತರುವಾಯ ಆ ಚಿತ್ರರಥನಿಗೆ ಶಶಬಿಂದು ಎಂದು ಲೋಕದಲ್ಲಿ ಸ್ಮರಿಸಲ್ಪಟ್ಟ ಪುತ್ರನು ಹುಟ್ಟಿದನು.

ತಸ್ಯ ಪುತ್ರಃ ಪೃಥುಯಶಾ ರಾಜಾಭೂದ್ಧರ್ಮತತ್ಪರಃ ।
ಪೃಥುಕರ್ಮಾ ಚ ತತ್ಪುತ್ರಸ್ತಸ್ಮಾತ್ ಪೃಥುಜಯೋಽಭವತ್ ॥ ೩ ॥

ಪೃಥುಕೀರ್ತಿರಭೂತ್ತಸ್ಮಾತ್ ಪೃಥುದಾನಸ್ತತೋಽಭವತ್ ।
ಪೃಥುಶ್ರವಾಸ್ತಸ್ಯ ಪುತ್ರಸ್ತಸ್ಯಾಸೀತ್ಪೃಥುಸತ್ತಮಃ ॥ ೪ ॥

ಉಶನಾಸ್ತಸ್ಯ ಪುತ್ರೋಽಭೂಚ್ಛತೇಷುಸ್ತತ್ಸುತೋಽಭವತ್ ।
ತಸ್ಮಾದ್ರೈ ರುಕ್ಮಕವಚಃ ಪರಾವೃತ್ತಶ್ಚ ತತ್ಸುತಃ ॥ ೫ ॥

ಪರಾವೃತ್ತಸುತೋ ಜಜ್ಞೇ ಯಾಮುಘೋ ಲೋಕವಿಶ್ರುತಃ ।
ತಸ್ಮಾದ್ವಿದರ್ಭಃ ಸಂಜಜ್ಞೇ ವಿದರ್ಭಾತ್ಕ್ರಥಕೌಶಿಕಾ ॥ ೬ ॥

---

೩. ಶಶಬಿಂದುವಿಗೆ ಧರ್ಮದಲ್ಲಿ ತತ್ಪರನಾದ ಪೃಥುಯಶ ಎಂಬ ರಾಜನು ಪುತ್ರನಾಗಿ ಜನಿಸಿದನು. ಪೃಥುಯಶನಿಗೆ ಪೃಥುಕರ್ಮ ಎಂಬ ಪುತ್ರನೂ ಅವನಿಗೆ ಪೃಥುಜಯ ಎಂಬ ಪುತ್ರನೂ ಜನಿಸಿದರು.

೪. ಪೃಥುಜಯನಿಗೆ ಪೃಥುಕೀರ್ತಿ ಎಂಬ ಪುತ್ರನಿದ್ದನು. ಅವನಿಂದ ಪೃಥುದಾನ ಎಂಬ ಕುಮಾರನು ಜನಿಸಿದನು. ಅವನಿಗೆ ಪೃಥುಶ್ರವ ಎಂಬ ಪುತ್ರನೂ ಅವನಿಗೆ ಪೃಥು ಸತ್ತಮ ಎಂಬ ಪುತ್ರನೂ ಜನಿಸಿದರು.

೫. ಪೃಥುಸತ್ತಮನಿಗೆ ಉಶನ ಎಂಬ ಪುತ್ರನಿದ್ದನು. ಅವನಿಗೆ ಶತೇಷು ಎಂಬುವನು ಪುತ್ರನಾಗಿ ಜನಿಸಿದನು. ಅವನಿಂದ ರುಕ್ಮಕವಚ ಎಂಬ ಕುಮಾರನು ಹುಟ್ಟಿದನು. ಅವನಿಗೆ ಪರಾವೃತ್ತ ಎಂಬುವನು ಪುತ್ರನಾಗಿ ಜನಿಸಿದನು.

೬. ಪರಾವೃತ್ತನ ಮಗನು ಯಾಮುಘ ಎಂದು ಲೋಕದಲ್ಲಿ ಪ್ರಸಿದ್ಧನಾಗಿ ಹುಟ್ಟಿದನು. ಅವನಿಂದ ವಿದರ್ಭನೆಂಬ ಪುತ್ರನು ಹುಟ್ಟಿದನು. ವಿದರ್ಭನಿಗೆ ಕ್ರಥ, ಕೌಶಿಕ ಎಂಬ ಪುತ್ರರು ಹುಟ್ಟಿದರು.

ಲೋಮಪಾದಸ್ತೃತೀಯಸ್ತು ಬಭ್ರುಸ್ತಸ್ಯಾತ್ಮಜೋ ನೃಪಃ ।
ಧೃತಿಸ್ತಸ್ಯಾಭವತ್ಪುತ್ರಃ ಶ್ವೇತಸ್ತಸ್ಯಾಪ್ಯಭೂತ್ ಸುತಃ ॥ ೭ ॥

ಶ್ವೇತಸ್ಯ ಪುತ್ರೋ ಬಲವಾನ್ನಾಮ್ನಾ ವಿಶ್ವಸಹಃ ಸ್ಮೃತಃ ।
ತಸ್ಯ ಪುತ್ರೋ ಮಹಾವೀರ್ಯಃ ಪ್ರಭಾವಾತ್ ಕೌಶಿಕಃ ಸ್ಮೃತಃ ॥ ೮ ॥

ಅಭೂತ್ತಸ್ಯ ಸುತೋ ಧೀಮಾನ್ ಸುಮಂತ್ರಶ್ಚ ತತೋಽನಲಃ ।
ಅನಲಸ್ಯ ಸುತಃ ಶ್ವೇನಿಃ ಶ್ವೇನೇರನ್ಯೇಽಭವನ್ ಸುತಾಃ ॥ ೯ ॥

ತೇಷಾಂ ಪ್ರಧಾನೋ ದ್ಯುತಿಮಾನ್ ವಪುಷ್ಮಾನ್ ತತ್ಸುತೋಽಭವತ್ ।
ವಪುಷ್ಮತೋ ಬೃಹನ್ಮೇಧಾಃ ಶ್ರೀದೇವಸ್ತತ್ಸುತೋಽಭವತ್ ॥ ೧೦ ॥

---

೭. ಮತ್ತು ಲೋಮಪಾದ ಎಂಬುವನು ಕ್ರಥ-ಕೌಶಿಕರ ಸಹೋದರನಾಗಿ ಹುಟ್ಟಿದನು. ಲೋಮಪಾದನಿಗೆ ಬಭ್ರುಎಂಬ ರಾಜನು ಪುತ್ರನಾಗಿ ಹುಟ್ಟಿದನು. ಅವನಿಗೆ ಧೃತಿ ಎಂಬ ಪುತ್ರನೂ ಅವನಿಗೆ ಶ್ವೇತ ಎಂಬ ಕುಮಾರನೂ ಇದ್ದರು.

೮. ಶ್ವೇತನಿಗೆ ಬಲಿಷ್ಠನೂ ವಿಶ್ವಸಹ ಎಂಬ ಹೆಸರಿನಿಂದ ಸ್ಮರಿಸಲ್ಪಟ್ಟವನೂ ಆದ ಪುತ್ರನು ಹುಟ್ಟಿದನು. ಅವನ ಪುತ್ರನಾದ ಕೌಶಿಕನು ಮಹಾಪ್ರಭಾವದಿಂದ ಮಹಾವೀರ್ಯವಂತನೆಂದು ಸ್ಮರಿಸಲ್ಪಟ್ಟನು.

೯. ಕೌಶಿಕನಿಗೆ ಬುದ್ಧಿಶಾಲಿಯಾದ ಸುಮಂತ್ರನೆಂಬ ಪುತ್ರನೂ ಅವನಿಗೆ ಅನಲನೆಂಬ ಪುತ್ರನೂ ಅನಲನಿಗೆ ಶ್ವೇನಿ ಎಂಬ ಪುತ್ರನೂ ಮತ್ತು ಶ್ವೇನಿಗೆ ಇತರ ಅನೇಕ ಪುತ್ರರೂ ಇದ್ದರು.

೧೦. ಅವರಲ್ಲಿ ವಪುಷ್ಮಾನ್ ಎಂಬ ಪುತ್ರನು ಸುಂದರನೂ ಪ್ರಧಾನನೂ ಆಗಿದ್ದನು. ಆ ವಪುಷ್ಮಂತನಿಗೆ ಬೃಹನ್ಮೇಧ ಎಂಬ ಪುತ್ರನಿದ್ದನು. ಅವನಿಗೆ ಶ್ರೀದೇವನೆಂಬ ಪುತ್ರನಿದ್ದನು.

ತಸ್ಯ ವೀತರಥೋ ವಿಪ್ರಾ ರುದ್ರಭಕ್ತೋ ಮಹಾಬಲಃ ।
ಕ್ರಥಸ್ಯಾಪ್ಯಭವತ್ ಕುಂತಿರ್ವೃಷ್ಣಿಸ್ತಸ್ಯಾಭವತ್ಸುತಃ ॥ ೧೧ ॥

ತಸ್ಮಾನ್ನವರಥೋ ನಾಮ ಬಭೂವ ಸುಮಹಾಬಲಃ ।
ಕದಾಚಿನ್ಮೃಗಯಾಂ ಯಾತೋ ದೃಷ್ಟ್ವಾ ರಾಕ್ಷಸಮೂರ್ಜಿತಮ್॥೧೨॥

ದುದ್ರಾವ ಮಹತಾವಿಷ್ಟೋ ಭಯೇನ ಮುನಿಪುಂಗವಾಃ ।
ಅನ್ವಧಾವತ ಸಂಕ್ರುದ್ಧೋ ರಾಕ್ಷಸಸ್ತಂ ಮಹಾಬಲಃ ॥ ೧೩ ॥

ದುರ್ಯೋಧನೋಽಗ್ನಿಸಂಕಾಶಃ ಶೂಲಾಸಕ್ತಮಹಾಕರಃ ।
ರಾಜಾ ನವರಥೋ ಭೀತೋ ನಾತಿದೂರಾದವಸ್ಥಿತಮ್ ॥ ೧೪ ॥

---

೧೧. ವಿಪ್ರರೇ ! ಶ್ರೀದೇವನಿಗೆ ರುದ್ರಭಕ್ತನೂ ಮಹಾಬಲಿಷ್ಠನೂ ಆದ ವೀತರಥನೆಂಬ ಕುಮಾರನಿದ್ದನು. ಪ್ರಥನಿಗೆ ಕುಂತಿ ಎಂಬ ಪುತ್ರನಿದ್ದನು. ಅವನ ಪುತ್ರನು ವೃಷ್ಣಿ ಎಂಬ ನಾಮಾಂಕಿತನಾಗಿದ್ದನು.

೧೨. ವೃಷ್ಣಿಗೆ ಮಹಾಬಲಿಷ್ಠನಾದ ನವರಥನೆಂಬ ಕುಮಾರನಿದ್ದನು. ಆ ನವರಥನು ಒಂದು ಸಮಯದಲ್ಲಿ ಮೃಗ ಬೇಟೆಗೆ ಹೋಗಿ ಊರ್ಜಿತನಾದ ಒಬ್ಬ ರಾಕ್ಷಸನನ್ನು ಕಂಡನು.

೧೩. ಮುನಿಶ್ರೇಷ್ಠರೇ ! ರಾಜನು ರಾಕ್ಷಸನನ್ನು ನೋಡಿ ಮಹಾಭಯದಿಂದ ಆವಿಷ್ಟನಾಗಿ ಓಡಿದನು.ಆಗ ಮಹಾಬಲಿಯಾದ ರಾಕ್ಷಸನು ಕೋಪಗೊಂಡು ರಾಜನನ್ನು ಹಿಂದಟ್ಟಿದನು.

೧೪. ಯುದ್ಧದಲ್ಲಿ ಜಯಿಸಲು ಅಶಕ್ಯನೂ ಅಗ್ನಿಗೆ ಸಮಾನನೂ ಶೂಲವನ್ನು ಧರಿಸಿದ ಹಸ್ತವುಳ್ಳವನೂ ಆದ ನವರಥ ರಾಜನು ಭಯಗೊಂಡವನಾಗಿ ಸಮೀಪದಲ್ಲಿರುವ ಒಂದು ಸ್ಥಾನವನ್ನು ನೋಡಿದನು.

ಅಪಶ್ಯತ್ಪರಮಂ ಸ್ಥಾನಂ ಸರಸ್ವತ್ಯಾಃ ಸುಗೋಪಿತಮ್ ।
ಸ ತದ್ವೇಗೇನ ಮಹತಾ ಸಂಪ್ರಾಪ್ಯ ಮತಿಮಾನ್ನೃಪಃ ॥ ೧೫ ॥

ವವಂದೇ ಶಿರಸಾ ದೃಷ್ಟ್ವಾ ಸಾಕ್ಷಾದ್ದೇವೀಂ ಸರಸ್ವತೀಮ್ ।
ತುಷ್ಟಾವ ವಾಗ್ಭಿರಿಷ್ಟಾಭಿರ್ಬದ್ಧಾಂಜಲಿರಮಿತ್ರಜಿತ್ ॥ ೧೬ ॥

ಪಪಾತ ದಂಡವದ್ಭೂಮೌ ತ್ವಾಮಹಂ ಶರಣಂ ಗತಃ ।
ನಮಸ್ಯಾಮಿ ಮಹಾದೇವೀಂ ಸಾಕ್ಷಾದ್ದೇವೀಂ ಸರಸ್ವತೀಮ್ ॥ ೧೭ ॥

ವಾಗ್ದೇವತಾಮನಾದ್ಯಂತಾಮೀಶ್ವರೀಂ ಬ್ರಹ್ಮಚಾರಿಣೀಮ್ ।
ನಮಸ್ಯೇ ಜಗತಾಂ ಯೋನಿಂ ಯೋಗಿನೀಂ ಪರಮಾಂ ಕಲಾಮ್॥೧೮॥

---

೧೫. ಸರಸ್ವತೀದೇವಿಯ ರಹಸ್ಯಾವಾಸವಾದ ಆ ಉತ್ತಮಸ್ಥಾನವನ್ನು ನೋಡಿ ವಿವೇಕಿಯಾದ ಆ ರಾಜನು ಮಹಾವೇಗದಿಂದ ಅಲ್ಲಿಗೆ ಬಂದನು.

೧೬. ಮತ್ತು ಶತ್ರು ವಿಜಯಿಯಾದ ರಾಜನು ಬದ್ಧಾಂಜಲಿಯಾಗಿ ಪ್ರತ್ಯಕ್ಷಳಾಗಿರುವ ಸರಸ್ವತೀ ದೇವಿಯನ್ನು ನೋಡಿ ಶಿರಸ್ಸಿನಿಂದ ನಮಸ್ಕರಿಸಿ ಪ್ರೀತಿಕರವಾದ ವಚನಗಳಿಂದ ಸ್ತುತಿಸಿದನು.

೧೭. ಮತ್ತು ದಂಡಾಕಾರವಾಗಿ ನೆಲದಲ್ಲಿ ನಮಸ್ಕಾರಮಾಡಿ ಹೀಗೆ ಪ್ರಾರ್ಥಿಸಿಕೊಂಡನು. ದೇವಿಯೇ! ನಾನು ನಿನ್ನನ್ನು ಶರಣುಹೊಂದಿರುವೆನು. ಮಹಾದೇವಿಯೂ ಕಾಂತಿಯಿಂದ ಪ್ರಕಾಶಿಸುವವಳೂ ಆದ ಸರಸ್ವತೀ ದೇವಿಯನ್ನು ವಂದಿಸುವೆನು.

೧೮. ವಾಙ್ಮಯಕ್ಕೆ ಅಧಿದೇವತೆಯೂ ಅಂತರಹಿತಳೂ ಸರ್ವೇಶ್ವರಿಯೂ ಬ್ರಹ್ಮಚಾರಿಣಿಯೂ ಪ್ರಪಂಚಕ್ಕೆ ಕಾರಣಳೂ ಯೋಗಿನಿಯೂ ಮತ್ತು ಪರಮ ಕಲಾಸ್ವರೂಪಳೂ ಆದ ದೇವಿಯನ್ನು ವಂದಿಸುವೆನು.

ಹಿರಣ್ಯಗರ್ಭಸಂಭೂತಾಂ ತ್ರಿನೇತ್ರಾಂ ಚಂದ್ರಶೇಖರಾಮ್ ।
ನಮಸ್ಯೇ ಪರಮಾನಂದಾಂ ಚಿತ್ಕಲಾಂ ಬ್ರಹ್ಮರೂಪಿಣೀಮ್ ॥ ೧೯ ॥

ಪಾಹಿ ಮಾಂ ಪರಮೇಶಾನಿ ಭೀತಂ ಶರಣಮಾಗತಮ್ ।
ಏತಸ್ಮಿನ್ನಂತರೇ ಕ್ರುದ್ಧೋ ರಾಜಾನಂ ರಾಕ್ಷಸೇಶ್ವರಃ ॥ ೨೦ ॥

ಹಂತುಂ ಸಮಾಗತಃ ಸ್ಥಾನಂ ಯತ್ರ ದೇವೀ ಸರಸ್ವತೀ ।
ಸಮುದ್ಯಮ್ಯ ತಥಾ ಶೂಲಂ ಪ್ರವಿಷ್ಟೋ ಬಲಗರ್ವಿತಃ ॥ ೨೧ ॥

ತ್ರಿಲೋಕಮಾತುರ್ಹಿ ಸ್ಥಾನಂ ಶಶಾಂಕಾದಿತ್ಯಸನ್ನಿಭಮ್ ।
ತದಂತರೇ ಮಹದ್ಭೂತಂ ಯುಗಾಂತಾದಿತ್ಯಸನ್ನಿಭಮ್ ॥ ೨೨ ॥

---

೧೯. ಬ್ರಹ್ಮದೇವನಿಂದ ಜನಿಸಿದವಳೂ ಮೂರು ನೇತ್ರಗಳಿಂದ ಶೋಭಿತಳೂ ಶಿರದಲ್ಲಿ ಚಂದ್ರಕಲೆಯಿಂದ ಭೂಷಿತಳೂ ಪರಮಾನಂದರೂಪಿಣಿಯೂ ಚಿತ್ಕಲಾಸ್ವರೂಪಿಣಿಯೂ ಮತ್ತು ಪರಬ್ರಹ್ಮರೂಪಿಣಿಯೂ ಆದ ದೇವಿಯನ್ನು ನಮಸ್ಕರಿಸುವೆನು.

೨೦. ಪರಮೇಶ್ವರಿಯೇ ! ಭಯಗೊಂಡಿರುವ ಮತ್ತು ಶರಣಾಗತನಾದ ನನ್ನನ್ನು ರಕ್ಷಿಸು, ಹೀಗೆಂದು ಪ್ರಾರ್ಥಿಸುವಷ್ಟರಲ್ಲಿ ಆ ರಾಕ್ಷಸರಾಜನು ಕ್ರುದ್ಧನಾಗಿ ರಾಜನ ಸಮೀಪಕ್ಕೆ ಬಂದನು.

೨೧. ಸರಸ್ವತಿಯು ವಾಸಮಾಡಿರುವ ಆ ಸ್ಥಾನದಲ್ಲಿ ರಾಕ್ಷಸೇಶ್ವರನು ರಾಜನನ್ನು ಸಂಹರಿಸಲು ಇಷ್ಟವುಳ್ಳವನಾಗಿ ಶಕ್ತಿಯಿಂದ ಗರ್ವಪಟ್ಟು ಶೂಲವನ್ನು ಮೇಲಕ್ಕೆತ್ತಿ ಪ್ರವೇಶಮಾಡಿದನು.

೨೨. ಆದರೆ ತ್ರಿಲೋಕಜನನಿಯಾದ ಸರಸ್ವತಿಯ ಸ್ಥಾನವು ಚಂದ್ರಸೂರ್ಯ ಮಂಡಲಗಳಂತೆ ತೇಜೋಮಯವಾಗಿತ್ತು. ಆ ಸ್ಥಾನದ ಮಧ್ಯದಲ್ಲಿ ಪ್ರಳಯಕಾಲದ ಆದಿತ್ಯನಂತೆ ಜ್ವಲಿಸುವ ಒಂದು ಮಹಾಭೂತವು ವಾಸಮಾಡಿತ್ತು.

ಶೂಲೇನೋರಸಿ ನಿರ್ಭಿದ್ಯ ಪಾತಯಾಮಾಸ ತಂ ಭುವಿ ।
ಗಚ್ಛೇತ್ಯಾಹ ಮಹಾರಾಜ ನ ಸ್ಥಾತವ್ಯಂ ತ್ವಯಾ ಪುನಃ ॥ ೨೩ ॥

ಇದಾನೀಂ ನಿರ್ಭಯಸ್ತೂರ್ಣಂ ಸ್ಥಾನೇಽಸ್ಮಿನ್ ರಾಕ್ಷಸೋ ಹತಃ ।
ತತಃ ಪ್ರಣಮ್ಯ ಹೃಷ್ಟಾತ್ಮಾ ರಾಜಾ ನವರಥಃ ಪರಮ್ ॥ ೨೪ ॥

ಪುರೀಂ ಜಗಾಮ ವಿಪ್ರೇಂದ್ರಾಃ ಪುರಂದರಪುರೋಪಮಾಮ್ ।
ಸ್ಥಾಪಯಾಮಾಸ ದೇವೇಶೀಂ ತತ್ರ ಭಕ್ತಿಸಮನ್ವಿತಃ ॥ ೨೫ ॥

ಈಜೇ ಚ ವಿವಿಧೈರ್ಯಜ್ಞೈರ್ಹೋಮೈರ್ದೇವೀಂ ಸರಸ್ವತೀಮ್ ।
ತಸ್ಯ ಚಾಸೀದ್ದಶರಥಃ ಪುತ್ರಃ ಪರಮಧಾರ್ಮಿಕಃ ॥ ೨೬ ॥

---

೨೩. ಆ ಭೂತವು ರಾಕ್ಷಸನನ್ನು ಶೂಲದಿಂದ ಸೀಳಿ ದೇಹವನ್ನು ಭೂಮಿಯಲ್ಲಿ ಎಸೆಯಿತು. ಆಗ ಸರಸ್ವತಿಯು ಮಹಾರಾಜನೇ ! ನೀನು ಇಲ್ಲಿಂದ ಹೊರಡು. ಇನ್ನುಮುಂದೆ ನೀನು ಇಲ್ಲಿರಬಾರದು.

೨೪. ಈಗ ಸ್ವಲ್ಪವೂ ಭಯವಿಲ್ಲದವನಾಗು. ಈ ಸ್ಥಾನದಲ್ಲಿ ಬಲುಬೇಗ ರಾಕ್ಷಸನು ವಧಿಸಲ್ಪಟ್ಟಿರುವನು. ಹೀಗೆಂದು ಹೇಳಲಾಗಿ ನವರಥರಾಜನು ಹೆಚ್ಚಾಗಿ ಸಂತುಷ್ಟವಾದ ಮಾನಸವುಳ್ಳವನಾಗಿ ದೇವಿಯನ್ನು ವಂದಿಸಿದನು.

೨೫. ವಿಪ್ರೇಂದ್ರರೇ ! ಅಲ್ಲಿಂದ ರಾಜನು ಇಂದ್ರನ ನಗರಕ್ಕೆ ಸಮಾನನಾದ ತನ್ನ ರಾಜಧಾನಿಯನ್ನು ಪ್ರವೇಶಿಸಿ ದೇವೀ ಭಕ್ತಿಯಿಂದ ಕೂಡಿದವನಾಗಿ ಆ ನಗರದಲ್ಲಿ ದೇವೇಶ್ವರಿಯನ್ನು ಸ್ಥಾಪಿಸಿದನು.

೨೬. ಮತ್ತು ಅನೇಕವಿಧವಾದ ಯಜ್ಞಗಳಿಂದಲೂ ಹೋಮಗಳಿಂದಲೂ ಸರಸ್ವತೀದೇವಿಯನ್ನು. ಅರ್ಚಿಸಿದನು. ಆ ನವರಥರಾಜನಿಗೆ ಧಾರ್ಮಿಕೋತ್ತಮನಾದ ದಶರಥನೆಂಬ ಪುತ್ರನು ಜನಿಸಿದನು.

ದೇವ್ಯಾ ಭಕ್ತೋ ಮಹಾತೇಜಾಃ ಶಕುನಿಸ್ತಸ್ಯ ಚಾತ್ಮಜಃ ।
ತಸ್ಮಾತ್ ಕರಂಭಃ ಸಂಭೂತೋ ದೇವರಾತೋಽಭವತ್ತತಃ ॥ ೨೭ ॥

ಈಜೇ ಸ ಚಾಶ್ವಮೇಧೇನ ದೇವಕ್ಷತ್ರಶ್ಚ ತತ್ಸುತಃ ।
ಮಧುಸ್ತಸ್ಯ ತು ದಾಯಾದಸ್ತಸ್ಮಾತ್ಕುರುರಜಾಯತ ॥ ೨೮ ॥

ಪುತ್ರದ್ವಯಮಭೂತ್ತಸ್ಯ ಸುತ್ರಾಮಾ ಚಾನುರೇವ ಚ ।
ಅನೋಸ್ತು ಪ್ರಿಯಗೋತ್ರೋಽಭೂದಂಶುಸ್ತಸ್ಯ ಚ ರಿಕ್ಥಭಾಕ್ ॥೨೯॥

ಅಥಾಂಶೋರಂಧಕೋ ನಾಮ ವಿಷ್ಣುಭಕ್ತಃ ಪ್ರತಾಪವಾನ್ ।
ಮಹಾತ್ಮಾ ದಾನನಿರತೋ ಧನುರ್ವೇದವಿದಾಂ ವರಃ ॥ ೩೦ ॥

---

೨೭. ಆ ದಶರಥನು ದೇವೀಭಕ್ತನೂ ಮಹಾತೇಜಸ್ವಿಯೂ ಆಗಿದ್ದನು. ಅವನಿಗೆ ಶಕುನಿ ಎಂಬ ಪುತ್ರನಿದ್ದನು. ಶಕುನಿಯಿಂದ ಕರಂಭ ಎಂಬ ಕುಮಾರನು ಜನಿಸಿದನು. ಅವನಿಂದ ದೇವರಾತನೆಂಬ ಕುಮಾರನು ಹುಟ್ಟಿದನು.

೨೮. ಆ ದೇವರಾತನು ಅಶ್ವಮೇಧಯಾಗವನ್ನು ಮಾಡಿದನು. ಅವನಿಗೆ ದೇವ ಕ್ಷತ್ರ ಎಂಬ ಪುತ್ರನೂ ಅವನಿಗೆ ಮಧು ಎಂಬ ಸುತನೂ ಅವನಿಗೆ ಕುರು ಎಂಬ ಕುಮಾರನೂ ಹುಟ್ಟಿದರು.

೨೯. ಕುರುರಾಜನಿಗೆ ಸುತ್ರಾಮ ಮತ್ತು ಅನು ಎಂಬ ಇಬ್ಬರು ಪುತ್ರರು ಜನಿಸಿದರು. ಅನುವಿಗೆ ಪ್ರಿಯಗೋತ್ರನೆಂಬ ಪುತ್ರನಿದ್ದನು. ಅವನ ಪುತ್ರನು ಅಂಶು ಎಂದು ನಾಮಾಂಕಿತನಾಗಿದ್ದನು.

೩೦. ಅಂಶುವಿಗೆ ವಿಷ್ಣು ಭಕ್ತನೂ ಪ್ರತಾಪಶಾಲಿಯೂ ಮಹಾತ್ಮನೂ ಮಹಾದಾನಿಯೂ ಧನುರ್ವೇದಜ್ಞರಲ್ಲಿ ಪ್ರವರನೂ ಆದ ಅಂಧಕನೆಂಬ ಪುತ್ರನಿದ್ದನು.

ಸ ನಾರದಸ್ಯ ವಚನಾದ್ವಾಸುದೇವಾರ್ಚನೇ ರತಃ ।
ಶಾಸ್ತ್ರಂ ಪ್ರವರ್ತಯಾಮಾಸ ಕುಂಡಗೋಲಾದಿಭಿಃ ಶ್ರುತಮ್ ॥ ೩೧ ॥

ತಸ್ಯ ನಾಮ್ನಾ ತು ವಿಖ್ಯಾತಂ ಸಾತ್ತ್ವತಾನಾಂ ಚ ಶೋಭನಮ್ ।
ಪ್ರವರ್ತತೇ ಮಹಚ್ಛಾಸ್ತ್ರಂ ಕುಂಡಾದೀನಾಂ ಹಿತಾವಹಮ್ ॥ ೩೨ ॥

ಸಾತ್ತ್ವತಸ್ತಸ್ಯ ಪುತ್ರೋಽಭೂತ್ಸರ್ವಶಾಸ್ತ್ರವಿಶಾರದಃ ।
ಪುಣ್ಯಶ್ಲೋಕೋ ಮಹಾರಾಜಸ್ತೇನ ವೈ ತತ್ಪ್ರವರ್ತಿತಮ್ ॥ ೩೩ ॥

ಸಾತ್ತ್ವತಾನ್ ಸತ್ತ್ವಸಂಪನ್ನಾನ್ ಕೌಶಲ್ಯಾ ಸುಷುವೇ ಸುತಾನ್ ।
ಅಂಧಕಂ ವೈ ಮಹಾಭೋಜಂ ವೃಷ್ಣಿಂ ದೇವಾವಿಧಂ ನೃಪಮ್ ॥ ೩೪ ॥

---

೩೧. ಆ ಅಂಧಕನು ನಾರದ ಮುನಿಯ ನಿಯೋಗದಂತೆ ಶ್ರೀಮನ್ನಾರಾಯಣನ ಅರ್ಚನೆಯಲ್ಲಿ ನಿರತನಾಗಿ ಕುಂಡ-ಗೋಲ ಮುಂತಾದವರಿಂದ ಶ್ರವಣ ಮಾಡಲ್ಪಟ್ಟ ಶಾಸ್ತ್ರವನ್ನು ಪ್ರಚಾರಮಾಡಿದನು.

೩೨. ಸಾತ್ವತವಂಶದವರಿಗೆ ಮಂಗಳಕರವೂ ಕುಂಡ ಮುಂತಾದವರಿಗೆ ಹಿತಕರವೂ ಆದ ಆ ಮಹಾಶಾಸ್ತ್ರವು ಅಂಧಕನ ಹೆಸರಿನಿಂದ ಪ್ರಖ್ಯಾತವಾಗಿ ಪ್ರಚಾರದಲ್ಲಿದೆ.

೩೩. ಆ ಅಂಧಕನಿಗೆ ಸಮಸ್ತ ಶಾಸ್ತ್ರಗಳಲ್ಲಿ ಪಂಡಿತನೂ ಪುಣ್ಯಕೀರ್ತಿಯೂ ಆದ ಸಾತ್ವತ ಮಹಾರಾಜನು ಪುತ್ರನಾಗಿ ಹುಟ್ಟಿದನು. ಅವನಿಂದ ಆ ಶಾಸ್ತ್ರವು ಹೆಚ್ಚು ಪ್ರಚಾರಗೊಳಿಸಲ್ಪಟ್ಟಿತು.

೩೪. ಕೌಶಲ್ಯಾ ಎಂಬಾಕೆಯು ಸತ್ತ್ವಸಂಪನ್ನರೂ ಸಾತ್ವತ ಎಂಬ ನಾಮಾಂಕಿತರೂ ಆದ ಅಂಧಕ, ಮಹಾಭೋಜ,ವೃಷ್ಣಿ, ದೇವಾವೃಧ ಎಂಬ ರಾಜರನ್ನು ಪುತ್ರರನ್ನಾಗಿ ಪ್ರಸವಿಸಿದಳು.

ಜ್ಯೇಷ್ಠಂ ಚ ಭಜಮಾನಾಖ್ಯಂ ಧನುರ್ವೇದವಿದಾಂ ವರಮ್ ।
ತೇಷಾಂ ದೇವಾವೃಧೋ ರಾಜಾ ಚಚಾರ ಪರಮಂ ತಪಃ ॥ ೩೫ ॥

ಪುತ್ರಃ ಸರ್ವಗುಣೋಪೇತೋ ಮಮ ಭೂಯಾದಿತಿ ಪ್ರಭುಃ ।
ತಸ್ಯ ಬಭ್ರುರಿತಿ ಖ್ಯಾತಃ ಪುಣ್ಯಶ್ಲೋಕೋಽಭವನ್ನೃಪಃ ॥ ೩೬ ॥

ಧಾರ್ಮಿಕೋ ರೂಪಸಂಪನ್ನಸ್ತತ್ತ್ವಜ್ಞಾನರತಃ ಸದಾ ।
ಭಜಮಾನಾಃ ಶ್ರಿಯಂ ದಿವ್ಯಾಂ ಭಜಮಾನಾದ್ವಿಜಜ್ಞಿರೇ ॥ ೩೭ ॥

ತೇಷಾಂ ಪ್ರಧಾನೌ ವಿಖ್ಯಾತೌ ನಿಮಿಃ ಕೃಕಣ ಏವ ಚ ।
ಮಹಾಭೋಜಕುಲೇ ಜಾತಾ ಭೋಜಾ ವೈಮಾತೃಕಾಸ್ತಥಾ ॥ ೩೮ ॥

---

೩೫. ಮತ್ತು ಧನುರ್ವೇದ ಪಾರಂಗತರಲ್ಲಿ ಗಣ್ಯನಾದ ಭಜಮಾನ ಎಂಬ ಜೇಷ್ಠಪುತ್ರನನ್ನು ಹೊಂದಿದಳು. ಅವರಲ್ಲಿ ದೇವಾವೃಧ ಎಂಬ ರಾಜನು ಶ್ರೇಷ್ಠವಾದ ತಪವನ್ನು ಆಚರಿಸಿದನು.

೩೬. ಪ್ರಭುವಾದ ಆ ರಾಜನು ಸಮಸ್ತ ಗುಣಗಳಿಂದ ಕೂಡಿದ ಪುತ್ರನು ತನಗೆ ಜನಿಸಬೇಕೆಂದು ಪ್ರಾರ್ಥಿಸಿ ತಪವನ್ನು ಮಾಡಲು ಬಭ್ರು ಎಂಬ ನಾಮದಿಂದ ವಿಖ್ಯಾತನಾದ ಪುಣ್ಯಶ್ಲೋಕರಾಜನು ಪುತ್ರನಾಗಿ ಹುಟ್ಟಿದನು.

೩೭. ಆ ಬಭ್ರುವು ಧಾರ್ಮಿಕನೂ ಸೌಂದರ್ಯಸಂಪನ್ನನೂ ತತ್ತ್ವಜ್ಞಾನ ನಿಷ್ಠೆಯಲ್ಲಿ ನಿರತನೂ ಆಗಿದ್ದನು. ಅವನಿಂದ ದಿವ್ಯಸಂಪತ್ತಿಯನ್ನು ಹೊಂದಿರುವ ಅನೇಕ ಪುತ್ರರು ಹುಟ್ಟಿದರು.

೩೮. ಅವರಲ್ಲಿ ನಿಮಿ, ಕೃಕಣ ಎಂಬುವರಿಬ್ಬರು ಪ್ರಧಾನಪುತ್ರರಾಗಿ ಪ್ರಸಿದ್ಧಿ ಹೊಂದಿದರು. ಭೋಜ, ವೈಮಾತೃಕ ಎಂಬ ನಾಮಾಂಕಿತರಾದ ಅನೇಕ ಪುತ್ರರು ಮಹಾ ಭೋಜನ ವಂಶದಲ್ಲಿ ಹುಟ್ಟಿದರು.

ವೃಷ್ಣೇಃ ಸುಮಿತ್ರೋ ಬಲವಾನನಮಿತ್ರಸ್ಶಿಮಿಸ್ತಥಾ ।
ಅನಮಿತ್ರಾದಭೂನ್ನಿಘ್ನೋ ನಿಘ್ನಸ್ಯ ದ್ವೌ ಬಭೂವತುಃ ॥ ೩೯ ॥

ಪ್ರಸೇನಸ್ತು ಮಹಾಭಾಗಃ ಸತ್ರಾಜಿನ್ನಾಮ ಚೋತ್ತಮಃ ।
ಅನಮಿತ್ರಾತ್ಸಿನಿರ್ಜಜ್ಞೇ ಕನಿಷ್ಠೋ ವೃಷ್ಣಿನಂದನಾತ್ ॥ ೪೦ ॥

ಸತ್ಯವಾಕ್ ಸತ್ಯಸಂಪನ್ನಃ ಸತ್ಯಕಸ್ತತ್ಸುತೋಽಭವತ್ ।
ಸಾತ್ಯಕಿರ್ಯುಯುಧಾನಸ್ತು ತಸ್ಯಾಸಂಗೋಽಭವತ್ಸುತಃ ॥ ೪೧ ॥

ಕುಣಿಸ್ತಸ್ಯ ಸುತೋ ಧೀಮಾಂಸ್ತಸ್ಯ ಪುತ್ರೋ ಯುಗಂಧರಃ ।
ಮಾದ್ರ್ಯಾಂ ವೃಷ್ಣಿಃ ಸುತೋ ಜಜ್ಞೇ ವೃಷ್ಣಿವರ್ಯ ಯದುನಂದನಃ ॥೪೨॥

---

೩೯. ವೃಷ್ಣಿಗೆ ಸುಮಿತ್ರ, ಬಲವಾನ್, ಅನಮಿತ್ರ ಮತ್ತು ಶಿಮಿ ಎಂಬ ಪುತ್ರರಿದ್ದರು. ಅನಮಿತ್ರನಿಗೆ ನಿಘ್ನ ಎಂಬ ಪುತ್ರನು ಹುಟ್ಟಿದನು. ನಿಘ್ನನಿಗೆ ಇಬ್ಬರು ಪುತ್ರರು ಜನಿಸಿದರು.

೪೦. ಅವರು ಮಹಾಭಾಗ್ಯಶಾಲಿಯಾದ ಪ್ರಸೇನ ಮತ್ತು ಶ್ರೇಷ್ಠನಾದ ಸತ್ರಾಜಿತ ಎಂದು ಪ್ರಸಿದ್ಧರಾಗಿದ್ದರು, ವೃಷ್ಣಿಯ ಪುತ್ರನಾದ ಅನಮಿತ್ರನಿಂದ ಸಿನಿ ಎಂಬ ಕನಿಷ್ಠ ಪುತ್ರನು ಹುಟ್ಟಿದನು.

೪೧. ಅವನಿಗೆ ಸತ್ಯವನ್ನು ನುಡಿಯುವವನೂ ಸತ್ಯದಿಂದ ಕೂಡಿದವನೂ ಆದ ಸತ್ಯಕ ಎಂಬ ಪುತ್ರನು ಹುಟ್ಟಿದನು. ಆ ಸತ್ಯಕನಿಗೆ ಯುಯುಧಾನ ಎಂಬ ಪ್ರೀತಿಪಾತ್ರನಾದ ಪುತ್ರನಿದ್ದನು.

೪೨. ಯುಯುಧಾನನಿಗೆ ಜ್ಞಾನಿಯಾದ ಕುಣಿ ಎಂಬ ಪುತ್ರನಿದ್ದನು. ಅವನ ಪುತ್ರನು ಯುಗಂಧರ ಎಂದು ಪ್ರಸಿದ್ಧನಾದನು. ಯುಗಂಧರನಿಗೆ ಮಾದ್ರಿದೇವಿಯಲ್ಲಿ ಯದುವಂಶಸಂತತಿಯಾದ ವೃಷ್ಣಿ ಎಂಬ ಪುತ್ರನು ಹುಟ್ಟಿದನು.

ಜಜ್ಞಾತೇ ತನಯೌ ವೃಷ್ಣೇಃ ಶ್ವಫಲ್ಕಶ್ಚಿತ್ರಕಸ್ತು ಹಿ ।
ಶ್ವಫಲ್ಕಃ ಕಾಶಿರಾಜಸ್ಯ ಸುತಾಂ ಭಾರ್ಯಾಮವಿಂದತ ॥ ೪೩ ॥

ತಸ್ಯಾಮಜನಯತ್ಪುತ್ರಮಕ್ರೂರಂ ನಾಮ ಧಾರ್ಮಿಕಮ್ ।
ಉಪಮಂಗುಂ ತಥಾ ಮಂಗುಮನ್ಯೇ ಚ ಬಹವಃ ಸುತಾಃ ॥ ೪೪ ॥

ಅಕ್ರೂರಸ್ಯ ಸ್ಮೃತಃ ಪುತ್ರೋ ದೇವವಾನಿತಿ ವಿಶ್ರುತಃ ।
ಉಪದೇವಶ್ಚ ದೇವಾತ್ಮಾ ತಯೋರ್ವಿಶ್ವಪ್ರಮಾಥಿನೌ ॥ ೪೫ ॥

ಚಿತ್ರಕಸ್ಯಾಭವತ್ಪುತ್ರಃ ಪೃಥುರ್ವಿಪೃಥುರೇವ ಚ ।
ಅಶ್ವಗ್ರೀವಃ ಸುಬಾಹುಶ್ಚ ಸುಧಾಶ್ವಕಗವೇಕ್ಷಕೌ ॥ ೪೬ ॥

ಅಂಧಕಸ್ಯ ಸುತಾಯಾಂ ತು ಲೇಭೇ ಚ ಚತುರಃ ಸುತಾನ್ ।
ಕುಕುರಂ ಭಜಮಾನಂ ಚ ಶಮೀಕಂ ಬಲಗರ್ವಿತಮ್ ॥ ೪೭ ॥

---

೪೪. ಆ ವೃಷ್ಣಿಗೆ ಶ್ವಫಲ್ಕ ಮತ್ತು ಚಿತ್ರಕ ಎಂಬ ಇಬ್ಬರು ಪುತ್ರರು ಜನಿಸಿದರು. ಶ್ವಫಲ್ಕನು ಕಾಶಿರಾಜನ ಮಗಳನ್ನು ಪತ್ನಿಯನ್ನಾಗಿ ಪರಿಗ್ರಹಿಸಿದನು.

೪೪. ಅವಳಲ್ಲಿ ಧಾರ್ಮಿಕನಾದ ಅಕ್ರೂರ, ಉಪಮಂಗು ಮತ್ತು ಮಂಗು ಎಂಬ ಪುತ್ರರನ್ನು ಹೊಂದಿದನು. ಹಾಗೂ ಇನ್ನೂ ಅನೇಕ ಪುತ್ರರು ಹುಟ್ಟಿದರು.

೪೫. ಅಕ್ರೂರನಿಗೆ ದೇವವಾ್ ಮತ್ತು ದೇವಸ್ವರೂಪವಾದ ಉಪದೇವ ಎಂದು ಪ್ರಸಿದ್ಧರಾದ ಪುತ್ರರು ಸ್ಮರಿಸಲ್ಪಟ್ಟಿರುವರು ಅವರಿಗೆ ವಿಶ್ವ ಮತ್ತು ಪ್ರಮಾಥಿ ಎಂಬುವರು ಪುತ್ರರಾಗಿದ್ದರು.

೪೬. ಚಿತ್ರಕನಿಗೆ ಪೃಥು, ವಿಪೃಥು, ಅಶ್ವಗ್ರೀವ, ಸುಬಾಹು, ಸುಧಾಶ್ವಕ ಮತ್ತು ಗವೇಕ್ಷಕ ಎಂಬ ಅನೇಕಮಂದಿ ಪುತ್ರರಿದ್ದರು.

೪೭. ಅಂಧಕನು ಕಾಶೀರಾಜನ ಪುತ್ರಿಯಲ್ಲಿ ಕುಕುರ ಭಜಮಾನ ಶಮೀಕ ಮತ್ತು ಬಲಗರ್ವಿತ ಎಂದು ನಾಲ್ಕು ಮಂದಿ ಪುತ್ರರನ್ನು ಹೊಂದಿದನು.

ಕುಕುರಸ್ಯ ಸುತೋ ವೃಷ್ಣಿರ್ವೃಷ್ಣೇಸ್ತು ತನಯೋಽಭವತ್ ।
ಕಪೋತರೋಮಾ ವಿಖ್ಯಾತಸ್ತಸ್ಯ ಪುತ್ರೋ ವಿಲೋಮಕಃ ॥ ೪೮ ॥

ತಸ್ಯಾಸೀತ್ತುಂಬುರುಸಖಾ ವಿದ್ವಾನ್ ಪುತ್ರಸ್ತಮಃ ಕಿಲ ।
ತಮಸ್ಯಾಪ್ಯಭವತ್ಪುತ್ರಸ್ತಥೈವಾನಕದುಂದುಭಿಃ ॥ ೪೯ ॥

ಸ ಗೋವರ್ಧನಮಾಸಾದ್ಯ ತತಾಪ ವಿಪುಲಂ ತಪಃ ।
ವರಂ ತಸ್ಮೈ ದದೌ ದೇವೋ ಬ್ರಹ್ಮಾ ಲೋಕಮಹೇಶ್ವರಃ ॥ ೫೦ ॥

ವಂಶಸ್ತೇ ಚಾಕ್ಷಯಾ ಕೀರ್ತಿರ್ಜ್ಞಾನಯೋಗಸ್ತಥೋತ್ತಮಃ ।
ಗುರೋರಪ್ಯಧಿಕಂ ವಿಪ್ರಾಃ ಕಾಮರೂಪಿತ್ವಮೇವ ಚ ॥ ೫೧ ॥

ಸ ಲಬ್ಧ್ವಾ ವರಮವ್ಯಗ್ರೋ ವರೇಣ್ಯಾದ್ವೃಷವಾಹನಮ್ ।
ಪೂಜಯಾಮಾಸ ಗಾನೇನ ಸ್ಥಾಣುಂ ತ್ರಿದಶಪೂಜಿತಮ್ ॥ ೫೨ ॥

---

೪೮. ಕುಕುರನಿಗೆ ವೃಷ್ಣಿ ಎಂಬುವನೂ ವೃಷ್ಣಿಗೆ ಕಪೋತರೋಮ ಎಂಬುವನೂ ಅವನಿಗೆ ವಿಲೋಮಕ ಎಂಬುವನೂ ಪುತ್ರರೆಂದು ಪ್ರಸಿದ್ಧರಾಗಿದ್ದರು.

೪೯. ವಿಲೋಮಕನಿಗೆ ತುಂಬುರು ಎಂಬ ಗಂಧರ್ವನಿಗೆ ಮಿತ್ರನಾದ ಮತ್ತು ಜ್ಞಾನಿಯಾದ ತಮ ಎಂಬ ಪುತ್ರನಿದ್ದನು. ತಮ ಎಂಬುವನಿಗೆ ಆನಕದುಂದುಭಿ ಎಂಬ ಪುತ್ರನು ಹುಟ್ಟಿದನು.

೫೦. ಆನಕದುಂದುಭಿಯು ಗೋವರ್ಧನಗಿರಿಗೆ ಹೋಗಿ ಅತಿ ಕಠಿಣವಾದ ತಪಸ್ಸನ್ನು ಮಾಡಿದನು. ಲೋಕಗಳಿಗೆ ಮಹೇಶ್ವರನಾದ ಬ್ರಹ್ಮದೇವನು ಪ್ರಸನ್ನನಾಗಿ ಅವನಿಗೆ ವರವನ್ನು ಕೊಟ್ಟನು.

೫೧. ಭಕ್ತನೇ ! ನಿನಗೆ ಉತ್ತಮವಾದ ವಂಶ ಪ್ರತಿಷ್ಠೆಯೂ ಶಾಶ್ವತವಾದ ಕೀರ್ತಿಯೂ ನಿರುಪಮವಾದ ಜ್ಞಾನಯೋಗವೂ ಮತ್ತು ಗುರುವನ್ನು ಮೀರಿಸುವ ಕಾಮರೂಪಿತ್ವವೂ ಉಂಟಾಗಲಿ.

೫೨. ಹೀಗೆ ಆನಕದುಂದುಭಿಯು ಸ್ಥಿರಚಿತ್ತನಾಗಿ ಬ್ರಹ್ಮನಿಂದಶ್ರೇಷ್ಠವಾದ ಈ ವರಗಳನ್ನು ಹೊಂದಿ ನಂದಿವಾಹನನೂ ದೇವತಾಪ್ರಭುವೂ ಆದ ಈಶ್ವರನನ್ನು ಗಾನದಿಂದ ಅರ್ಚಿಸಿದನು.

ತಸ್ಯ ಗಾನರತಸ್ಯಾಥ ಭಗವಾನಂಬಿಕಾಪತಿಃ ।
ಕನ್ಯಾರತ್ನಂ ದದೌ ದೇವೋ ದುರ್ಲಭಂ ತ್ರಿದಶೈರಪಿ ॥ ೫೩ ॥

ತಯಾ ಸ ಸಂಗತೋ ರಾಜಾ ಗಾನಯೋಗಮನುತ್ತಮಮ್ ।
ಅಶಿಕ್ಷಯದಮಿತ್ರಘ್ನಃ ಪ್ರಿಯಾಂ ತಾಂ ಭ್ರಾಂತಲೋಚನಾಮ್ ॥ ೫೪ ॥

ತಸ್ಯಾಮುತ್ಪಾದಯಾಮಾಸ ಸುಭುಜಂ ನಾಮ ಶೋಭನಮ್ ।
ರೂಪಲಾವಣ್ಯಸಂಪನ್ನಾಂ ಹ್ರೀಮತೀಮಿತಿ ಕನ್ಯಕಾಮ್ ॥ ೫೫ ॥

ತತಸ್ತಂ ಜನನೀ ಪುತ್ರಂ ಬಾಲ್ಯೇ ವಯಸಿ ಶೋಭನಮ್ ।
ಶಿಕ್ಷಯಾಮಾಸ ವಿಧಿವದ್ಗಾನವಿದ್ಯಾಂ ಚ ಕನ್ಯಕಾಮ್ ॥ ೫೬ ॥

ಕೃತೋಪನಯನೋ ವೇದಾನಧೀತ್ಯ ವಿಧಿವದ್ಗುರೋಃ ।
ಉದ್ವಾಹಾತ್ಮಜಾಂ ಕನ್ಯಾಂ ಗಂಧರ್ವಾಣಾಂ ತು ಮಾನಸೀಮ್॥೫೭ ॥

---

೫೩. ಹೀಗೆ ಗಾನಲೋಲನಾದ ಆ ಆನಕದುಂದುಭಿಗೆ ಪಾರ್ವತೀ ರಮಣನೂ ಭಗವಂತನೂ ಆದ ಶಂಕರನು ದೇವತೆಗಳಿಗೂ ದುರ್ಲಭವಾದ ಕನ್ಯಾರತ್ನವನ್ನು ಅನುಗ್ರಹಿಸಿದನು.

೫೪. ಶತ್ರುನಿಗ್ರಹಿಯಾದ ಆ ರಾಜನು ಆ ಕನ್ಯೆಯೊಡನೆ ಸೇರಿಕೊಂಡವನಾಗಿ ಚಂಚಲವಾದ ನೇತ್ರವುಳ್ಳ ಆ ಕಾಂತೆಗೆ ಉತ್ತಮವಾದ ಗಾನಕಲೆಯನ್ನು ಕಲಿಸಿದನು.

೫೫. ತರುವಾಯ ಆ ಕನ್ಯೆಯಲ್ಲಿ ಮಂಗಳಕರನಾದ ಸುಭುಜ ಎಂಬ ಕುಮಾರನನ್ನೂ ರೂಪಲಾವಣ್ಯಗಳಿಂದ ತುಂಬಿದ ಹ್ರೀಮತೀ ಎಂಬ ಕನ್ಯೆಯನ್ನೂ ಹೊಂದಿದನು.

೫೬. ತರುವಾಯ ಜನನಿಯು ಬಾಲ್ಯವಯಸ್ಸಿನಲ್ಲಿರುವ ಮಂಗಳಕರನಾದ ಸುಭುಜಪುತ್ರನಿಗೂ ಹ್ರೀಮತೀ ಕನ್ಯೆಗೂ ಯಥಾವಿಧಿಯಾಗಿ ಗಾನವಿದ್ಯೆಯನ್ನು ಅಭ್ಯಾಸಮಾಡಿಸಿದಳು.

೫೭. ಆ ಸುಭುಜನು ಗುರುವಿನಿಂದ ಉಪನಯನ ಸಂಸ್ಕಾರವನ್ನು ಹೊಂದಿ ಯಥಾವಿಧಿಯಾಗಿ ವೇದಗಳನ್ನು ಕಲಿತು ಗಂಧರ್ವರ ಮಾನಸಪುತ್ರಿಯಾದ ಒಬ್ಬಳು ಕನ್ಯೆಯನ್ನು ಮದುವೆಯಾದನು.

ತಸ್ಯಾಮುತ್ಪಾದಯಾಮಾಸ ಪಂಚ ಪುತ್ರಾನನುತ್ತಮಾನ್ ।
ವೀಣಾವಾದನತತ್ತ್ವಜ್ಞಾನ್ ಗಾನಶಾಸ್ತ್ರವಿಶಾರದಾನ್ ॥ ೫೮ ॥

ಪುತ್ರೈಃ ಪೌತ್ರೈಃ ಸಪತ್ನೀಕೋ ರಾಜಾ ಗಾನವಿಶಾರದಃ ।
ಪೂಜಯಾಮಾಸ ಗಾನೇನ ದೇವಂ ತ್ರಿಪುರನಾಶನಮ್ ॥ ೫೯ ॥

ಹ್ರೀಮತೀಂ ಚಾರುಸರ್ವಾಂಗೀಂ ಶ್ರೀಮಿವಾಯತಲೋಚನಾಮ್ ।
ಸುಬಾಹುರ್ನಾಮ ಗಂಧರ್ವಸ್ತಾಮಾದಾಯ ಯಯೌ ಪುರೀಮ್ ॥೬೦॥

ತಸ್ಯಾಮಪ್ಯಭವನ್ ಪುತ್ರಾ ಗಂಧರ್ವಸ್ಯ ಸುತೇಜಸಃ ।
ಸುಷೇಣಘೋರಸುಗ್ರೀವಸುಭೋಜನರವಾಹನಾಃ ॥ ೬೧ ॥

---

೫೮. ಆ ಕನ್ಯೆಯಲ್ಲಿ ವೀಣೆಯನ್ನು ನುಡಿಸುವ ಕಲೆಯನ್ನು ತಿಳಿದವರೂ ಗಾನಶಾಸ್ತ್ರದಲ್ಲಿ ಚತುರರೂ ಮತ್ತು ನಿರುಪಮರೂ ಆದ ಐದು ಮಂದಿ ಪುತ್ರರನ್ನು ಪಡೆದನು.

೫೯. ಹೀಗೆ ಪುತ್ರ-ಪೌತ್ರರಿಂದಲೂ ಮತ್ತು ಪತ್ನಿಯಿಂದಲೂ ಕೂಡಿದ ಗಾನ ಕಲಾಪ್ರವೀಣನಾದ ರಾಜನು ತ್ರಿಪುರಾಸುರ ಸಂಹಾರಿಯಾದ ಈಶ್ವರನನ್ನು ಗೀತ ಸೇವೆಯಿಂದ ಸತ್ಕರಿಸಿದನು.

೬೦. ಸುಂದರವಾದ ಸಕಲಾವಯವುಳ್ಳವಳೂ, ಲಕ್ಷ್ಮಿಯಂತೆ ವಿಸ್ತಾರವಾದ ನೇತ್ರವುಳ್ಳವಳೂ ಆದ ಹ್ರೀಮತೀಕನ್ಯೆಯನ್ನು ಸುಬಾಹು ಎಂಬ ಗಂಧರ್ವರಾಜನು ತೆಗೆದುಕೊಂಡು ತನ್ನ ನಗರಕ್ಕೆ ಹೋದನು.

೬೧. ಆ ತೇಜಸ್ವಿಯಾದ ಗಂಧರ್ವನಿಗೆ ಹ್ರೀಮತೀ ಎಂಬ ಭಾರ್ಯೆಯಲ್ಲಿ ಸುಷೇಣ, ಘೋರ, ಸುಗ್ರೀವ, ಸುಭೋಜ ಮತ್ತು ನರವಾಹನ ಎಂಬ ಐದು ಮಂದಿ ಪುತ್ರರು ಹುಟ್ಟಿದರು.

ಅಥಾಸೀದಭಿಜಿತ್ಪುತ್ರಶ್ಚಂದನೋದಕದುಂದುಭೇಃ ।
ಪುನರ್ವಸುಶ್ಚಾಭಿಜಿತಃ ಸಂಬಭೂವಾಹುಕಸ್ತತಃ ॥ ೬೨ ॥

ಆಹುಕಸ್ಯೋಗ್ರಸೇನಶ್ಚ ದೇವಕಶ್ಚ ದ್ವಿಜೋತ್ತಮಾಃ ।
ದೇವಕಸ್ಯ ಸುತಾ ವೀರಾ ಜಜ್ಞಿರೇ ತ್ರಿದಶೋಪಮಾಃ ॥ ೬೩ ॥

ದೇವವಾನುಪದೇವಶ್ಚ ಸುದೇವೋ ದೇವರಕ್ಷಿತಃ ।
ತೇಷಾಂ ಸ್ವಸಾರಃ ಸಪ್ತಾಸನ್ ವಸುದೇವಾಯ ತಾ ದದೌ ॥ ೬೪ ॥

ಧೃತದೇವೋಪದೇವಾ ಚ ತಥಾನ್ಯಾ ದೇವರಕ್ಷಿತಾ ।
ಶ್ರೀದೇವಾ ಶಾಂತಿದೇವಾ ಚ ಸಹದೇವಾ ಚ ಸುವ್ರತಾ ॥ ೬೫ ॥

---

೬೨ ತರುವಾಯ ಚಂದನೋಕದುಂದುಭಿ ಎಂಬುವನಿಗೆ ಅಭಿಜಿತ ಎಂಬ ಪುತ್ರನು ಹುಟ್ಟಿದನು. ಅಭಿಜಿತ್ ಎಂಬುವನಿಗೆ ಪುನರ್ವಸು ಎಂಬ ಪುತ್ರನೂ ಅವನಿಗೆ ಆಹುಕ ಎಂಬ ಪುತ್ರನೂ ಜನಿಸಿದರು.

೬೩. ದ್ವಿಜೋತ್ತಮರೇ ! ಆಹುಕನಿಗೆ ಉಗ್ರಸೇನ, ದೇವಕ ಎಂಬ ಇಬ್ಬರು ಪುತ್ರರು ಹುಟ್ಟಿದರು. ದೇವಕನಿಗೆ ದೇವತೆಗಳಿಗೆ ಸಮಾನರಾದ ಅನೇಕ ವೀರಪುತ್ರರು ಜನಿಸಿದರು.

೬೪. ಆ ಪುತ್ರರು ದೇವವಾನ್, ಉಪದೇವ, ಸುದೇವ ಮತ್ತು ದೇವರಕ್ಷಿತ ಎಂಬ ನಾಮಾಂಕಿತರಾಗಿದ್ದರು. ಅವರಿಗೆ ಏಳು ಮಂದಿ ಸಹೋದರಿಯರಿದ್ದರು. ದೇವಕನು ಆ ಪುತ್ರಿಯರನ್ನು ವಸುದೇವನಿಗೆ ಕೊಟ್ಟನು.

೬೫. ಆ ಏಳು ಮಂದಿ ಕನ್ಯೆಯರಲ್ಲಿ ಮೊದಲನೆಯ ಆರು ಮಂದಿಯು ಧೃತದೇವಾ, ಉಪದೇವಾ, ದೇವರಕ್ಷಿತಾ, ಶ್ರೀದೇವಾ, ಶಾಂತಿದೇವಾ ಮತ್ತು ನಿಯಮವತಿಯಾದ ಸಹದೇವಾ ಎಂಬ ಪವಿತ್ರನಾಮಾಂಕಿತರಾಗಿದ್ದರು.

ದೇವಕೀ ಚಾಪಿ ತಾಸಾಂ ತು ವರಿಷ್ಠಾ ಭೂತ್ಸುಮಧ್ಯಮಾ ।
ಉಗ್ರಸೇನಸ್ಯ ಪುತ್ರೋಽಭೂನ್ನ್ಯಗ್ರೋಧಃ ಕಂಸ ಏವ ಚ　॥ ೬೬ ॥

ಸುಭೂಮಿಾ ರಾಷ್ಟ್ರಪಾಲಶ್ಚ ತುಷ್ಟಿಮಾನ್ ಶಂಕುರೇವ ಚ ।
ಭಜಮಾನಾದಭೂತ್ ಪುತ್ರಃ ಪ್ರಖ್ಯಾತೋಽಸೌ ವಿದೂರಥಃ　॥ ೬೭ ॥

ತಸ್ಯ ಸೂರಸಮಸ್ತಸ್ಮಾತ್ ಪ್ರತಿಕ್ಷತ್ರಶ್ಚ ತತ್ಸುತಃ ।
ಸ್ವಯಂಭೋಜಸ್ತತಸ್ತಸ್ಮಾದ್ಧಾತ್ರೀಕಃ ಶತ್ರುತಾಪನಃ　॥ ೬೮ ॥

ಕೃತವರ್ಮಾಥ ತತ್ಪುತ್ರಃ ಶೂರಸೇನಃ ಸುತೋಽಭವತ್ ।
ವಸುದೇವೋಽಥ ತತ್ಪುತ್ರೋ ನಿತ್ಯಂ ಧರ್ಮಪರಾಯಣಃ　॥ ೬೯ ॥

---

೬೬. ದೇವಕೀ ಎಂಬ ಸುಂದರಕನ್ಯೆಯು ಆ ಕನ್ಯೆಯರಲ್ಲಿ ಶ್ರೇಷ್ಠಳಾಗಿದ್ದಳು. ಉಗ್ರಸೇನನಿಗೆ ಜನಿಸಿದ ಅನೇಕ ಪುತ್ರರಲ್ಲಿ ನ್ಯಗ್ರೋಧ ಮತ್ತು ಕಂಸ ಎಂಬವರಿಬ್ಬರು ಸೇರಿದ್ದರು.

೬೭. ಮಿಕ್ಕ ಉಗ್ರಸೇನನ ಪುತ್ರರು ಸುಭೂಮಿ, ರಾಷ್ಟ್ರಪಾಲ, ತುಷ್ಟಿವರ್ಮ ಮತ್ತು ಶಂಕು ಎಂದು ಪ್ರಸಿದ್ಧರಾಗಿದ್ದರು. ಭಜಮಾನ ಎಂಬುವನಿಗೆ ವಿದೂರಥ ಎಂದು ಪ್ರಸಿದ್ಧನಾದ ಪುತ್ರನಿದ್ದನು.

೬೮. ವಿದೂರಥನಿಗೆ ಸೂರಸಮ ಎಂಬುವನೂ, ಅವನಿಗೆ ಪ್ರತಿಕ್ಷತ್ರ ಎಂಬುವನೂ, ಅವನಿಗೆ ಸ್ವಯಂಭೋಜ ಎಂಬುವನೂ, ಅವನಿಗೆ ಶತ್ರುನಿಗ್ರಹದಲ್ಲಿ ಆಸಕ್ತನಾದ ಧಾತ್ರೀಕ ಎಂಬುವನೂ ಪುತ್ರರಾಗಿ ಜನಿಸಿದರು.

೬೯. ತರುವಾಯ ಕೃತವರ್ಮನೂ, ಅವನಿಗೆ ಪುತ್ರನಾದ ಶೂರಸೇನನೂ ಜನಿಸಿದರು. ಶೂರಸೇನನಿಗೆ ಯಾವಾಗಲೂ ಧರ್ಮಾಚರಣೆಯಲ್ಲಿ ಆಸಕ್ತಿಯುಳ್ಳ ವಸುದೇವನೆಂಬ ಪುತ್ರನು ಹುಟ್ಟಿದನು.

ವಸುದೇವಾನ್ಮಹಾಬಾಹುರ್ವಾಸುದೇವೋ ಜಗದ್ಗುರುಃ ।
ಬಭೂವ ದೇವಕೀಪುತ್ರೋ ದೇವೈರಭ್ಯರ್ಥಿತೋ ಹರಿಃ ॥ ೭೦ ॥

ರೋಹಿಣೀ ಚ ಮಹಾಭಾಗಾ ವಸುದೇವಸ್ಯ ಶೋಭನಾ ।
ಅಸೂತ ಪತ್ನೀ ಸಂಕರ್ಷಣಂ ರಾಮಂ ಜ್ಯೇಷ್ಠಂ ಹಲಾಯುಧಮ್ ॥೭೧॥

ಸ ಏವ ಪರಮಾತ್ಮಾಸೌ ವಾಸುದೇವೋ ಜಗನ್ಮಯಃ ।
ಹಲಾಯುಧಃ ಸ್ವಯಂ ಸಾಕ್ಷಾಚ್ಛೇಷಃ ಸಂಕರ್ಷಣಃ ಪ್ರಭುಃ ॥ ೭೨ ॥

ಭೃಗುಶಾಪಚ್ಛಲೇನೈವ ಮಾನಯನ್ಮಾನುಷೀಂ ತನುಮ್ ।
ಬಭೂವ ತಸ್ಯಾಂ ದೇವಕ್ಯಾಂ ರೋಹಿಣ್ಯಾಮಥ ಮಾಧವಃ ॥ ೭೩ ॥

ಉಮಾದೇಹಸಮುದ್ಭೂತಾ ಯೋಗನಿದ್ರಾ ಚ ಕೌಶಿಕೀ ।
ನಿಯೋಗಾದ್ವಾಸುದೇವಸ್ಯ ಯಶೋದಾತನಯಾ ತ್ವಭೂತ್ ॥ ೭೪ ॥

---

೭೦. ಮಹಾಬಾಹುಬಲವುಳ್ಳವನೂ, ಜಗದ್ಗುರುವೂ ಆದ ಶ್ರೀಹರಿಯು ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ವಸುದೇವನಿಂದ ದೇವಕೀದೇವಿಯಲ್ಲಿ ಪುತ್ರನಾಗಿ ಜನಿಸಿದನು.

೭೧. ಮತ್ತು ಮಹಾಭಾಗ್ಯದಿಂದ ಕೂಡಿದ ವಸುದೇವನ ಪತ್ನಿಯಾದ, ಮಂಗಳಶೀಲಳಾದ ರೋಹಿಣೀ ಎಂಬಾಕೆಯು ನೇಗಿಲೇ ಆಯುಧವಾಗಿವುಳ್ಳ, ಸಂಕರ್ಷಣಮೂರ್ತಿರೂಪವಾದ, ಬಲರಾಮನೆಂಬ ಜೇಷ್ಠಪುತ್ರನನ್ನು ಪ್ರಸವಿಸಿದಳು.

೭೨. ಆದಿಶೇಷಸ್ವರೂಪನೂ, ಪರಮಾತ್ಮಸ್ವರೂಪನೂ, ವಿಶ್ವರೂಪನೂ, ಸರ್ವಪ್ರಭುವೂ, ಆದ ಶ್ರೀಮನ್ ನಾರಾಯಣನು ನೇಗಿಲನ್ನು ಆಯುಧವಾಗಿ ಧರಿಸಿದ ಬಲರಾಮನ ಮೂರ್ತಿರೂಪನಾಗಿ ಅವತರಿಸಿರುವನು.

೭೩. ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಭೃಗುಮಹರ್ಷಿಯ ಶಾಪದನೆಪದಿಂದ ಮಾನವಜನ್ಮವನ್ನು ಗೌರವಿಸುತ್ತ ದೇವಕೀ ಮತ್ತು ರೋಹಿಣೀ ದೇವಿಯರಲ್ಲಿ ತನ್ನ ಅಂಶದಿಂದ ಅವತಾರಮಾಡಿದನು.

೭೪. ಪಾರ್ವತಿಯದೇಹದಿಂದ ಹುಟ್ಟಿದ ಕೌಶಿಕೀ ಎಂದು ಕರೆಯಲ್ಪಡುವ ಯೋಗನಿದ್ರೆಯು ಶ್ರೀಮನ್ನಾರಾಯಣನ ನಿಯೋಗದಿಂದ ಯಶೋದೆಯ ಕನ್ಯೆಯಾಗಿ ಹುಟ್ಟಿದಳು.

ಯೇ ಚಾನ್ಯೇ ವಸುದೇವಸ್ಯ ವಾಸುದೇವಾಗ್ರಜಾಃ ಸುತಾಃ ।
ಪ್ರಾಗೇವ ಕಂಸಸ್ತಾನ್ ಸರ್ವಾನ್ ಜಘಾನ ಮುನಿಸತ್ತಮಾಃ ॥ ೭೫ ॥

ಸುಷೇಣಶ್ಚ ತತೋ ದಾಯೀ ಭದ್ರಸೇನೋ ಮಹಾಬಲಃ ।
ವಜ್ರದಂಭೋ ಭದ್ರಸೇನಃ ಕೀರ್ತಿಮಾನಪಿ ಪೂಜಿತಃ ॥ ೭೬ ॥

ಹತೇಷ್ವೇತೇಷು ಸರ್ವೇಷು ರೋಹಿಣೀ ವಸುದೇವತಃ ।
ಅಸೂತ ರಾಮಂ ಲೋಕೇಶಂ ಬಲಭದ್ರಂ ಹಲಾಯುಧಮ್ ॥ ೭೭ ॥

ಜಾತೇಽಥ ರಾಮೇ ದೇವಾನಾಮಾದಿಮಾತ್ಮಾನಮಚ್ಯುತಮ್ ।
ಅಸೂತ ದೇವಕೀ ಕೃಷ್ಣಂ ಶ್ರೀವತ್ಸಾಂಕಿತವಕ್ಷಸಮ್ ॥ ೭೮ ॥

ರೇವತೀ ನಾಮ ರಾಮಸ್ಯ ಭಾರ್ಯಾಸೀತ್ ಸುಗುಣಾನ್ವಿತಾ ।
ತಸ್ಯಾಮುತ್ಪಾದಯಾಮಾಸ ಪುತ್ರೌ ದ್ವೌ ನಿಶಿತೋಲ್ಮುಕೌ ॥ ೭೯ ॥

---

೭೫. ಮುನಿವರ್ಯರೇ! ಶ್ರೀಕೃಷ್ಣನಿಗೆ ಜೇಷ್ಠರಾಗಿ ವಸುದೇವನಿಂದ ಜನಿಸಿದ ಇತರ ಸಮಸ್ತ ಪುತ್ರರನ್ನೂ ಕಂಸಾಸುರನು ಮೊದಲೇ ಸಂಹರಿಸಿದ್ದನು.

೭೬. ಕೃಷ್ಣನಿಗೆ ಅಗ್ರಜರಾಗಿ ಹುಟ್ಟಿದ ಸುಷೇಣ, ದಾಯೀ, ಬಲಿಷ್ಠನಾದ ರುದ್ರಸೇನ, ವಜ್ರದಂಭ, ಭದ್ರಸೇನ ಮತ್ತು ಪೂಜ್ಯನಾದ ಕೀರ್ತಿಮಂತನೆಂಬ ಆರು ಮಂದಿ ಪುತ್ರರು ಕಂಸನಿಂದ ವಧಿಸಲ್ಪಟ್ಟರು.

೭೭. ಈ ಸಮಸ್ತ ಪುತ್ರರು ಕಂಸನಿಂದ ಕೊಲ್ಲಲ್ಪಡಲು ವಸುದೇವನ ಭಾರ್ಯೆಯಾದ ರೋಹಿಣೀದೇವಿಯು ಲೋಕಗಳಿಗೆ ಈಶ್ವರನೂ ನೇಗಿಲನ್ನು ಆಯುಧವಾಗಿ ಧರಿಸಿದವನೂ ಆದ ಬಲರಾಮನನ್ನು ಪ್ರಸವಿಸಿದಳು.

೭೮. ಹೀಗೆ ಬಲರಾಮನು ಜನಿಸಲಾಗಿ ದೇವಕೀದೇವಿಯು ದೇವತೆಗಳಿಗೆ ಆದಿಭೂತನೂ, ಅಚ್ಯುತನೂ, ಶ್ರೀವತ್ಸದಿಂದ ಅಲಂಕರಿಸಲ್ಪಟ್ಟ ಹೃದಯವುಳ್ಳವನೂ ಆದ ವಿಷ್ಣುವಿನ ಅಂಶದಿಂದ ಕೂಡಿದ ಕೃಷ್ಣನೆಂಬ ಪುತ್ರನನ್ನು ಪ್ರಸವಿಸಿದಳು.

೭೯. ಬಲರಾಮನಿಗೆ ಸಮಸ್ತಗುಣಗಳಿಂದ ಕೂಡಿದ ರೇವತಿ ಎಂಬ ಭಾರ್ಯೆಯಿದ್ದಳು. ಅವಳಲ್ಲಿ ನಿಶಿತ, ಉಲ್ಮುಕ ಎಂಬ ಇಬ್ಬರು ಪುತ್ರರು ಜನಿಸಿದರು.

ಷೋಡಶಸ್ತ್ರೀಸಹಸ್ರಾಣಿ ಕೃಷ್ಣಸ್ಯಾಕ್ಲಿಷ್ಟಕರ್ಮಣಃ ।
ಬಭೂವುಶ್ಚಾತ್ಮಜಾಸ್ತಾಸು ಶತಶೋಽಥ ಸಹಸ್ರಶಃ ॥ ೮೦ ॥

ಚಾರುದೇಷ್ಣಃ ಸುಚಾರುಶ್ಚ ಚಾರುವೇಷೋ ಯಶೋಧರಃ ।
ಚಾರುಶ್ರವಾಶ್ಚಾರುಯಶಾ ಪ್ರದ್ಯುಮ್ನಃ ಸಾಂಬ ಏವ ಚ ॥ ೮೧ ॥

ರುಕ್ಮಿಣ್ಯಾಂ ವಾಸುದೇವಸ್ಯ ಮಹಾಬಲಪರಾಕ್ರಮಾಃ ।
ವಿಶಿಷ್ಟಾಃ ಸರ್ವಪುತ್ರಾಣಾಂ ಸಂಬಭೂವುರಿಮೇ ಸುತಾಃ ॥ ೮೨ ॥

ತಾನ್ ದೃಷ್ಟ್ವಾ ತನಯಾನ್ ವೀರಾನ್ ರೌಕ್ಮಿಣೇಯಾನ್ ಜನಾರ್ದನಾತ್ ।
ಜಾಂಬವತ್ಯಬ್ರವೀತ್ ಕೃಷ್ಣಂ ಭಾರ್ಯಾ ತಸ್ಯ ಶುಚಿಸ್ಮಿತಾ ॥ ೮೩ ॥

---

೮೦. ಪೂಜ್ಯವಾದ ಕಾರ್ಯಗೌರವವುಳ್ಳ ಶ್ರೀಕೃಷ್ಣನಿಗೆ ಹದಿನಾರು ಸಹಸ್ರ ಮಂದಿ ಪತ್ನಿಯರಿದ್ದರು. ಅವರಲ್ಲಿ ಶತ-ಸಹಸ್ರ ಮುಂತಾದ ಅಧಿಕ ಸಂಖ್ಯೆಯ ಅನೇಕ ಪುತ್ರರು ಜನಿಸಿದರು.

೮೧. ಅವರಲ್ಲಿ ಚಾರುದೇಷ್ಣ, ಸುಚಾರು, ಚಾರುವೇಷ, ಯಶೋಧರ, ಚಾರುಶ್ರವ, ಚಾರುಯಶ, ಪ್ರದ್ಯುಮ್ನ ಮತ್ತು ಸಾಂಬ ಎಂಬ ಪುತ್ರರು ಪ್ರಖ್ಯಾತ ರಾಗಿದ್ದರು.

೮೨. ವಸುದೇವಪುತ್ರನಾದ ಶ್ರೀಕೃಷ್ಣನಿಗೆ ಮಹಾಬಲ-ಪರಾಕ್ರಮಗಳಿಂದ ಕೂಡಿದ ಈ ಪುತ್ರರು ಸರ್ವಪುತ್ರರಿಗೂ ಶ್ರೇಷ್ಠರೆನಿಸಿಕೊಂಡು ರುಕ್ಮಿಣೀದೇವಿಯಲ್ಲಿ ಜನಿಸಿದರು.

೮೩. ಪವಿತ್ರವಾದ ಮಂದಹಾಸವುಳ್ಳ ಕೃಷ್ಣನ ಭಾರ್ಯೆಯಾದ ಜಾಂಬವತಿಯು ಆ ಪತಿದೇವನಿಂದ ರುಕ್ಮಿಣೀಯಲ್ಲಿ ಜನಿಸಿದ ಆ ವೀರಪುತ್ರರನ್ನು ಕಂಡು ಪತಿಯಲ್ಲಿ ಹೀಗೆ ಪ್ರಾರ್ಥಿಸಿಕೊಂಡಳು.

ಮಮ ತ್ವಂ ಪುಂಡರೀಕಾಕ್ಷ ವಿಶಿಷ್ಟಗುಣವತ್ತರಮ್ ।
ಸುರೇಶಸಮ್ಮಿತಂ ಪುತ್ರಂ ದೇಹಿ ದಾನವಸೂದನ ॥ ೮೪ ॥

ಜಾಂಬವತ್ಯಾ ವಚಃ ಶ್ರುತ್ವಾ ಜಗನ್ನಾಥಃ ಸ್ವಯಂ ಹರಿಃ ।
ಸಮಾರೇಭೇ ತಪಃ ಕರ್ತುಂ ತಪೋನಿಧಿರರಿಂದಮಃ ॥ ೮೫ ॥

ತಚ್ಛೃಣುಧ್ವಂ ಮುನಿಶ್ರೇಷ್ಠಾ ಯಥಾಸೌ ದೇವಕೀಸುತಃ ।
ದೃಷ್ಟ್ವಾ ಲೇಭೇ ಸುತಂ ರುದ್ರಂ ತಪ್ತ್ವಾ ತೀವ್ರಂ ಮಹತ್ತಪಃ ॥ ೮೬ ॥

ಇತಿ ಶ್ರೀ ಕೂರ್ಮಪುರಾಣೇ ಚತುರ್ವಿಂಶೋಽಧ್ಯಾಯಃ.

---

೮೪. ದಾನವರನ್ನು ಮರ್ದಿಸುವವನೇ! ಕಮಲದಳದಂತೆ ನೇತ್ರವುಳ್ಳವನೇ! ಪತಿದೇವನೇ! ನೀನು ನನಗೆ ಅತಿಶಯವಾದ ಗುಣಗಳಿಂದ ಪೂರ್ಣನಾದ, ದೇವೇಂದ್ರನಿಗೆ ಸಮಾನವಾದ ಪುತ್ರನನ್ನು ಅನುಗ್ರಹಿಸು.

೮೫. ಜಗತ್ತಿಗೆ ನಾಥನೂ, ತಪೋನಿಧಿಯೂ, ಶತ್ರುವಿಜಯಿಯೂ ಆದ ಶ್ರೀಹರಿಯು ಜಾಂಬವತೀದೇವಿಯ ವಚನವನ್ನು ಕೇಳಿ ತಪಸ್ಸನ್ನು ಆಚರಿಸಲು ಉಪಕ್ರಮಿಸಿದನು.

೮೬. ಶ್ರೇಷ್ಠರಾದ ಮುನಿಗಳೇ! ದೇವಕೀಪುತ್ರನಾದ ಶ್ರೀ ಕೃಷ್ಣನು ತೀವ್ರವಾದ ಮಹಾತಪಸ್ಸನ್ನು ತಪಿಸಿ ಪುತ್ರನನ್ನು ಹೊಂದಿರುವ ಚರಿತ್ರೆಯನ್ನು ನೀವು ಶ್ರವಣಮಾಡಿರಿ.

( ಕೂರ್ಮಪುರಾಣದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು )



ಶ್ರೀಃ

# ಕೂರ್ಮಪುರಾಣಂ

## ಪಂಚವಿಂಶೋಽಧ್ಯಾಯಃ.

**ಸೂತ ಉವಾಚ :—**

**ಅಥ ದೇವೋ ಹೃಷೀಕೇಶೋ ಭಗವಾನ್ ಪುರುಷೋತ್ತಮಃ ।**
**ತತಾಪ ಘೋರಂ ಪುತ್ರಾರ್ಥಂ ನಿಧಾನಂ ತಪಸಸ್ತಪಃ ॥ ೧ ॥**

**ಸ್ವೇಚ್ಛಯಾಪ್ಯವತೀರ್ಣೋಽಸೌ ಕೃತಕೃತ್ಯೋಽಪಿ ವಿಶ್ವಸೃಕ್ ।**
**ಚಚಾರ ಸ್ವಾತ್ಮನೋ ಮೂಲಂ ಬೋಧಯನ್ ಪರಮೇಶ್ವರಮ್ ॥ ೨ ॥**

---

## ಇಪ್ಪತ್ತೈದನೆಯ ಅಧ್ಯಾಯವು.

೧. ಸೂತಮುನಿಯು ಹೀಗೆಂದು ಹೇಳಿದನು :—ಸರ್ವೇಂದ್ರಿಯ ಪ್ರೇರಕನೂ ಭಗವಂತನೂ ಆದ ಪುರುಷೋತ್ತಮನು ತಪೋನಿಧಿಯಾದ ಪರಮಾತ್ಮನನ್ನು ಕುರಿತು ಪುತ್ರಪ್ರಾಪ್ತಿಗೋಸ್ಕರ ಘೋರವಾದ ತಪವನ್ನಾಚರಿಸಿದನು.

೨. ಸ್ವಸಂಕಲ್ಪಮಾತ್ರದಿಂದ ಅವತರಿಸಿದವನೂ, ಕೃತಕೃತ್ಯನೂ, ಪ್ರಪಂಚದ ಸೃಷ್ಟಿಕರ್ತನೂ ಆದ ಶ್ರೀಕೃಷ್ಣನು ತನಗೆ ಪರಮೇಶ್ವರನೇ ಮೂಲನೆಂಬುದನ್ನು ಬೋಧಿಸುತ್ತ ತಪಸ್ಸನ್ನು ಮಾಡಿದನು.

ಜಗಾಮ ಯೋಗಿಭಿರ್ಜುಷ್ಟಂ ನಾನಾಪಕ್ಷಿಸಮಾಕುಲಮ್ ।
ಆಶ್ರಮಂ ತೂಪಮನ್ಯೋರ್ವೈ ಮುನೀಂದ್ರಸ್ಯ ಮಹಾತ್ಮನಃ ॥ ೩ ॥

ಪತತ್ರಿರಾಜಮಾರೂಢಃ ಸುಪರ್ಣಮತಿತೇಜಸಮ್ ।
ಶಂಖಚಕ್ರಗದಾಪಾಣಿಃ ಶ್ರೀವತ್ಸಾಂಕಿತಲಕ್ಷಣಃ ॥ ೪ ॥

ನಾನಾದ್ರುಮಲತಾಕೀರ್ಣಂ ನಾನಾಪುಷ್ಪೋಪಶೋಭಿತಮ್ ।
ಋಷೀಣಾಮಾಶ್ರಮೈರ್ಜುಷ್ಟಂ ವೇದಘೋಷನಿನಾದಿತಮ್ ॥ ೫ ॥

ಸಿಹರ್ಕ್ಷಶರಭಾಕೀರ್ಣಂ ಶಾರ್ದೂಲಗಜಸಂಯುತಮ್ ।
ವಿಮಲಸ್ವಾದುಪಾನೀಯೈಃ ಸರೋಭಿರುಪಶೋಭಿತಮ್ ॥ ೬ ॥

ಆರಾಮೈರ್ವಿವಿಧೈರ್ಜುಷ್ಟಂ ದೇವತಾಯತನೈಃ ಶುಭೈಃ ।
ಋಷಿಭಿರ್ಋಷಿಪುತ್ರೈಶ್ಚ ಮಹಾಮುನಿಗಣೈಸ್ತಥಾ ॥ ೭ ॥

---

೩. ಶ್ರೀ ಕೃಷ್ಣನು ಯೋಗಿಗಳಿಂದ ಸೇವಿಸಲ್ಪಟ್ಟ ಮತ್ತು ಅನೇಕವಿಧ ಪಕ್ಷಿಗಳಿಂದ ಪೂರ್ಣವಾದ, ಮಹಾತ್ಮನಾದ ಉಪಮನ್ಯು ಎಂಬ ಮುನೀಂದ್ರನ ಆಶ್ರಮಕ್ಕೆ ಹೋದನು.

೪. ಶಂಖ-ಚಕ್ರ ಗದೆಗಳನ್ನು ಹಸ್ತದಲ್ಲಿ ಧರಿಸಿ ಶ್ರೀವತ್ಸ ಎಂಬ ಲಕ್ಷಣದಿಂ ಅಂಕಿತನಾದ ಶ್ರೀಕೃಷ್ಣನು ಪಕ್ಷಿರಾಜನೂ ಮಹಾತೇಜಸ್ವಿಯೂ ಆದ ಗರುಡನನ್ನು ಏರಿ ಪ್ರಯಾಣಮಾಡಿದನು.

೫. ಅನೇಕ ವೃಕ್ಷ-ಲತೆಗಳಿಂದ ವ್ಯಾಪ್ತವೂ ಅನೇಕ ಪುಷ್ಪಗಳಿಂದ ಶೋಭಿತವೂ ಮಹರ್ಷಿಗಳ ಆಶ್ರಮದಿಂದ ಸೇವಿಸಲ್ಪಟ್ಟಿರುವುದೂ ಮತ್ತು ವೇದಘೋಷಗಳಿಂದ ಶಬ್ದಾಯಮಾನವೂ ಆದ ಅರಣ್ಯಕ್ಕೆ ಹೋದನು.

೬. ಮತ್ತು ಸಿಂಹ ಕರಡಿ ಶರಭ ಮೃಗಗಳಿಂದ ವ್ಯಾಪ್ತವೂ ವ್ಯಾಘ್ರ ಗಜಗಳಿಂದ ಕೂಡಿರುವುದೂ ನಿರ್ಮಲವೂ ಮಧುರವೂ ಆದ ಪಾನೀಯವುಳ್ಳ ಸರೋವರಗಳಿಂದ ಸುಂದರವೂ ಆದ ಅರಣ್ಯಕ್ಕೆ ಹೋದನು.

೭. ಮತ್ತು ಅನೇಕವಾದ ಆರಾಮಗಳಿಂದ ರಾಜಿತವೂ ಮಂಗಳಕರವಾದ ದೇವಾಲಯಗಳಿಂದ ಪವಿತ್ರವೂ ಋಷಿ, ಋಷಿ ಪುತ್ರ ಮತ್ತು ಮಹಾಮುನಿಗಳ ಸಂಘಗಳಿಂದ ಕೂಡಿರುವುದೂ ಆದ ಅರಣ್ಯಕ್ಕೆ ಹೋದನು.

ವೇದಾಧ್ಯಯನಸಂಪನ್ನೈಃ ಸೇವಿತಂ ಚಾಗ್ನಿಹೋತ್ರಿಭಿಃ ।
ಯೋಗಿಭಿರ್ಧ್ಯಾನನಿರತೈರ್ನಾಸಾಗ್ರನ್ಯಸ್ತಲೋಚನೈಃ ॥ ೮ ॥

ಉಪೇತಂ ಸರ್ವತಃ ಪುಣ್ಯಂ ಜ್ಞಾನಿಭಿಸ್ತತ್ತ್ವದರ್ಶಿಭಿಃ ।
ನದೀಭಿರಭಿತೋ ಜುಷ್ಟಂ ಜಾಪಕೈರ್ಬ್ರಹ್ಮವಾದಿಭಿಃ ॥ ೯ ॥

ಸೇವಿತಂ ತಾಪಸೈಃ ಪುಣ್ಯೈರೀಶಾರಾಧನತತ್ಪರೈಃ ।
ಪ್ರಶಾಂತೈಃ ಸತ್ಯಸಂಕಲ್ಪೈರ್ನಿಃಶೋಕೈರ್ನಿರುಪದ್ರವೈಃ ॥ ೧೦ ॥

ಭಸ್ಮಾವದಾತಸರ್ವಾಂಗೈಃ ರುದ್ರಜಾಪ್ಯಪರಾಯಣೈಃ ।
ಮುಂಡಿತೈರ್ಜಟಿಲೈಃ ಶುದ್ಧೈಸ್ತಥಾನ್ಯೈಶ್ಚ ಶಿಖಾಜಟೈಃ ॥ ೧೧ ॥

---

೮. ಹಾಗು ವೇದಾಧ್ಯಯನದಿಂದ ಕೂಡಿ ಬ್ರಹ್ಮವರ್ಚಸ್ವಿಗಳಾದ ಅಗ್ನಿಹೋತ್ರ ಕರ್ಮಾಚರಣೆಯುಳ್ಳವರಿಂದಲೂ ನಾಸಾಗ್ರದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಾಸಕ್ತರಾದ ಯೋಗಿಗಳಿಂದಲೂ ಸೇವಿಸಲ್ಪಡುವ ಅರಣ್ಯಕ್ಕೆ ಹೋದನು.

೯. ಮತ್ತು ತತ್ತ್ವವನ್ನು ಸಾಕ್ಷಾತ್ಕರಿಸಿದ ಮಹಾಜ್ಞಾನಿಗಳಿಂದ ಸರ್ವಪ್ರದೇಶಗಳಲ್ಲಿಯೂ ಕೂಡಿ ಪವಿತ್ರವೂ ಸುತ್ತಲೂ ನದಿಗಳಿಂದ ಸಂಪೂರ್ಣವೂ ಮತ್ತು ಜಪಕರ್ಮನಿರತರಾದ ಬ್ರಹ್ಮವಾದಿಗಳಿಂದ ತುಂಬಿರುವುದೂ ಆದ ವನವನ್ನು ಪ್ರವೇಶಿಸಿದನು.

೧೦. ಪವಿತ್ರರೂ ಈಶ್ವರಾರಾಧನ ನಿರತರೂ ಶಾಂತಶೀಲರೂ ಸತ್ಯಸಂಕಲ್ಪರೂ ಶೋಕ-ಉಪದ್ರವಗಳಿಂದ ರಹಿತರೂ ಆದ ತಪಸ್ವಿಗಳಿಗೆ ಸೇವ್ಯವಾಗಿರುವ ಅರಣ್ಯಕ್ಕೆ ಹೋದನು.

೧೧. ಅಲ್ಲಿರುವ ತಪಸ್ವಿಗಳು ಭಸ್ಮಲೇಪನದಿಂದ ಶುಭ್ರವಾದ ಅಂಗವುಳ್ಳವರೂ ರುದ್ರಾಧ್ಯಾಯ ಜಪದಲ್ಲಿ ಪರಾಯಣರೂ ಕೆಲವರು ಮುಂಡನ ಸಂಸ್ಕಾರದಿಂದ ಅಲಂಕೃತರೂ ಮತ್ತೆ ಕೆಲವರು ಜಟಾಧಾರಿಗಳೂ ಪವಿತ್ರರೂ ಇನ್ನು ಕೆಲವರು ಶಿಖಾರೂಪವಾದ ಜಟೆಗಳನ್ನು ಧರಿಸಿದವರೂ ಆಗಿದ್ದರು.

ಸೇವಿತಂ ತಾಪಸೈರ್ನಿತ್ಯಂ ಜ್ಞಾನಿಭಿರ್ಬ್ರಹ್ಮವಾದಿಭಿಃ ।
ತತ್ರಾಶ್ರಮವರೇ ರಮ್ಯೇ ಸಿದ್ಧಾಶ್ರಮವಿಭೂಷಿತೇ ॥ ೧೨ ॥

ಗಂಗಾ ಭಗವತೀ ನಿತ್ಯಂ ವಹತ್ಯೇವಾಘನಾಶಿನೀ ।
ಸ ತತ್ರ ವೀಕ್ಷ್ಯ ವಿಶ್ವಾತ್ಮಾ ತಾಪಸಾನ್ ವೀತಕಲ್ಮಷಾನ್ ॥ ೧೩ ॥

ಪ್ರಣಾಮೇನಾಥ ವಚಸಾ ಪೂಜಯಾಮಾಸ ಮಾಧವಃ ।
ತಂ ತೇ ದೃಷ್ಟ್ವಾ ಜಗದ್ಯೋನಿಂ ಶಂಖಚಕ್ರಗದಾಧರಮ್ ॥ ೧೪ ॥

ಪ್ರಣೇಮುರ್ಭಕ್ತಿಸಂಯುಕ್ತಾ ಯೋಗಿನಾಂ ಪರಮಂ ಗುರುಮ್ ।
ಸ್ತುವಂತಿ ವೈದಿಕೈರ್ಮಂತ್ರೈಃ ಕೃತ್ವಾ ಹೃದಿ ಸನಾತನಮ್ ॥ ೧೫ ॥

ಪ್ರೋಚುರನ್ಯೋಽನ್ಯಮವ್ಯಕ್ತಮಾದಿದೇವಂ ಮಹಾಮುನಿಮ್ ।
ಅಯಂ ಸ ಭಗವಾನೇಕಃ ಸಾಕ್ಷೀ ನಾರಾಯಣಃ ಪರಃ ॥ ೧೬ ॥

---

೧೨. ಇಂತಹ ತಪಸ್ವಿಗಳಿಂದಲೂ ಬ್ರಹ್ಮವಾದಿಗಳಾದ ಮಹಾಜ್ಞಾನಿಗಳಿಂದಲೂ ಪ್ರತಿನಿತ್ಯವೂ ಸೇವಿಸಲ್ಪಟ್ಟ ಆ ವನದಲ್ಲಿ ಸಿದ್ಧಜನರ ಆಶ್ರಮಗಳಿಂದ ಶೋಭಿತವಾದ ರಮ್ಯವಾದ ಆಶ್ರಮವಿತ್ತು.

೧೩. ಅಲ್ಲಿ ಪೂಜ್ಯಳಾದ ಮತ್ತು ಪಾಪಭಂಜಕಳಾದ ಗಂಗಾನದಿಯು ಯಾವಾಗಲೂ ಹರಿಯುವುದು. ವಿಶ್ವರೂಪನಾದ ಆ ಶ್ರೀಕೃಷ್ಣನು ಆ ಸ್ಥಳದಲ್ಲಿ ಕಳಂಕ ನಿರ್ಮುಕ್ತರಾದ ತಪಸ್ವಿಗಳನ್ನು ನೋಡಿದನು.

೧೪. ಅಲ್ಲಿ ಶ್ರೀ ಕೃಷ್ಣನು ನಮಸ್ಕಾರದಿಂದಲೂ ಸ್ತುತಿವಚನದಿಂದಲೂ ತಪಸ್ವಿಗಳನ್ನು ಪೂಜಿಸಿದನು. ತಪಸ್ವಿಗಳು ಜಗತ್ಕಾರಣನೂ ಶಂಖ-ಚಕ್ರ-ಗದಾಧಾರಿಯೂ ಆದ ಶ್ರೀ ಕೃಷ್ಣನನ್ನು ಸಂದರ್ಶಿಸಿದರು.

೧೫. ಮತ್ತು ಯೋಗಿಗಳಿಗೆ ಪರಮಗುರುವಾದ ಶ್ರೀ ಕೃಷ್ಣನಲ್ಲಿ ಪರಮಭಕ್ತಿಯುಕ್ತರಾಗಿ ಅನಾದಿಯಾದ ಪರಮಾತ್ಮನನ್ನು ಮನಸ್ಸಿನಲ್ಲಿ ಧ್ಯಾನಿಸಿ ವೈದಿಕ ಮಂತ್ರಗಳಿಂದ ಸ್ತುತಿಮಾಡಿದರು.

೧೬. ಮತ್ತು ಷಡ್ಗುಣೈಶ್ವರ್ಯಸಂಪನ್ನನೂ ಅದ್ವಿತೀಯನೂ ಸಾಕ್ಷಿರೂಪನೂ ಪರಮಪುರುಷನೂ ಅತೀಂದ್ರಿಯನೂ ಆದಿದೇವನೂ ಮಹಾಮುನಿಸ್ವರೂಪನೂ ಆದ ಪರಮಾತ್ಮನು ಬರುತ್ತಿರುವನೆಂದು ಅನ್ಯೋನ್ಯವಾಗಿ ಮಾತನಾಡಿಕೊಂಡರು.

ಆಗಚ್ಛತ್ಯಧುನಾ ದೇವಃ ಪ್ರಧಾನಪುರುಷಃ ಸ್ವಯಮ್ ।
ಅಯಮೇವಾವ್ಯಯಃ ಸ್ರಷ್ಟಾ ಸಂಹರ್ತಾ ಚೈವ ರಕ್ಷಕಃ ॥ ೧೭ ॥

ಅಮೂರ್ತೋ ಮೂರ್ತಿಮಾನ್ ಭೂತ್ವಾ ಮುನೀನ್ ದ್ರಷ್ಟುಮಿಹಾಗತಃ।
ಏಷ ಧಾತಾ ವಿಧಾತಾ ಚ ಸರ್ವಾಗಚ್ಛತಿ ಸರ್ವಗಃ ॥ ೧೮ ॥

ಅನಾದಿರಕ್ಷಯೋಽನಂತೋ ಮಹಾಭೂತೋ ಮಹೇಶ್ವರಃ ।
ಶ್ರುತ್ವಾ ಬುದ್ಧ್ವಾ ಹರಿಸ್ತೇಷಾಂ ವಚಾಂಸಿ ವಚನಾತಿಗಃ ॥ ೧೯ ॥

ಯಯೌ ಸ ತೂರ್ಣಂ ಗೋವಿಂದಃ ಸ್ಥಾನಂ ತಸ್ಯ ಮಹಾತ್ಮನಃ ।
ಉಪಸ್ಪೃಶ್ಯಾಥ ಭಾವೇನ ತೀರ್ಥೇ ತೀರ್ಥೇ ಸ ಯಾದವಃ ॥ ೨೦ ॥

---

೧೭. ಪ್ರಧಾನ ಮತ್ತು ಪುರುಷಸ್ವರೂಪನೂ ನಾಶವರ್ಜಿತನೂ ಸೃಷ್ಟಿ-ಸ್ಥಿತಿ ಸಂಹಾರಗಳನ್ನು ರಚಿಸುವವನೂ ಆದ ಪರಮಾತ್ಮನು ಈಗ ತಾನಾಗಿ ಬರುತಿರ್ನನು.

೧೮. ಮೂರ್ತಿರಹಿತನಾದ ಪರಮಾತ್ಮನು ಕಲ್ಪಿತವಾದ ಮೂರ್ತಿಯನ್ನು ಸ್ವೀಕರಿಸಿ ಮುನಿಜನರನ್ನು ನೋಡಲು ಇಲ್ಲಿಗೆ ಬರುತ್ತಿರುವನು. ಸೃಷ್ಟಿಕರ್ತನೂ ರಕ್ಷಕನೂ ಮತ್ತು ಸರ್ವವ್ಯಾಪಿಯೂ ಆದ ಪರಮಾತ್ಮನೇ ಈ ರೂಪದಿಂದ ಬರುತ್ತಾನೆ.

೧೯. ಈ ಶ್ರೀಹರಿಯು ಅನಾದಿಯೂ ನಾಶರಹಿತನೂ ಪರಿಚ್ಛೇದಶೂನ್ಯನೂ ಮಹಾಭೂತಸ್ವರೂಪನೂ ಮತ್ತು ಮಹೇಶ್ವರನೂ ಆಗಿದ್ದಾನೆ. ವಾಗತೀತನಾದ ಕೃಷ್ಣನು ಮುನಿಜನರ ಈ ವಚನಗಳನ್ನು ಕೇಳಿ ತಿಳಿದುಕೊಂಡನು.

೨೦. ಆ ಶ್ರೀ ಕೃಷ್ಣನು ಮಧ್ಯದಲ್ಲಿ ಎದುರುವ ಆಯಾಯ ತೀರ್ಥಗಳಲ್ಲಿ ಭಕ್ತಿಯಿಂದ ಆಚಮನ ಮಾಡುತ್ತಾ ಆ ಮಹಾತ್ಮನಾದ ಉಪಮನ್ಯುವಿನ ಸ್ಥಾನಕ್ಕೆ ವೇಗವಾಗಿ ಬಂದು ಸೇರಿದನು.

ಚಕಾರ ದೇವಕೀಸೂನುರ್ದೇವರ್ಷಿಪಿತೃತರ್ಪಣಮ್ ।
ನದೀನಾಂ ತೀರಸಂಸ್ಥಾನೇ ಸ್ಥಾಪಿತಾನಿ ಮುನೀಶ್ವರಃ ॥ ೨೧ ॥

ಲಿಂಗಾನಿ ಪೂಜಯಾಮಾಸ ಶಂಭೋರಮಿತತೇಜಸಃ ।
ದೃಷ್ಟ್ವಾ ದೃಷ್ಟ್ವಾ ಸಮಾಯಾಂತಂ ಯತ್ರ ಯತ್ರ ಜನಾರ್ದನಮ್॥೨೨॥

ಪೂಜಯಾಂಚಕ್ರಿರೇ ಪುಷ್ಪೈರಕ್ಷತೈಸ್ತನ್ನಿವಾಸಿನಃ ।
ಸಮೀಕ್ಷ್ಯ ವಾಸುದೇವಂ ತಂ ಶಾರ್ಙ್ಗಶಂಖಾಸಿಧಾರಿಣಮ್ ॥ ೨೩ ॥

ತಸ್ಥಿರೇ ನಿಶ್ಚಲಾಃ ಸರ್ವೇ ಶುಭಾಂಗಾ ಯತಮಾನಸಾಃ ।
ಯಾನಿ ತತ್ರಾರುರುಕ್ಷೂಣಾಂ ಮಾನಸಾನಿ ಜನಾರ್ದನಮ್ ॥ ೨೪ ॥

ದೃಷ್ಟ್ವಾ ಸಮಾಹಿತಾನ್ಯಾಸನ್ನಿಷ್ಕ್ರಾಮಂತಿ ಪುರಾ ಹರಿಮ್ ।
ಅಥಾವಗಾಹ್ಯ ಗಂಗಾಯಾಂ ಕೃತ್ವಾ ದೇವರ್ಷಿತರ್ಪಣಮ್ ॥ ೨೫ ॥

---

೨೧. ದೇವಕೀ ಪುತ್ರನಾದ ಶ್ರೀ ಕೃಷ್ಣನು ಅಲ್ಲಲ್ಲಿ ದೇವಋಷಿ ಪಿತೃಗಳಿಗೆ ತರ್ಪಣವನ್ನು ಕೊಟ್ಟನು ಮತ್ತು ಮುನೀಶ್ವರನಾಗಿ ನದೀತೀರಗಳಲ್ಲಿ ಸ್ಥಾಪಿಸಲ್ಪಟ್ಟ ದೇವಾಲಯಗಳನ್ನು ನೋಡಿದನು.

೨೨. ಮತ್ತು ಅಪಾರ ಮಹಿಮೆಯನ್ನು ತೋರುವ ಮಹೇಶ್ವರನ ಲಿಂಗಗಳನ್ನು ಪೂಜಿಸಿದನು. ಹೀಗೆ ಜನಾರ್ದನನು ಅಲ್ಲಲ್ಲಿ ಬರುತ್ತಿದ್ದುದನ್ನು ಅನೇಕ ಜನರು ಸಂದರ್ಶಿಸಿದರು.

೨೩. ಮತ್ತು ಶಾರ್ಙ್ಗ ಧನಸ್ಸು, ಶಂಖ ಮತ್ತು ಖಡ್ಗಗಳನ್ನು ಧರಿಸಿದ ವಸುದೇವ ಪುತ್ರನಾದ ಶ್ರೀ ಕೃಷ್ಣನನ್ನು ನೋಡಿ ಅಲ್ಲಲ್ಲಿ ವಾಸಮಾಡುವ ಪ್ರಜೆಗಳು ಪುಷ್ಪ-ಅಕ್ಷತೆಗಳಿಂದ ಪೂಜೆಮಾಡಿದರು.

೨೪. ಮತ್ತು ಅಚಂಚಲರೂ ಪವಿತ್ರವಾದ ದೇಹವುಳ್ಳವರೂ ಮತ್ತು ಜಿತವಾದ ಮಾನಸವುಳ್ಳವರೂ ಆದರು. ಅಲ್ಲಿ ಇರುವ ತಪಸ್ವಿಗಳ ಮಾನಸಗಳು ಜನಾರ್ದನಸ್ವಾಮಿಯನ್ನು ಹೊಂದಲು ಕುತೂಹಲಗೊಂಡಿದ್ದುವು.

೨೫. ಹೀಗೆ ಶ್ರೀ ಹರಿಯ ಪ್ರಾಪ್ತಿಗೆ ಕುತೂಹಲಗೊಂಡ ತಪಸ್ವಿಗಳ ಮಾನಸಗಳು ಕೃಷ್ಣನನ್ನು ನೋಡಿ ಸಮಾಧಾನಗೊಂಡುವು. ತರುವಾಯ ಶ್ರೀ ಕೃಷ್ಣನು ಗಂಗಾನದಿಯಲ್ಲಿ ಸ್ನಾನಮಾಡಿ ದೇವ-ಋಷಿ-ಪಿತೃಗಳಿಗೆ ತರ್ಪಣವನ್ನು ಆಚರಿಸಿದನು.

ಆದಾಯ ಪುಷ್ಪವರ್ಯಾಣಿ ಮುನೀಂದ್ರಸ್ಯಾವಿಶದ್ಗೃಹಮ್ ।
ದೃಷ್ಟ್ವಾ ತಂ ಯೋಗಿನಾಂ ಶ್ರೇಷ್ಠಂ ಭಸ್ಮೋದ್ಧೂಲಿತವಿಗ್ರಹಮ್॥೨೬॥

ಜಟಾಚೀರಧರಂ ಶಾಂತಂ ನನಾಮ ಶಿರಸಾ ಮುನಿಮ್ ।
ಆಲೋಕ್ಯ ಕೃಷ್ಣಮಾಯಾಂತಂ ಪೂಜಯಾಮಾಸ ತತ್ತ್ವವಿತ್ ॥ ೨೭ ॥

ಆಸನೇ ವಾಸಯಾಮಾಸ ಯೋಗಿನಾಂ ಪ್ರಥಮಾತಿಥಿಮ್ ।
ಉವಾಚ ವಚಸಾಂ ಯೋನಿಂ ಜಾನೀಮಃ ಪರಮಂ ಪದಮ್ ॥ ೨೮ ॥

ವಿಷ್ಣುಮವ್ಯಕ್ತ ಸಂಸ್ಥಾನಂ ಶಿಷ್ಯಭಾವೇನ ಸಂಸ್ಥಿತಮ್ ।
ಸ್ವಾಗತಂ ತೇ ಹೃಷೀಕೇಶ ಸಫಲಾನಿ ತಪಾಂಸಿ ನಃ ॥ ೨೯ ॥

---

೨೬. ಮತ್ತು ಉತ್ತಮವಾದ ಪುಷ್ಪಗಳನ್ನು ತೆಗೆದುಕೊಂಡು ಮುನೀಂದ್ರನ ಆಶ್ರಮವನ್ನು ಪ್ರವೇಶಿಸಿದನು. ಮತ್ತು ಭಸ್ಮದಿಂದ ಲೇಪಿಸಿದ ಪವಿತ್ರವಾದ ದೇಹವುಳ್ಳ ಆ ಯೋಗಿಶ್ರೇಷ್ಠನನ್ನು ಸಂದರ್ಶಿಸಿದನು.

೨೭. ಜಟೆ ಮತ್ತು ವಲ್ಕಲಗಳನ್ನು ಧರಿಸಿ ಶಾಂತನಾದ ಆ ಮುನಿಯನ್ನು ನೋಡಿ ಶಿರಸ್ಸಿನಿಂದ ವಂದಿಸಿದನು. ಆಗ ತತ್ತ್ವಜ್ಞಾನಿಯಾದ ಆ ಮುನಿಯು ಬರುತ್ತಿದ್ದ ಶ್ರೀ ಕೃಷ್ಣನನ್ನು ನೋಡಿ ಸತ್ಕರಿಸಿದನು.

೨೮. ಮತ್ತು ಯೋಗಿಗಳಿಗೆ ಶ್ರೇಷ್ಠ ಅತಿಥಿಯಾದ ಶ್ರೀ ಕೃಷ್ಣನನ್ನು ಆಸನದಲ್ಲಿ ಕುಳ್ಳಿರಿಸಿದನು. ಹಾಗೂ ಪರಮಪದಸ್ವರೂಪನೂ ವಾಙ್ಮಯಗಳಿಗೆ ಕಾರಣನೂ ಆದ ಶ್ರೀ ಕೃಷ್ಣನನ್ನು ಕುರಿತು ಈ ರೀತಿಯಾಗಿ ಹೇಳಿದನು.

೨೯. ಪೂಜ್ಯನೇ! ನಿನ್ನನ್ನು ಅವ್ಯಕ್ತವಾದ ಸಂಸ್ಥಾನವುಳ್ಳ ಮತ್ತು ಶಿಷ್ಯಭಾವದಿಂದ ಬಂದಿರುವ ಮಹಾವಿಷ್ಣುವೆಂದು ತಿಳಿದಿರುವೆವು. ಇಂದ್ರಿಯಾಧಿ ಪತಿಯೇ! ನಿನಗೆ ಸ್ವಾಗತವು. ಈಗ ನಮ್ಮ ತಪಸ್ಸುಗಳು ಫಲಿಸಿದುವು.

ಯತ್ಸಾಕ್ಷಾ ದೇವ ವಿಶ್ವಾತ್ಮಾ ಮದ್ಗೇಹಂ ವಿಷ್ಣುರಾಗತಃ ।
ತ್ವಾಂ ನ ಪಶ್ಯಂತಿ ಮುನಯೋ ಯತಂತೋऽಪಿ ಹಿ ಯೋಗಿನಃ ॥೩೦ ॥

ತಾದೃಶಸ್ಯಾತ್ರ ಭವತಃ ಕಿಮಾಗಮನಕಾರಣಮ್ ।
ಶ್ರುತ್ವೋಪಮನ್ಯೋಸ್ತದ್ವಾಕ್ಯಂ ಭಗವಾನ್ ದೇವಕೀಸುತಃ ॥ ೩೧ ॥

ವ್ಯಾಜಹಾರ ಮಹಾಯೋಗೀ ಪ್ರಸನ್ನಂ ಪ್ರಣಿಪತ್ಯ ತಮ್ ।

ಕೃಷ್ಣ ಉವಾಚ :—

ಭಗವನ್ ದ್ರಷ್ಟುಮಿಚ್ಛಾಮಿ ಗಿರೀಶಂ ಕೃತ್ತಿವಾಸಸಮ್ ॥ ೩೨ ॥

ಸಂಪ್ರಾಪ್ತೋ ಭವತಃ ಸ್ಥಾನಂ ಭಗವದ್ದರ್ಶನೋತ್ಸುಕಃ ।
ಕಥಂ ಸ ಭಗವಾನೀಶೋ ದೃಶ್ಯೋ ಯೋಗವಿದಾಂ ವರಃ ॥ ೩೩ ॥

---

೩೦. ವಿಶ್ವರೂಪಿಯಾದ ಮಹಾವಿಷ್ಣುವು ಪ್ರತ್ಯಕ್ಷವಾಗಿ ನನ್ನ ಆಶ್ರಮಕ್ಕೆ ಬಂದಿರುವನು. ಮುನಿಗಳು ಯೋಗಪರರಾಗಿ ಹೆಚ್ಚು ಪ್ರಯತ್ನಿಸಿದರೂ ನಿನ್ನನ್ನು ಸಂದರ್ಶಿಸಲಾರರು.

೩೧. ಅಂತಹ ಪೂಜ್ಯನಾದ ನೀನು ಇಲ್ಲಿಗೆ ಬರಲು ಕಾರಣವೇನು ? ದೇವಕೀ ಪುತ್ರನಾದ ಶ್ರೀ ಕೃಷ್ಣನು ಉಪಮನ್ಯುವಿನ ಆ ವಾಕ್ಯವನ್ನು ಕೇಳಿ ಪ್ರಸನ್ನನಾದ ಆ ಮುನಿಯನ್ನು ನಮಸ್ಕರಿಸಿ ಹೇಳಿದನು.

೩೨. ಶ್ರೀ ಕೃಷ್ಣನು ಹೀಗೆಂದು ನುಡಿದನು ! ಪೂಜ್ಯನಾದ ಗುರುವರ್ಯನೇ :- ಗಜಚರ್ಮಾಂಬರಧಾರಿಯೂ ಕೈಲಾಸಾದ್ರಿನಾಥನೂ ಆದ ಶಂಕರನನ್ನು ನಾನು ನೋಡಬೇಕೆಂದಿರುವೆನು.

೩೩. ಆ ಭಗವಂತನ ದರ್ಶನದಲ್ಲಿ ಕುತುಹಲಶಾಲಿಯಾಗಿ ನಿನ್ನ ಆಶ್ರಮಕ್ಕೆ ಬಂದಿದ್ದೇನೆ. ಯೋಗಾಭ್ಯಾಸವನ್ನು ಅರಿತವರಲ್ಲಿ ಶ್ರೇಷ್ಠನೂ ಪರಮಪೂಜ್ಯನೂ ಆದ ಮಹೇಶ್ವರನು ಹೇಗೆ ದೃಷ್ಟಿಗೆ ಗೋಚರಿಸುವನು.

ಮಯೋಚಿರೇಣ ಕುತ್ರಾಹಂ ದ್ರಕ್ಷ್ಯಾಮಿ ತಮುಮಾಪತಿಮ್ ।
ಪ್ರತ್ಯಾಹ ಭಗವಾನುಕ್ತೋ ದೃಶ್ಯತೇ ಪರಮೇಶ್ವರಃ ॥ ೩೪ ॥

ಭಕ್ತ್ಯೈವೋಗ್ರೇಣ ತಪಸಾ ತತ್ಕುರುಷ್ವೇಹ ಸಂಯುತಃ ।
ಇಹೇಶ್ವರಂ ದೇವದೇವಂ ಮುನೀಂದ್ರಾ ಬ್ರಹ್ಮವಾದಿನಃ ॥ ೩೫ ॥

ಧ್ಯಾಯಂತ್ಯಾರಾದಯಂತ್ಯೇನಂ ಯೋಗಿನಸ್ತಾಪಸಾಶ್ಚ ಯೇ ।
ಇಹ ದೇವಃ ಸಪತ್ನೀಕೋ ಭಗವಾನ್ ವೃಷಭಧ್ವಜಃ ॥ ೩೬ ॥

ಕ್ರೀಡತೇ ವಿವಿಧೈರ್ಭೂತೈರ್ಯೋಗಿಭಿಃ ಪರಿವಾರಿತಃ ।
ಇಹಾಶ್ರಮೇ ಪುರಾ ರುದ್ರಂ ತಪಸ್ತಪ್ತ್ವಾ ಸುದಾರುಣಮ್ ॥ ೩೭ ॥

---

೩೪. ನಾನು ಪಾರ್ವತೀರಮಣನಾದ ಶಂಕರನನ್ನು ಶೀಘ್ರವಾಗಿ ಎಲ್ಲಿ ನೋಡ ಬಹುದು? ಹೀಗೆಂದು ಕೃಷ್ಣನಿಂದ ಪ್ರಾರ್ಥಿಸಲ್ಪಟ್ಟ ಉಪಮನ್ಯುವು ಪ್ರತಿವಚನವನ್ನು ಹೇಳಿದನು.

೩೫. ಕೃಷ್ಣನೇ ! ಪರಮೇಶ್ವರನು ಭಕ್ತಿಯೋಗದಿಂದಲೂ ಉಗ್ರವಾದ ತಪಸ್ಸಿನಿಂದಲೂ ಪ್ರತ್ಯಕ್ಷನಾಗುವನು. ಆದ್ದರಿಂದ ನೀನು ಜಿತೇಂದ್ರಿಯನಾಗಿ ಇಲ್ಲಿ ತಪಸ್ಸನ್ನು ಮಾಡು. ಬ್ರಹ್ಮವಾದಿಗಳಾದ ಮುನೀಂದ್ರರು ದೇವದೇವನಾದಈಶ್ವರನನ್ನು ಇಲ್ಲಿ ಧ್ಯಾನಿಸುತ್ತಾರೆ.

೩೬. ಯೋಗಿಗಳೂ ಮತ್ತು ತಪಸ್ವಿಗಳೂ ಶಂಕರನನ್ನು ಇಲ್ಲಿ ಧ್ಯಾನ-ಆರಾಧನ ಗಳಿಂದ ಸಂತೋಷಪಡಿಸುತ್ತಾರೆ. ನಂದೀಶ್ವರ ಚಿಹ್ನದ ಧ್ವಜವುಳ್ಳ ಮಹಾದೇವನು ಇಲ್ಲಿ ಸಪತ್ನೀಕನಾಗಿರುವನು.

೩೭. ಆ ಪರಮೇಶ್ವರನು ಅನೇಕ ಭೂತಗಳಿಂದಲೂ ಯೋಗಿವರ್ಯರಿಂದಲೂ ಸುತ್ತಲ್ಪಟ್ಟವನಾಗಿ ಕ್ರೀಡಿಸುತ್ತಿರುವನು. ಪೂಜ್ಯನಾದ ವಸಿಷ್ಠಮುನಿಯು ಪೂರ್ವದಲ್ಲಿ ಈ ಆಶ್ರಮದಲ್ಲಿ ರುದ್ರನನ್ನು ಕುರಿತು ದಾರುಣವಾದ ತಪಸ್ಸನ್ನು ಆಚರಿಸಿದನು.

ಲೇಭೇ ಮಹೇಶ್ವರಾದ್ಯೋಗಂ ವಸಿಷ್ಠೋ ಭಗವಾನ್ನೃಷಿಃ ।
ಇಹೈವ ಭಗವಾನ್ ವ್ಯಾಸಃ ಕೃಷ್ಣದ್ವೈಪಾಯನಃ ಸ್ವಯಮ್ ॥ ೩೮ ॥

ದೃಷ್ಟ್ವಾ ತಂ ಪರಮೇಶಾನಂ ಲಬ್ಧವಾನ್ ಜ್ಞಾನಮೈಶ್ವರಮ್ ।
ಇಹಾಶ್ರಮಪದೇ ರಮ್ಯೇ ತಪಸ್ತಪ್ತ್ವಾ ಕಪರ್ದಿನಃ ॥ ೩೯ ॥

ಅವಿಂದನ್ ಪುತ್ರಕಾನ್ ರುದ್ರಾನ್ ಸೂರಯೋ ಭಕ್ತಿಸಂಯುತಾಃ ।
ಇಹ ದೇವಾ ಮಹಾದೇವೀಂ ಭವಾನೀಂ ಚ ಮಹೇಶ್ವರೀಮ್ ॥ ೪೦ ॥

ಸಂಸ್ತುವಂತೋ ಮಹಾದೇವಂ ನಿರ್ಭಯಾ ನಿರ್ವೃತಿಂ ಯಯುಃ ।
ಇಹಾರಾಧ್ಯ ಮಹಾದೇವಂ ಸಾವರ್ಣಿಸ್ತಪತಾಂ ವರಃ ॥ ೪೧ ॥

---

೩೮. ಮತ್ತು ಆ ವಸಿಷ್ಠಮುನಿಯು ಮಹೇಶ್ವರನಿಂದ ಯೋಗವಿದ್ಯೆಯನು ಹೊಂದಿದನು. ಮತ್ತು ಕೃಷ್ಣ ದ್ವೈಪಾಯನ ಎಂದು ಪ್ರಸಿದ್ಧನೂ ಪೂಜ್ಯನೂ ಆದ ವ್ಯಾಸಮುನಿಯು ಇಲ್ಲಿ ಈಶ್ವರನನ್ನು ಸಾಕ್ಷಾತ್ಕರಿಸಿದನು.

೩೯. ಹಾಗು ಆ ಪರಮೇಶ್ವರನನ್ನು ಕಂಡು ಈಶ್ವರಜ್ಞಾನವನ್ನು ಹೊಂದಿದನು. ಮತ್ತು ಅನೇಕ ಭಕ್ತರು ಈ ರಮ್ಯವಾದ ಆಶ್ರಮದಲ್ಲಿ ಜಟಾಜೂಟಧಾರಿಯಾದ ಈಶ್ವರನನ್ನು ಕುರಿತು ತಪಸ್ಸನ್ನು ಮಾಡಿದರು.

೪೦. ಅಂತಹ ಜ್ಞಾನಸಂಪನ್ನರಾದ ಭಕ್ತರು ರುದ್ರನ ಅನುಗ್ರಹದಿಂದ ಪುತ್ರರನ್ನು ಹೊಂದಿದರು. ಈ ಸ್ಥಳದಲ್ಲಿ ದೇವತೆಗಳು ಸರ್ವೇಶ್ವರಿಯೂ ಮಹಾದೇವಿಯೂ ಆದ ಪಾರ್ವತಿಯನ್ನು ಸ್ತುತಿಸಿದರು.

೪೧. ಹೀಗೆ ಪಾರ್ವತಿಯನ್ನೂ ಮಹಾದೇವನನ್ನೂ ಸ್ತುತಿಸಿದ ಭಕ್ತರು ನಿರ್ಭಯರಾಗಿ ಕೈವಲ್ಯವನ್ನು ಹೊಂದಿದರು. ತಪಸ್ವಿಗಳಲ್ಲಿ ಗಣ್ಯನಾದ ಸಾವರ್ಣಿಯು ಇಲ್ಲಿ ಮಹಾದೇವನನ್ನು ಆರಾಧಿಸಿದನು.

ಲಬ್ಧವಾನ್ ಪರಮಂ ಯೋಗಂ ಗ್ರಂಥಕಾರತ್ವಮುತ್ತಮಮ್ ।
ಪ್ರವರ್ತಯಾಮಾಸ ಸ ತಾಂ ಕೃತ್ವಾ ವೈ ಸಂಹಿತಾಂ ಶುಭಾಮ್ ॥೪೨॥

ದ್ವಿಜಃ ಪೌರಾಣಿಕೀಂ ಪುಣ್ಯಾಂ ಪ್ರಸಾದೇನ ದ್ವಿಜೋತ್ತಮೈಃ ।
ಇಹೈವ ಖ್ಯಾಪಿತಂ ಶಿಷ್ಯೈರ್ವೈಶಂಪಾಯನಭಾಷಿತಮ್ ॥ ೪೩ ॥

ಯಾಜ್ಞವಲ್ಕ್ಯಂ ಮಹಾಯೋಗೀ ದೃಷ್ಟ್ವಾತ್ರ ತಪಸಾ ಹರಮ್ ।
ಚಕಾರ ತನ್ನಿಯೋಗೇನ ಯೋಗಶಾಸ್ತ್ರಮನುತ್ತಮಮ್ ॥ ೪೪ ॥

ಇಹೈವ ಭೃಗುಣಾ ಪೂರ್ವಂ ತಪ್ತ್ವಾ ಪೂರ್ವಂ ಮಹಾತಪಃ ।
ಶುಕ್ರೋ ಮಹೇಶ್ವರಾತ್ಪುತ್ರೋ ಲಬ್ಧೋ ಯೋಗವಿದಾಂ ವರಃ॥ ೪೫ ॥

---

೪೨. ಮತ್ತು ತನ್ಮೂಲಕವಾಗಿ ಉತ್ತಮಯೋಗವನ್ನೂ ಶ್ರೇಷ್ಠವಾದ ಗ್ರಂಥ ರಚನಾಶಕ್ತಿಯನ್ನೂ ಹೊಂದಿ ಆ ಸಾವರ್ಣಿಯು ಮಂಗಳಕರವಾದ ಸಂಹಿತಾ ಗ್ರಂಥವನ್ನು ಬರೆದು ಧಾರ್ಮಿಕರಲ್ಲಿ ಪ್ರಚಾರಮಾಡಿದನು.

೪೩. ಸಾವರ್ಣಿದ್ವಿಜನು ಪವಿತ್ರವಾದ ಪುರಾಣ ಸಂಹಿತೆಯನ್ನು ಈಶ್ವರನ ಪ್ರಸಾದದಿಂದ ದ್ವಿಜೋತ್ತಮರಲ್ಲಿ ಪ್ರಖ್ಯಾತಿ ಪಡಿಸಿದನು. ಮತ್ತು ಈ ಸ್ಥಳದಲ್ಲಿಯೇ ವೈಶಂಪಾಯನ ಮುನಿಯ ಆದೇಶವು ಶಿಷ್ಯರಿಂದ ಪ್ರಖ್ಯಾತಿಗೊಂಡಿತು.

೪೪. ಯಾಜ್ಞವಲ್ಕ್ಯ ಎಂಬ ಮಹಾಯೋಗಿಯು ತಪಸ್ಸಿನಿಂದ ಈ ಸ್ಥಳದಲ್ಲಿ ಈಶ್ವರನನ್ನು ಸಾಕ್ಷಾತ್ಕರಿಸಿ ಈಶ್ವರನ ಆದೇಶದಿಂದ ಶ್ರೇಷ್ಠವಾದ ಯೋಗಶಾಸ್ತ್ರವನ್ನು ರಚಿಸಿದನು.

೪೫. ಮತ್ತು ಭೃಗುಮುನಿಯಿಂದ ಪೂರ್ವಕಾಲದಲ್ಲಿ ಈ ಸ್ಥಳದಲ್ಲಿಯೆ ಮಹತ್ತಾದ ತಪವನ್ನು ಆಚರಿಸಿ ಯೋಗಜ್ಞರಲ್ಲಿ ಪ್ರಶಸ್ತನಾದ ಶುಕ್ರಾಚಾರ್ಯನೆಂಬ ಪುತ್ರನು ಈಶ್ವರಾನುಗ್ರಹದಿಂದ ಹೊಂದಲ್ಪಟ್ಟನು.

ತಸ್ಮಾದಿಹೈವ ದೇವೇಶ ತಪಸ್ತಪ್ತ್ವಾ ಸುದುಶ್ಚರಮ್ ।
ದ್ರಷ್ಟುಮರ್ಹಸಿ ವಿಶ್ವೇಶಮುಗ್ರಂ ಭೀಮಂ ಕಪರ್ದಿನಮ್ ॥ ೪೬ ॥

ಏವಮುಕ್ತ್ವಾ ದದೌ ಜ್ಞಾನಮುಪಮನ್ಯುರ್ಮಹಾಮುನಿಃ ।
ವ್ರತಂ ಪಾಶುಪತಂ ಯೋಗಂ ಕೃಷ್ಣಾಯಾಕ್ಲಿಷ್ಟಕರ್ಮಣೇ ॥ ೪೭ ॥

ಸ ತೇನ ಮುನಿವರ್ಯೇಣ ವ್ಯಾಕೃತೋ ಮಧುಸೂದನಃ ।
ತತ್ರೈವ ತಪಸಾ ದೇವಂ ರುದ್ರಮಾರಾಧಯತ್ಪ್ರಭುಃ ॥ ೪೮ ॥

ಭಸ್ಮೋದ್ಧೂಲಿತಸರ್ವಾಂಗೋ ಮುಂಡೋ ವಲ್ಕಲಸಂಯುತಃ ।
ಜಜಾಪ ರುದ್ರಮನಿಶಂ ಶಿವೈಕಾಹಿತಮಾನಸಃ ॥ ೪೯ ॥

---

೪೬. ದೇವಾಧಿಪತಿಯೇ ! ಆದುದರಿಂದ - ಈ ಸ್ಥಳದಲ್ಲಿಯೇ ಕಠಿಣವಾದ ತಪಸ್ಸನ್ನು ಮಾಡಿ ವಿಶ್ವೇಶ್ವರನೂ ಉಗ್ರನೂ ಭೀಮರೂಪನೂ ಜಟಾಧಾರಿಯೂ ಆದ ಈಶ್ವರನನ್ನು ನೋಡಲು ಅರ್ಹನಾಗಿದ್ದೀಯೆ.

೪೭. ಉಪಮನ್ಯುಮಹಾಮುನಿಯು ಹೀಗೆಂದು ಹೇಳಿ ಉತ್ತಮಕರ್ಮನಿಷ್ಠನಾದ ಶ್ರೀ ಕೃಷ್ಣನಿಗೆ ಪಾಶುಪತಯೋಗವಿಧಿಗೆ ಅನುಕೂಲವಾದ ವ್ರತವನ್ನೂ ಜ್ಞಾನವನ್ನೂ ಉಪದೇಶಿಸಿದನು.

೪೮. ಹೀಗೆ ಮುನಿವರ್ಯನಾದ ಉಪಮನ್ಯುವಿನಿಂದ ನಿಯೋಜಿಸಲ್ಪಟ್ಟ ಮಧುದೈತ್ಯಸಂಹಾರಿಯೂ ಪ್ರಭುವೂ ಆದ ಕೃಷ್ಣನು ಅಲ್ಲಿಯೇ ತಪಸ್ಸಿನಿಂದ ರುದ್ರದೇವನನ್ನು ಆರಾಧಿಸಿದನು.

೪೯. ಭಸ್ಮದಿಂದ ಲೇಪಿಸಲ್ಪಟ್ಟ ಸರ್ವಾಂಗವುಳ್ಳವನೂ, ಮುಂಡನ ಸಂಸ್ಕಾರವುಳ್ಳವನೂ, ವಲ್ಕಲವನ್ನು ಧರಿಸಿದವನೂ ಮತ್ತು ಶಿವನಲ್ಲಿಯೇ ಇರಿಸಲ್ಪಟ್ಟ ಮಾನಸವುಳ್ಳವನೂ ಆಗಿ ಯಾವಾಗಲೂ ರುದ್ರಮಂತ್ರವನ್ನು ಜಪಿಸಿದನು.

ತತೋ ಬಹುತಿಥೇ ಕಾಲೇ ಸೋಮಃ ಸೋಮಾರ್ಧಭೂಷಣಃ ।
ಅದೃಶ್ಯತ ಮಹಾದೇವೋ ವ್ಯೋಮ್ನಿ ದೇವ್ಯಾ ಮಹೇಶ್ವರಃ ॥ ೫೦ ॥

ಕಿರೀಟಿನಂ ಗದಿನಂ ಚಿತ್ರಮಾಲಂ
ಪಿನಾಕಿನಂ ಶೂಲಿನಂ ದೇವದೇವಮ್ ।
ಶಾರ್ದೂಲಚರ್ಮಾಂಬರಸಂವೃತಾಂಗಂ
ದೇವ್ಯಾ ಮಹಾದೇವಮಸೌ ದದರ್ಶ ॥ ೫೧ ॥

ಪ್ರಭುಂ ಪುರಾಣಂ ಪುರುಷಂ ಪುರಸ್ತಾತ್
ಸನಾತನಂ ಯೋಗಿನಮೀಶಿತಾರಮ್ ।
ಅಣೋರಣೀಯಾಂಸಮನಂತಶಕ್ತಿಂ
ಪ್ರಾಣೇಶ್ವರಂ ಶಂಭುಮಸೌ ದದರ್ಶ ॥ ೫೨ ॥

---

೫೦. ತರುವಾಯ ಹೀಗೆ ಅನೇಕ ಕಾಲವು ಕಳೆಯಲಾಗಿ ಸೌಮ್ಯಮೂರ್ತಿಯುಳ್ಳವನೂ, ಅರ್ಧಚಂದ್ರನಿಂದ ಭೂಷಿಸಲ್ಪಟ್ಟವನೂ, ಮಹಾದೇವನೂ ಆದ ಈಶ್ವರನು ಪಾರ್ವತೀದೇವಿಯೊಡನೆ ಆಕಾಶದಲ್ಲಿ ಕಾಣಿಸಿಕೊಂಡನು.

೫೧ ಈ ಶ್ರೀ ಕೃಷ್ಣನು ಕಿರೀಟ-ಗದೆ ಚಿತ್ರವಾದಮಾಲಿಕೆ-ಪಿನಾಕಾಯುಧ-ತ್ರಿಶೂಲ ಮುಂತಾದ ಉಪಕರಣಗಳನ್ನು ಧರಿಸಿದವನೂ, ದೇವೋತ್ತಮನೂ, ಶಾರ್ದೂಲಚರ್ಮವೆಂಬ ವಸ್ತ್ರದಿಂದ ಮುಚ್ಚಿದ ಲಿಂಗವುಳ್ಳವನೂ ಆದ ಮಹಾದೇವನನ್ನು ಪಾರ್ವತೀ ದೇವಿಯೊಡನೆ ನೋಡಿದನು.

೫೨. ಈ ಶ್ರೀ ಕೃಷ್ಣನು ಪ್ರಭುವೂ, ಪುರಾಣಪುರುಷನೂ, ಅನಾದಿಯೂ, ಯೋಗಿಯೂ, ಸರ್ವೇಶ್ವರನೂ, ಸೂಕ್ಷ್ಮವಸ್ತುವಿಗಿಂತ ಸೂಕ್ಷ್ಮನೂ, ಅನಂತವಾದ ಶಕ್ತಿಯುಳ್ಳವನೂ, ಪ್ರಾಣಾಧಿಪತಿಯೂ ಆದ ಶಂಕರನನ್ನು ಮುಂಭಾಗದಲ್ಲಿ ನೋಡಿದನು.

ಪರಶ್ವಧಾಸಕ್ತಕರಂ ತ್ರಿಣೇತ್ರಂ
ನೃಸಿಹ್ಮಚರ್ಮಾವೃತಭಸ್ಮಗಾತ್ರಮ್ ।
ಸಮುದ್ಗಿರಂತಂ ಪ್ರಣವಂ ಬೃಹಂತಂ
ಸಹಸ್ರಸೂರ್ಯಪ್ರತಿಮಂ ದದರ್ಶ ॥ ೫೩ ॥

ನ ಯಸ್ಯ ದೇವಾ ನ ಪಿತಾಮಹೋಽಪಿ
ನೇಂದ್ರೋ ನ ಚಾಗ್ನಿರ್ವರುಣೋ ನ ಮೃತ್ಯುಃ ।
ಪ್ರಭಾವಮದ್ಯಾಪಿ ವದಂತಿ ರುದ್ರಂ
ತಮಾದಿದೇವಂ ಪುರತೋ ದದರ್ಶ ॥ ೫೪ ॥

ತದಾನ್ವಪಶ್ಯದ್ಗಿರಿಶಸ್ಯ ವಾಮೇ
ಸ್ವಾತ್ಮಾನ ಮವ್ಯಕ್ತಮನಂತರೂಪಮ್ ।
ಸ್ತುವಂತಮೀಶಂ ಬಹುಭಿರ್ವಚೋಭಿಃ
ಶಂಖಾಸಿಚಕ್ರಾನ್ವಿತಹಸ್ತಮಾದ್ಯಮ್ ॥ ೫೫ ॥

---

೫೩. ಮತ್ತು ಪರಶು ಆಯುಧದಲ್ಲಿ ಆಸಕ್ತವಾದ ಹಸ್ತವುಳ್ಳವನೂ, ನೇತ್ರ ತ್ರಯವುಳ್ಳವನೂ, ಶಾರ್ದೂಲ ಚರ್ಮ ಮತ್ತು ಭಸ್ಮಗಳಿಂದ ಆಚ್ಛಾದಿಸಿದ ದೇಹವುಳ್ಳವನೂ, ಪ್ರಣವಮಂತ್ರವನ್ನು ಉಚ್ಚರಿಸುವವನೂ, ಮಹಾಕಾರನೂ ಮತ್ತು ಸಹಸ್ರ ಸೂರ್ಯರಿಗೆ ಸಮಾನನೂ ಆದ ಈಶ್ವರನನ್ನು ನೋಡಿದನು.

೫೪. ಈಶ್ವರನ ಪ್ರಭಾವವನ್ನು ದೇವತೆಗಳೂ, ಬ್ರಹ್ಮನೂ, ಇಂದ್ರನೂ, ಅಗ್ನಿಯೂ, ವರುಣನೂ ಮತ್ತು ಯಮನೂ ವರ್ಣಿಸಲು ಈಗಲೂ ಅಶಕ್ತರಾಗಿರುವರು. ಅಂತಹ ಆದಿದೇವನಾದ ರುದ್ರನನ್ನು ಮುಂದುಗಡೆಯಲ್ಲಿ ನೋಡಿದನು.

೫೫. ಆಗ ಆ ಶಂಕರನ ವಾಮಭಾಗದಲ್ಲಿ ಅತೀಂದ್ರಿಯವೂ, ಅನಂತರೂಪವೂ, ಶಂಖ-ಖಡ್ಗ-ಚಕ್ರಗಳಿಂದ ಕೂಡಿದ ಹಸ್ತಗಳುಳ್ಳದ್ದೂ, ಆದಿಭೂತವೂ ಮತ್ತು ಅನೇಕ ಸ್ತುತಿವಚನಗಳಿಂದ ಈಶ್ವರನನ್ನು ಸ್ತುತಿಸುತ್ತಿರುವುದೂ ಆದ ಆತ್ಮರೂಪವನು ನೋಡಿದನು.

ಕೃತಾಂಜಲಿಂ ದಕ್ಷಿಣತಃ ಸುರೇಶಂ
ಹಂಸಾಧಿರೂಢಂ ಪುರುಷಂ ದದರ್ಶ ।
ಸ್ತುವಾನಮೀಶಸ್ಯ ಪರಂ ಪ್ರಭಾವಂ
ಪಿತಾಮಹಂ ಲೋಕಗುರುಂ ದಿವಿಸ್ಥಮ್ ॥ ೫೬ ॥

ಗಣೇಶ್ವರಾನರ್ಕಸಹಸ್ರಕಲ್ಪಾನ್
ನಂದೀಶ್ವರಾದೀನಮಿತಪ್ರಭಾವಾನ್ ।
ತ್ರಿಲೋಕಭರ್ತುಃ ಪುರತೋಽನ್ವಪಶ್ಯತ್
ಕುಮಾರಮಗ್ನಿಪ್ರತಿಮಂ ಗಣೇಶಮ್ ॥ ೫೭ ॥

ಮರೀಚಿಮತ್ರಿಂ ಪುಲಹಂ ಪುಲಸ್ತ್ಯಂ
ಪ್ರಚೇತಸಂ ದಕ್ಷಮಥಾಪಿ ಕಣ್ವಮ್ ।
ಪರಾಶರಂ ತತ್ಪರತೋ ವಸಿಷ್ಠಂ
ಸ್ವಾಯಂಭುವಂ ಚಾಪಿ ಮನುಂ ದದರ್ಶ ॥ ೫೮ ॥

---

೫೬. ಮತ್ತು ಆ ಶಂಕರನ ದಕ್ಷಿಣಭಾಗದಲ್ಲಿ ಕೃತಾಂಜಲಿಯೂ ದೇವೇಶ್ವರನೂ, ಹಂಸವಾಹನಾರೂಢನೂ, ಪಿತಾಮಹನೂ, ಲೋಕಗಳಿಗೆ ಗುರುವೂ, ಆಕಾಶದಲ್ಲಿರುವವನೂ ಮತ್ತು ಈಶ್ವರನ ಅಪಾರಮಹಿಮೆಯನ್ನು ಸ್ತುತಿಸುವವನೂ ಆದ ಬ್ರಹ್ಮಪುರುಷನನ್ನು ನೋಡಿದನು.

೫೭. ಹಾಗು ಸಹಸ್ರ ಸೂರ್ಯರಂತೆ ತಪಿಸುವ, ಅಪರಿಮಿತ ಪ್ರಭಾವವುಳ್ಳ ನಂದೀಶ್ವರ ಮುಂತಾದ ಅನೇಕ ಗಣನಾಥರನ್ನೂ ಅಗ್ನಿಗೆ ಸಮಾನನಾದ ಕುಮಾರ ಸ್ವಾಮಿಯನ್ನೂ ಮತ್ತು ಗಣಪತಿಯನ್ನೂ, ತ್ರಿಲೋಕಸ್ವಾಮಿಯಾದ ಈಶ್ವರನನ್ನೂ ಮುಂಭಾಗದಲ್ಲಿ ನೋಡಿದನು.

೫೮. ಹಾಗು ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಪ್ರಚೇತ, ದಕ್ಷ, ಕಣ್ವ, ಪರಾಶರ, ವಸಿಷ್ಠ ಮತ್ತು ಸ್ವಾಯಂಭುವ ಮನು ಇವರು ಶಂಕರನ ಮುಂದೆ ಕ್ರಮವಾಗಿ ನಿಂತು ಸ್ತುತಿಸುತ್ತಿರುವುದನ್ನು ನೋಡಿದನು.

ತುಷ್ಟಾವ ಮಂತ್ರೈರಮರಪ್ರಧಾನಂ
ಬದ್ಧಾಂಜಲಿರ್ವಿಷ್ಣುರುದಾರಬುದ್ಧಿಃ ।
ಪ್ರಣಮ್ಯ ದೇವ್ಯಾ ಗಿರಿಶಂ ಸ್ವಭಕ್ತ್ಯಾ
ಸ್ವಾತ್ಮನ್ಯಥಾತ್ಮಾನಮಸೌ ವಿಚಿಂತ್ಯ ॥ ೫೯ ॥

ಕೃಷ್ಣ ಉವಾಚ :—

ನಮೋಽಸ್ತು ತೇ ಶಾಶ್ವತ ಸರ್ವಯೋಗ
ಬ್ರಹ್ಮಾದಯಸ್ತ್ವಾಮೃಷಯೋ ವದಂತಿ ।
ತಮಶ್ಚ ಸತ್ತ್ವಂ ಚ ರಜಸ್ತ್ರಯಂ ಚ
ತ್ವಾಮೇವ ಸರ್ವಂ ಪ್ರವದಂತಿ ಸಂತಃ ॥ ೬೦ ॥

ತ್ವಂ ಬ್ರಹ್ಮಾ ಹರಿರಥ ರುದ್ರ ವಿಶ್ವಕರ್ತಾ
ಸಂಹರ್ತಾ ದಿನಕರಮಂಡಲಾಧಿವಾಸಃ ।
ಪ್ರಾಣಸ್ತ್ವಂ ಹುತವಹವಾಸವಾದಿಭೇದ
ಸ್ತ್ವಾಮೇಕಂ ಶರಣಮುಪೈಮಿ ದೇವಮೀಶಮ್ ॥ ೬೧ ॥

---

೫೯. ಆಗ ದೇವತೆಗಳಲ್ಲಿ ಪ್ರಧಾನವಾದ ಈಶ್ವರನನ್ನು ಪಾರ್ವತೀದೇವಿಯೊಂದಿಗೆ ನಮಸ್ಕಾರಮಾಡಿ ಉದಾರವಾದ ಬುದ್ಧಿಯುಳ್ಳ ವಿಷ್ಣುವು ಬದ್ಧಾಂಜಲಿಯಾಗಿ ತನ್ನ ಅಂತಃಕರಣದಲ್ಲಿ ಸ್ವಾಮಿಯನ್ನು ಆತ್ಮರೂಪದಿಂದ ಭಾವಿಸಿ ಮಂತ್ರಗಳಿಂದ ಭಕ್ತಿಯಿಂದ ಸ್ತುತಿಸಿದನು.

೬೦. ಶ್ರೀ ಕೃಷ್ಣನು ಹೀಗೆ ಸ್ತುತಿಸಿದನು :—ಸ್ವಾಮಿಯೇ ! ಬ್ರಹ್ಮಾದಿ ದೇವತೆಗಳೂ, ಋಷಿಗಳೂ, ನಿನ್ನನ್ನು ಶಾಶ್ವತ ಮತ್ತು ಸರ್ವಯೋಗ ಪೂರ್ಣ, ಎಂದು ಹೇಳುತ್ತಾರೆ. ಸಾಧುಗಳು ನಿನ್ನನ್ನು ತಮಸ್ಸು-ಸತ್ತ್ವ-ರಜಸ್ಸು ಎಂಬ ಗುಣತ್ರಯರೂಪನನ್ನಾಗಿ ವರ್ಣಿಸುತ್ತಾರೆ. ಅಂತಹ ನಿನಗೆ ವಂದನೆಯು.

೬೧. ನೀನು ಬ್ರಹ್ಮದೇವನೂ, ಹರಿಯೂ, ರುದ್ರನೂ, ವಿಶ್ವದ ಸೃಷ್ಟಿಕರ್ತನೂ, ಸಂಹಾರಕರ್ತನೂ, ಸೂರ್ಯಮಂಡಲಮಧ್ಯವರ್ತಿಯೂ, ಪ್ರಾಣರೂಪನೂ, ಅಗ್ನಿ-ಇಂದ್ರ ಮುಂತಾದ ನಾನಾ ದೇವತಾರೂಪನೂ ಆಗಿದ್ದೀಯೆ. ಸರ್ವೇಶ್ವರನೂ, ದೇವತಾರೂಪಿಯೂ ಆದ ನಿನ್ನನ್ನು ಶರಣುಹೊಂದುತ್ತೇನೆ.

ಸಾಂಖ್ಯಾಸ್ತ್ವಾಮಗುಣಮಥಾಹುರೇಕರೂಪಂ
ಯೋಗಸ್ಥಂ ಸತತಮುಪಾಸತೇ ಹೃದಿಸ್ಥಮ್ ।
ವೇದಾಸ್ತ್ವಾಮಭಿದಧತೀಹ ರುದ್ರಮೀಡ್ಯಂ
ತ್ವಾಮೇಕಂ ಶರಣಮುಪೈಮಿ ದೇವಮೀಶಮ್ ॥ ೬೨

ತ್ವತ್ಪಾದೇ ಕುಸುಮಮಥಾಪಿ ಪತ್ರಮೇಕಂ
ದತ್ವಾಸೌ ಭವತಿ ವಿಮುಕ್ತವಿಶ್ವಬಂಧಃ ।
ಸರ್ವಾಘ್ನಂ ಪ್ರಣುದತಿ ಸಿದ್ಧಯೋಗಿಜುಷ್ಟಂ
ಸ್ಮೃತ್ವಾ ತೇ ಪದಯುಗಲಂ ಭವತ್ಪ್ರಸಾದಾತ್ ॥ ೬೩ ॥

ಯಸ್ಯಾಶೇಷವಿಭಾಗಹೀನಮಮಲಂ ಹೃದ್ಯಂತರಾವಸ್ಥಿತಂ
ತೇ ತ್ವಾಂ ಯೋನಿಮನಂತಮೇಕಮಚಲಂ ಸತ್ಯಂ ಪರಂ ಸರ್ವಗಮ್ ।
ಸ್ಥಾನಂ ಪ್ರಾಹುರನಾದಿಮಧ್ಯನಿಧನಂ ಯಸ್ಮಾದಿದಂ ಜಾಯತೇ ।
ನಿತ್ಯಂ ತ್ವಾಹಮುಪೈಮಿ ಸತ್ಯವಿಭವಂ ವಿಶ್ವೇಶ್ವರಂ ತಂ ಶಿವಮ್॥೬೪॥

---

೬೨. ಸಾಂಖ್ಯರು ನಿನ್ನನ್ನು ನಿರ್ಗುಣನೂ, ಚಿನ್ಮಾತ್ರೈಕರೂಪನೂ, ಯೋಗಸ್ಥನೂ ಮತ್ತು ಹೃದಯದಲ್ಲಿರುವವನೂ ಆಗಿರುವೆ, ಎಂದು ಸಂತತವಾಗಿ ಉಪಾಸನಮಾಡುತ್ತಾರೆ. ವೇದಗಳು ನಿನ್ನನ್ನು ಸ್ತುತಿಸಲು ಯೋಗ್ಯನಾದ ರುದ್ರ ದೇವನೆಂದು ವರ್ಣಿಸುತ್ತವೆ. ಅಂತಹ ಅದ್ವಿತೀಯನೂ, ಸರ್ವೇಶ್ವರನೂ, ಸ್ವಾಮಿಯೂ ಆದ ನಿನ್ನನ್ನು ಶರಣುಹೊಂದುತ್ತೇನೆ.

೬೩. ಮಾನವನು ನಿನ್ನ ಪಾದದಲ್ಲಿ ಒಂದು ಪತ್ರ, ಅಥವಾ ಪುಷ್ಪವನ್ನು ಅರ್ಪಿಸಿ ನಿನ್ನ ಪಾದಯುಗ್ಮವನ್ನು ಧ್ಯಾನಿಸಿ ನಿನ್ನ ಅನುಗ್ರಹದಿಂದ ಬಿಡಲ್ಪಟ್ಟ ಸರ್ವ ಸಂಸಾರಬಂಧವುಳ್ಳವನಾಗಿ ಸಿದ್ಧರಿಂದಲೂ, ಯೋಗಿಗಳಿಂದಲೂ, ಸೇವಿಸಲ್ಪಟ್ಟ ಸರ್ವಾದಿರೂಪವಾದ ಪರಮಪದವನ್ನು ಹೊಂದುತ್ತಾನೆ.

೬೪. ಆ ಉಪಾಸಕರು ನಿನ್ನ ರೂಪವು ಸಮಸ್ತ ವಿಭಾಗಗಳಿಂದ ಶೂನ್ಯವೂ, ನಿರ್ಮಲವೂ, ಹೃದಯಾಂತರಾಳದಲ್ಲಿ ಇರುವುದೂ, ಸರ್ವಕಾರಣವೂ, ಅನಂತವೂ, ಅದ್ವಿತೀಯವೂ, ಸ್ಥಿರವೂ ಶಾಶ್ವತವೂ, ಶ್ರೇಷ್ಠವೂ ಮತ್ತು ಸರ್ವವ್ಯಾಪಕವೂ ಆಗಿರುವುದೆಂದು ಭಾವಿಸುತ್ತಾರೆ. ನಿನ್ನ ಸ್ಥಾನವನ್ನು ಆದಿ-ಮಧ್ಯ-ಅಂತಗಳಿಂದ ಶೂನ್ಯವೆನ್ನಾಗಿಯೂ, ಹುಟ್ಟುವ ಸಮಸ್ತ ಜಗತ್ತಿಗೆ ಕಾರಣವೆನ್ನಾಗಿಯೂ ವರ್ಣಿಸುತ್ತಾರೆ. ಸತ್ಯಮಹಿಮನೂ, ವಿಶ್ವೇಶ್ವರನೂ, ಮಂಗಳಕರನೂ, ಆದ ನಿನ್ನನ್ನು ಶರಣು ಹೊಂದುತ್ತೇನೆ.

ಓಂ ನಮೋ ನೀಲಕಂಠಾಯ ತ್ರಿಣೇತ್ರಾಯ ಚ ರಂಹಸೇ ।
ಮಹಾದೇವಾಯ ತೇ ನಿತ್ಯಮೀಶಾನಾಯ ನಮೋ ನಮಃ ॥ ೬೫ ॥

ನಮಃ ಪಿನಾಕಿನೇ ತುಭ್ಯಂ ನಮೋ ಮುಂಡಾಯ ದಂಡಿನೇ ।
ನಮಸ್ತೇ ವಜ್ರಹಸ್ತಾಯ ದಿಗ್ವಸ್ತ್ರಾಯ ಕಪರ್ದಿನೇ ॥ ೬೬ ॥

ನಮೋ ಭೈರವನಾದಾಯ ಕಾಲರೂಪಾಯ ದಂಷ್ಟ್ರಿಣೇ ।
ನಾಗಯಜ್ಞೋಪವೀತಾಯ ನಮಸ್ತೇ ವಹ್ನಿರೇತಸೇ ॥ ೬೭ ॥

ನಮೋಽಸ್ತು ತೇ ಗಿರೀಶಾಯ ಸ್ವಾಹಾಕಾರಾಯ ತೇ ನಮಃ ।
ನಮೋ ಮುಕ್ತಾಟ್ಟಹಾಸಾಯ ಭೀಮಾಯ ಚ ನಮೋ ನಮಃ ॥ ೬೮ ॥

---

೬೫. ನೀಲವಾದ ಕಂಠವುಳ್ಳವನೂ, ನೇತ್ರತ್ರಯವುಳ್ಳವನೂ, ವೇಗವಂತನೂ, ಮಹಾದೇವನೂ ಮತ್ತು ಓಂಕಾರರೂಪಿಯೂ ಆದ ಮಹೇಶ್ವರನಿಗೆ ನಮಸ್ಕಾರವು.

೬೬. ಪಿನಾಕವನ್ನು ಆಯುಧವನ್ನಾಗಿ ಧರಿಸಿದ ನಿನಗೆ ನಮಸ್ಕಾರವು. ಮುಂಡಿತವಾದ ಶಿರವುಳ್ಳವನೂ, ದಂಡಧಾರಿಯೂ ಆದ ನಿನಗೆ ನಮಸ್ಕಾರವು. ಹಸ್ತದಲ್ಲಿ ವಜ್ರಾಯುಧವನ್ನು ಧರಿಸಿದವನೂ, ದಿಗಂಬರನೂ ಮತ್ತು ಕಪರ್ದವೆಂಬ ಜಟಾಜೂಟವನ್ನು ಧರಿಸಿದವನೂ ಆದ ನಿನಗೆ ನಮಸ್ಕಾರವು.

೬೭. ಭೈರವವಾದ ನಾದವುಳ್ಳವನೂ, ಮೃತ್ಯುಸ್ವರೂಪನೂ, ಕೋರೆಹಲ್ಲುಗಳುಳ್ಳವನೂ ಆದ ನಿನಗೆ ವಂದನೆಯು. ನಾಗರೂಪವಾದ ಯಜ್ಞೋಪವೀತವನ್ನು ಧರಿಸಿದವನೂ ಮತ್ತು ಅಗ್ನಿರೂಪವಾದ ತೇಜಸ್ಸುಳ್ಳವನೂ ಆದ ನಿನಗೆ ವಂದನೆಯು.

೬೮. ಕೈಲಾಸಾದ್ರಿನಾಥನಾದ ನಿನಗೆ ನಮಸ್ಕಾರವು. ಸ್ವಾಹಾಕಾರ ಸ್ವರೂಪನಾದ ನಿನಗೆ ನಮಸ್ಕಾರವು. ಅಟ್ಟಹಾಸವನ್ನು ಮಾಡುತ್ತಿರುವ ನಿನಗೆ ನಮಸ್ಕಾರವು. ಮತ್ತು ಭೀಮಮೂರ್ತಿಯಾದ ನಿನಗೆ ಮತ್ತೆ ಮತ್ತೆ ನಮಸ್ಕಾರವು.

ನಮಸ್ತೇ ಕಾಮನಾಶಾಯ ನಮಃ ಕಾಲಪ್ರಮಾಥಿನೇ।
ನಮೋ ಭೈರವವೇಷಾಯ ಹರಾಯ ಚ ನಿಷಂಗಿಣೇ ॥ ೬೯ ॥

ನಮೋಽಸ್ತು ತೇ ತ್ರ್ಯಂಬಕಾಯ ನಮಸ್ತೇ ಕೃತ್ತಿವಾಸಸೇ ।
ನಮೋಽಂಬಿಕಾಧಿಪತಯೇ ಪಶೂನಾಂ ಪತಯೇ ನಮಃ ॥ ೭೦ ॥

ನಮಸ್ತೇ ವ್ಯೋಮರೂಪಾಯ ವ್ಯೋಮಾಧಿಪತಯೇ ನಮಃ ।
ನರನಾರೀಶರೀರಾಯ ಸಾಂಖ್ಯಯೋಗಪ್ರವರ್ತಿನೇ ॥ ೭೧ ॥

ನಮೋ ಭೈರವನಾಥಾಯ ದೇವಾನುಗತಲಿಂಗಿನೇ ।
ಕುಮಾರಗುರವೇ ತುಭ್ಯಂ ದೇವದೇವಾಯ ತೇ ನಮಃ ॥ ೭೨ ॥

---

೬೯. ಕಾಮವನ್ನು ದಹಿಸಿರುವ ನಿನಗೆ ನಮಸ್ಕಾರವು. ಮೃತ್ಯುವನ್ನು ನಿಗ್ರಹಿಸಿದ ನಿನಗೆ ನಮಸ್ಕಾರವು. ಭೈರವಮೂರ್ತಿಯ ವೇಷವುಳ್ಳ ನಿನಗೆ ನಮಸ್ಕಾರವು. ಮತ್ತು ಬತ್ತಳಿಕೆಗಳನ್ನು ಧರಿಸಿರುವ ಹರಮೂರ್ತಿಯಾದ ನಿನಗೆ ನಮಸ್ಕಾರವು.

೭೦. ನೇತ್ರತ್ರಯದಿಂದ ಶೋಭಿತನಾದ ನಿನಗೆ ನಮಸ್ಕಾರವು. ಗಜ ಚರ್ಮವನ್ನು ವಸ್ತ್ರವನ್ನಾಗಿ ಧರಿಸಿರುವ ನಿನಗೆ ನಮಸ್ಕಾರವು. ಜಗನ್ಮಾತೆಯಾದ ಪಾರ್ವತಿಯ ರಮಣನಾದ ನಿನಗೆ ನಮಸ್ಕಾರವು. ಮತ್ತು ಬ್ರಹ್ಮಾದಿ ಪಶುಗಳ ಪಾಲಕನಾದ ನಿನಗೆ ನಮಸ್ಕಾರವು.

೭೧. ಆಕಾಶಸ್ವರೂಪನೂ, ಆಕಾಶಕ್ಕೆ ಅಧಿಪತಿಯೂ, ಪುರುಷ ಮತ್ತು ನಾರಿಯರ ವಿಗ್ರಹವನ್ನು ಧರಿಸಿದವನೂ, ಮತ್ತು ಸಾಂಖ್ಯ-ಯೋಗಸಿದ್ಧಾಂತಗಳನ್ನು ಪ್ರಕಾಶಪಡಿಸಿದವನೂ ಆದ ನಿನಗೆ ವಂದನೆಯು.

೭೨. ಭೈರವಮೂರ್ತಿಯ ನಾಥನೂ, ದೇವತೆಗಳಿಂದ ಅನುಸರಿಸಲ್ಪಡುವ ಲಿಂಗಮೂರ್ತಿಯುಳ್ಳವನೂ, ಕುಮಾರಸ್ವಾಮಿಯ ಗುರುವೂ ಮತ್ತು ದೇವದೇವನೂ ಆದ ನಿನಗೆ ನಮಸ್ಕಾರವು.

ನಮೋ ಯಜ್ಞಾಧಿಪತಯೇ ನಮಸ್ತೇ ಬ್ರಹ್ಮಚಾರಿಣೇ ।
ಮೃಗವ್ಯಾಧಾಯ ಮಹತೇ ಬ್ರಹ್ಮಾಧಿಪತಯೇ ನಮಃ ॥ ೭೩ ॥

ನಮೋ ಹಂಸಾಯ ವಿಶ್ವಾಯ ಮೋಹನಾಯ ನಮೋ ನಮಃ ।
ಯೋಗಿನೇ ಯೋಗಗಮ್ಯಾಯ ಯೋಗಮಾಯಾಯ ತೇ ನಮಃ ॥೭೪॥

ನಮಸ್ತೇ ಪ್ರಾಣಪಾಲಾಯ ಘಂಟಾನಾದಪ್ರಿಯಾಯ ಚ ।
ಕಪಾಲಿನೇ ನಮಸ್ತುಭ್ಯಂ ಜ್ಯೋತಿಷಾಂ ಪತಯೇ ನಮಃ ॥ ೭೫ ॥

ನಮೋ ನಮೋಽಸ್ತು ತೇ ತುಭ್ಯಂ ಭೂಯ ಏವ ನಮೋ ನಮಃ ।
ಮಹ್ಯಂ ಸರ್ವಾತ್ಮನಾ ಕಾಮಾನ್ ಪ್ರಯಚ್ಛ ಪರಮೇಶ್ವರ ॥ ೭೬ ॥

---

೭೩. ಯಜ್ಞಕರ್ಮಗಳಿಗೆ ಅಧಿಪತಿಯಾದ ನಿನಗೆ ನಮಸ್ಕಾರವು. ಬ್ರಹ್ಮಚರ್ಯಾಶ್ರಮವಾಸಿಯಾದ ನಿನಗೆ ನಮಸ್ಕಾರವು. ಮೃಗವ್ಯಾಧರೂಪಿಯೂ, ಮಹಾಕಾರನೂ, ಬ್ರಹ್ಮನ ಅಧಿಪತಿಯೂ ಆದ ನಿನಗೆ ನಮಸ್ಕಾರವು.

೭೪. ಪರಮಾತ್ಮರೂಪನೂ, ವಿಶ್ವಾಕಾರನೂ, ಸರ್ವಮೋಹಕನೂ ಆದ ನಿನಗೆ ನಮಸ್ಕಾರವು. ಯೋಗಿಸ್ವರೂಪನೂ, ಯೋಗಿಗಳಿಂದ ಗಮ್ಯನೂ, ಮತ್ತು ಯೋಗಮಾಯೆಯ ಅಧಿಪತಿಯೂ ಆದ ನಿನಗೆ ನಮಸ್ಕಾರವು.

೭೫. ಪ್ರಾಣಗಳನ್ನು ರಕ್ಷಿಸುವವನೂ, ಘಂಟಾನಾದದಲ್ಲಿ ಪ್ರೀತಿಯುಳ್ಳವನೂ, ಕಪಾಲಧಾರಿಯೂ ಮತ್ತು ಜ್ಯೋತಿರ್ಮಂಡಲದ ಅಧಿಪತಿಯೂ ಆದ ನಿನಗೆ ನಮಸ್ಕಾರವು.

೭೬. ಮತ್ತು ಸ್ವಾಮಿಯೇ! ನಿನಗೆ ನಮಸ್ಕಾರವು. ನಿನ್ನನ್ನು ಮತ್ತೆ ಮತ್ತೆ ವಂದಿಸುವೆನು. ಪರಮೇಶ್ವರನೇ ! ನನಗೆ ಇಷ್ಟವಾದ ಸರ್ವ ಕಾಮಗಳನ್ನು ಅನುಗ್ರಹಿಸು.

**ಸೂತ ಉವಾಚ :—**

ಏವಂ ಹಿ ಭಕ್ತ್ಯಾ ದೇವೇಶಮಭಿಷ್ಟೂಯ ಸ ಮಾಧವಃ ।
ಪಪಾತ ಪಾದಯೋರ್ವಿಪ್ರಾ ದೇವದೇವ್ಯೋಃ ಸ ದಂಡವತ್ ॥ ೭೭ ॥

ಉತ್ಥಾಪ್ಯ ಭಗವಾನ್ ಸೋಮಃ ಕೃಷ್ಣಂ ಕೇಶಿನಿಷೂದನಮ್ ।
ಬಭಾಷೇ ಮಧುರಂ ವಾಕ್ಯಂ ಮೇಘಗಂಭೀರನಿಸ್ವನಃ ॥ ೭೮ ॥

ಕಿಮರ್ಥಂ ಪುಂಡರೀಕಾಕ್ಷ ತಪ್ಯತೇ ಭವತಾ ತಪಃ ।
ತ್ವಮೇವ ದಾತಾ ಸರ್ವೇಷಾಂ ಕಾಮಾನಾಂ ಕರ್ಮಣಾಮಿಹ ॥ ೭೯ ॥

ತ್ವಂ ಹಿ ಸಾ ಪರಮಾ ಮೂರ್ತಿರ್ಮಮ ನಾರಾಯಣಾಹ್ವಯಾ ।
ನ ವಿನಾ ತ್ವಾಂ ಜಗತ್ಸರ್ವಂ ವಿದ್ಯತೇ ಪುರುಷೋತ್ತಮ ॥ ೮೦ ॥

---

೭೭. ವಿಪ್ರರೇ! ಸೂತಮುನಿಯು ಹೀಗೆಂದು ಹೇಳಿದನು:—ಆ ಶ್ರೀಕೃಷ್ಣನು ಭಕ್ತಿಯಿಂದ ಪರಮೇಶ್ವರನನ್ನು ಹೀಗೆ ಸ್ತುತಿಸಿ ಪಾರ್ವತೀ ಪರಮೇಶ್ವರರ ಪಾದಗಳಲ್ಲಿ ದಂಡಾಕಾರವಾಗಿ ನಮಿಸಿದನು.

೭೮. ಆಗ ಪೂಜ್ಯನೂ, ಪಾರ್ವತೀಸಹಿತನೂ ಆದ ಶಂಕರನು ಕೇಶಿ ದಾನವನನ್ನು ಕೊಂದ ಕೃಷ್ಣನನ್ನು ಮೇಲಕ್ಕೆ ಎಬ್ಬಿಸಿ ಮೇಘದಂತೆ ಗಂಭೀರವಾದ ಧ್ವನಿಯುಳ್ಳವನಾಗಿ ಮಧುರವಾದ ವಚನವನ್ನು ಹೇಳಿದನು.

೭೯. ಕಮಲದಂತೆ ಸುಂದರವಾದ ನೇತ್ರವುಳ್ಳವನೇ! ನಿನ್ನಿಂದ ಏಕೆ ತಪಸ್ಸು ತಪಿಸಲ್ಪಡುತ್ತದೆ? ಇಹಲೋಕದಲ್ಲಿ ಸಮಸ್ತ ಕಾಮ್ಯಕರ್ಮಗಳಿಗೆ ನೀನು ಫಲದಾಯಕನಾಗಿದ್ದೀಯೆ.

೮೦. ಪುರುಷೋತ್ತಮನೇ! ನೀನು ನಾರಾಯಣನೆಂಬ ಹೆಸರುಳ್ಳ ನನ್ನ ಉತ್ತಮಮೂರ್ತಿಯಾಗಿದ್ದೀಯೇ; ನಿನ್ನನ್ನು ಬಿಟ್ಟು ಈ ಸಮಸ್ತ ಜಗತ್ತು ಉಳಿಯಲಾರದು.

ವೇತ್ಥ ನಾರಾಯಣಾನಂತಮಾತ್ಮಾನಂ ಪರಮೇಶ್ವರಮ್ ।
ಮಹಾದೇವಂ ಮಹಾಯೋಗಂ ಸ್ವೇನ ಯೋಗೇನ ಕೇಶವ ॥ ೮೧ ॥

ಶ್ರುತ್ವಾ ತದ್ವಚನಂ ಕೃಷ್ಣಃ ಪ್ರಹಸನ್ ವೈ ವೃಷಧ್ವಜಮ್ ।
ಉವಾಚಾನ್ವೀಕ್ಷ್ಯ ವಿಶ್ವೇಶಂ ದೇವೀಂ ಚ ಹಿಮಶೈಲಜಾಮ್ ॥ ೮೨ ॥

ಜ್ಞಾತಂ ಹಿ ಭವತಾ ಸರ್ವಂ ಸ್ವೇನ ಯೋಗೆನ ಶಂಕರ ।
ಇಚ್ಛಾಮ್ಯಾತ್ಮಸಮಂ ಪುತ್ರಂ ತ್ವದ್ಭಕ್ತಂ ದೇಹಿ ಶಂಕರ ॥ ೮೩ ॥

ತಥಾಸ್ತ್ವಿತ್ಯಾಹ ವಿಶ್ವಾತ್ಮಾ ಪ್ರಹೃಷ್ಟಮನಸಾ ಹರಃ ।
ದೇವೀಮಾಲೋಕ್ಯ ಗಿರಿಜಾಂ ಕೇಶವಂ ಪರಿಷಸ್ವಜೇ ॥ ೮೪ ॥

---

೮೧. ಶ್ರೀ ಕೃಷ್ಣನೇ! ನಾರಾಯಣನೇ! ನಿನ್ನ ಆತ್ಮನನ್ನು ಅಂತಶೂನ್ಯನೂ, ಪರಮೇಶ್ವರನೂ, ಮಹಾದೇವನೂ ಮತ್ತು ಯೋಗೇಶ್ವರನೂ ಆದ ಶಂಕರನೆಂದು ಯೋಗಬಲದಿಂದ ತಿಳಿದಿದ್ದೀಯೆ.

೮೨. ಕೃಷ್ಣನು ಆ ಮಾತನ್ನು ಕೇಳಿ ನಸುನಗುತ್ತಾ ವೃಷಭಧ್ವಜವನ್ನು ಧರಿಸಿದ ಸರ್ವೇಶ್ವರನಾದ ಶಂಕರನನ್ನೂ ಹಿಮಾಚಲಪುತ್ರಿಯಾದ ಗೌರಿಯನ್ನೂ ನೋಡುತ್ತ ಮಾತನಾಡಿದನು.

೮೩. ಶಂಕರನೇ ! ನೀನು ಯೋಗಮಹಿಮೆಯಿಂದ ಸರ್ವ ವೃತ್ತಾಂತವನ್ನು ತಿಳಿದಿದ್ದೀಯೆ. ಶಂಕರನೇ ! ನನಗೆ ಸಮಾನನೂ ನಿನ್ನಲ್ಲಿ ಭಕ್ತನೂ ಆದ ಪುತ್ರನನ್ನು ಬಯಸುವೆನು. ಅಂತಹ ಪುತ್ರನನ್ನು ಕರುಣಿಸು.

೮೪. ವಿಶ್ವರೂಪಿಯಾದ ಈಶ್ವರನು ಸಂತುಷ್ಟವಾದ ಮಾನಸದಿಂದ ಹಾಗೆ ಆಗಲೆಂದು ಅಂಗೀಕರಿಸಿದನು. ಮತ್ತು ಹಿಮವತ್ಪುತ್ರಿಯಾದ ದೇವಿಯನ್ನು ನೋಡಿ ಕೃಷ್ಣನನ್ನು ಆಲಿಂಗಿಸಿಕೊಂಡನು.

ತತಃ ಸಾ ಜಗತಾಂ ಮಾತಾ ಶಂಕರಾರ್ಧಶರೀರಿಣೀ ।
ವ್ಯಾಜಹಾರ ಹೃಷೀಕೇಶಂ ದೇವೀ ಹಿಮಗಿರೀಂದ್ರಜಾ ॥ ೮೫ ॥

ಅಹಂ ಜಾನೇ ತವಾನಂತ ನಿಶ್ಚಲಾಂ ಸರ್ವದಾಚ್ಯುತ ।
ಅನನ್ಯಾಮೀಶ್ವರೇ ಭಕ್ತಿಮಾತ್ಮನ್ಯಪಿ ಚ ಕೇಶವ ॥ ೮೬ ॥

ತ್ವಂ ಹಿ ನಾರಾಯಣಃ ಸಾಕ್ಷಾತ್ ಸರ್ವಾತ್ಮಾ ಪುರುಷೋತ್ತಮಃ ।
ಪ್ರಾರ್ಥಿತೋ ದೈವತೈಃ ಪೂರ್ವಂ ಸಂಜಾತೋ ದೇವಕೀಸುತಃ॥ ೮೭ ॥

ಪಶ್ಯ ತ್ವಮಾತ್ಮನಾತ್ಮಾನಮಾತ್ಮಾನಂ ಮಮ ಸಂಪ್ರತಿ ।
ನಾವಯೋರ್ವಿದ್ಯತೇ ಭೇದ ಏಕಂ ಪಶ್ಯಂತಿ ಸೂರಯಃ ॥ ೮೮ ॥

---

೮೫. ಅನಂತರದಲ್ಲಿ ಜಗನ್ಮಾತೆಯೂ, ಈಶ್ವರನ ಅರ್ಧಾಂಗಿಯೂ ಮತ್ತು ಪರ್ವತರಾಜನಾದ ಹಿಮವಂತನ ಪುತ್ರಿಯೂ ಆದ ಗೌರಿಯು ಕೃಷ್ಣನಿಗೆ ಹೀಗೆಂದು ಹೇಳಿದಳು.

೮೬. ಅನಂತನೇ! ಅಚ್ಯುತನೇ! ಮತ್ತು ಕೇಶವನೇ! ನಿನಗೆ ಮಹೇಶ್ವರನಲ್ಲಿಯೂ ನನ್ನಲ್ಲಿಯೂ ಸರ್ವಕಾಲಗಳಲ್ಲಿಯೂ ಅನ್ಯಸಾಧಾರಣವಲ್ಲದ ಭಕ್ತಿಯು ಸ್ಥಿರವಾಗಿರುವುದೆಂಬುದನ್ನು ನಾನು ತಿಳಿದಿದ್ದೇನೆ.

೮೭. ನೀನು ನಾರಾಯಣನೂ, ಪ್ರತ್ಯಕ್ಷವಾದ ವಿಶ್ವರೂಪನೂ ಮತ್ತು ಪುರುಷೋತ್ತಮನೂ ಆಗಿದ್ದೀಯೆ ; ಇಂತಹ ನೀನು ಪೂರ್ವದಲ್ಲಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ದೇವಕೀದೇವಿಯಲ್ಲಿ ಪುತ್ರನಾಗಿ ಜನಿಸಿದ್ದೀಯೆ.

೮೮. ಕೃಷ್ಣನೇ ! ನೀನು ಆತ್ಮದಿಂದ ಆತ್ಮಸ್ವರೂಪವನ್ನು ನೋಡು. ನಿನ್ನ ಆತ್ಮವೂ ನನ್ನ ಆತ್ಮವೂ ಅದ್ವಿತೀಯವಾದ ಪರಮತತ್ತ್ವವು. ನಮ್ಮಿಬ್ಬರಲ್ಲಿ ಭೇದವು ಇರುವುದಿಲ್ಲ. ಜ್ಞಾನಿಗಳು ನಮ್ಮಿಬ್ಬರ ಐಕ್ಯವನ್ನು ಸಾಕ್ಷಾತ್ಕರಿಸುತ್ತಾರೆ.

ಇಮಾನಿಹ ವರಾನಿಷ್ಟಾನ್ಮತ್ತೋ ಗೃಹ್ಣೀಷ್ವ ಕೇಶವ ।
ಸರ್ವಜ್ಞತ್ವಂ ತಥೈಶ್ವರ್ಯಂ ಜ್ಞಾನಂ ತತ್ಪಾರಮೇಶ್ವರಮ್ ॥ ೮೯ ॥

ಈಶ್ವರೇ ನಿಶ್ಚಲಾಂ ಭಕ್ತಿಮಾತ್ಮನ್ಯಪಿ ಪರಂ ವರಮ್ ।
ಏವಮುಕ್ತಸ್ತಯಾ ಕೃಷ್ಣೋ ಮಹಾದೇವ್ಯಾ ಜನಾರ್ದನಃ ॥ ೯೦ ॥

ಆದೇಶಂ ಶಿರಸಾ ಗೃಹ್ಯ ದೇವ್ಯೋಽಪ್ಯಾಹ ತಥೇಶ್ವರಮ್ ॥ ೯೧ ॥

ಪ್ರಗೃಹ್ಯ ಕೃಷ್ಣಂ ಭಗವಾನಥೇಶಃ
ಕರೇಣ ದೇವ್ಯಾ ಸಹ ದೇವದೇವಃ ।
ಸಂಪೂಜ್ಯಮಾನೋ ಮುನಿಭಿಃ ಸುರೇಶೈ-
ರ್ಜಗಾಮ ಕೈಲಾಸಗಿರಿಂ ಗಿರೀಶಃ ॥ ೯೨ ॥

ಇತಿ ಶ್ರೀ ಕೂರ್ಮಪುರಾಣೇ ಪಂಚವಿಂಶೋಽಧ್ಯಾಯಃ.

---

೮೯. ಕೇಶವನೇ ! ಸರ್ವಜ್ಞತ್ವ, ನಿರಂಕುಶವಾದ ಐಶ್ವರ್ಯ ಮತು ಪರಮೇಶ್ವರನ ತತ್ತ್ವಜ್ಞಾನ ಮುಂತಾದ ಸಮಸ್ತ ಇಷ್ಟವರಗಳನ್ನು ನನ್ನ ಅನುಗ್ರಹದಿಂದ ಸ್ವೀಕರಿಸು.

೯೦. ಹಾಗು ಈಶ್ವರನಲ್ಲಿಯೂ ತನ್ನಲ್ಲಿಯೂ ನಿಶ್ಚಲವಾದ ಭಕ್ತಿಯೋಗವೆಂಬ ಉತ್ತಮವರವನ್ನು ಸ್ವೀಕರಿಸು. ಹೀಗೆಂದು ಜನಾರ್ದನಮೂರ್ತಿಯಾದ ಕೃಷ್ಣನು ಮಹಾದೇವಿಯಾದ ಪಾರ್ವತಿಯಿಂದ ಹೇಳಲ್ಪಟ್ಟನು.

೯೧. ಹಾಗೂ ಶ್ರೀ ಕೃಷ್ಣಪರಮಾತ್ಮನು ಮಹಾದೇವಿಯ ಆದೇಶರೂಪವಾದ ವರಗಳನ್ನು ತಲೆ ಬಾಗಿ ವಿನಯದಿಂದ ಸ್ವೀಕರಿಸಿದನಂತರ ಮಹೇಶ್ವರದೇವನು ಶ್ರೀ ಕೃಷ್ಣನನ್ನು ಕುರಿತು ಅನುಗ್ರಹ ವಚನವನ್ನು ಹೇಳಿದನು.

೯೨. ತರುವಾಯ ಪೂಜ್ಯನೂ. ಈಶ್ವರನೂ, ದೇವೋತ್ತಮನೂ ಮತ್ತು ಕೈಲಾಸಾದ್ರಿನಾಥನೂ ಆದ ಶಂಕರನು ಪಾರ್ವತೀದೇವಿಯೊಡನೆ ಶ್ರೀ ಕೃಷ್ಣನನ್ನು ಕೈಯಲ್ಲಿ ಹಿಡಿದು ಮುನಿಗಳಿಂದಲೂ ದೇವೋತ್ತಮರಿಂದಲೂ ಪೂಜಿಸಲ್ಪಡುವವನಾಗಿ ಕೈಲಾಸಪರ್ವತಕ್ಕೆ ಹೊರಟುಹೋದನು.

( ಕೂರ್ಮಪುರಾಣದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು )

ಶ್ರೀಃ

# ಕೂರ್ಮ ಪುರಾಣಂ

---

## ಷಟ್ತ್ರಿಂಶೋಽಧ್ಯಾಯಃ.

**ಸೂತ ಉವಾಚ :-**

**ಪ್ರವಿಶ್ಯ ಮೇರುಶಿಖರಂ ಕೈಲಾಸಂ ಕನಕಪ್ರಭಮ್ ।**
**ರರಾಮ ಭಗವಾನ್ ಸೋಮಃ ಕೇಶವೇನ ಮಹೇಶ್ವರಃ ॥ ೧ ॥**

**ಅಪಶ್ಯಂಸ್ತೇ ಮಹಾತ್ಮಾನಂ ಕೈಲಾಸಗಿರಿವಾಸಿನಃ ।**
**ಪೂಜಯಾಂಚಕ್ರಿರೇ ಕೃಷ್ಣಂ ದೇವದೇವಮಿವಾಚ್ಯುತಮ್ ॥ ೨ ॥**

---

## ಇಪ್ಪತ್ತಾರನೆಯ ಅಧ್ಯಾಯವು.

೧. ಸೂತಮುನಿಯು ಹೀಗೆಂದು ನುಡಿದನು :—ಭಗವಂತನೂ, ಪಾರ್ವತೀ ರಮಣನೂ ಆದ ಮಹೇಶ್ವರನು ಕೃಷ್ಣನೊಡನೆ ಮೇರುಗಿರಿಯ ಶಿಖರದಲ್ಲಿರುವ ಸುವರ್ಣದಂತೆ ಕಾಂತಿಯುಳ್ಳ ಕೈಲಾಸವನ್ನು ಪ್ರವೇಶಿಸಿ ರಮಿಸಿದನು.

೨. ಆಗ ಕೈಲಾಸಗಿರಿಯಲ್ಲಿ ವಾಸಮಾಡುವ ಎಲ್ಲ ಪ್ರಜೆಗಳೂ ದೇವದೇವನಾದ ನಾರಾಯಣನಂತಿರುವ ಶ್ರೀ ಕೃಷ್ಣನನ್ನು ನೋಡಿ ಭಕ್ತಿಯಿಂದ ಪೂಜಿಸಿದರು.

ಚತುರ್ಬಾಹುಮುದಾರಾಂಗಂ ಕಾಲಮೇಘಸಮಪ್ರಭಮ್ ।
ಕಿರೀಟಿನಂ ಶಾರ್ಙ್ಗಪಾಣಿಂ ಶ್ರೀವತ್ಸಾಂಕಿತವಕ್ಷಸಮ್ ॥ ೩ ॥

ದೀರ್ಘಬಾಹುಂ ವಿಶಾಲಾಕ್ಷಂ ಪೀತವಾಸಸಮಚ್ಯುತಮ್ ।
ದಧಾನಮುರಸಾ ಮಾಲಾಂ ವೈಜಯಂತೀಮನುತ್ತಮಾಮ್ ॥ ೪ ॥

ಭ್ರಾಜಮಾನಂ ಶ್ರಿಯಾ ದೇವ್ಯಾ ಯುವಾನಮತಿಕೋಮಲಮ್ ।
ಪದ್ಮಾಂಘ್ರಿಂ ಪದ್ಮನಯನಂ ಸಸ್ಮಿತಂ ಸದ್ಗತಿಪ್ರದಮ್ ॥ ೫ ॥

ಕದಾಚಿತ್ತತ್ರ ಲೀಲಾರ್ಥಂ ದೇವಕೀನಂದವರ್ಧನಃ ।
ಭ್ರಾಜಮಾನಃ ಶ್ರಿಯಾ ಕೃಷ್ಣಶ್ಚಚಾರ ಗಿರಿಕಂದರಮ್ ॥ ೬ ॥

---

೩. ಶ್ರೀಕೃಷ್ಣನು ನಾಲ್ಕು ಬಾಹುಗಳಿಂದಲೂ, ಉದಾರವಾದ ದೇಹದಿಂದಲೂ ಕಾಲಮೇಘಕ್ಕೆ ಸಮಾನವಾದ ಕಾಂತಿಯಿಂದಲೂ, ಕಿರೀಟದಿಂದಲೂ, ಹಸ್ತದಲ್ಲಿ ಧರಿಸಿರುವ ಶಾರ್ಙ್ಗಚಾಪದಿಂದಲೂ ಮತ್ತು ಹೃದಯದಲ್ಲಿ ಅಂಕಿತವಾದ ಶ್ರೀವತ್ಸ ಎಂಬ ಲಾಂಛನದಿಂದಲೂ ಪ್ರಕಾಶಿಸುತ್ತಿದ್ದನು.

೪. ಮತ್ತು ದೀರ್ಘವಾದ ಬಾಹುವುಳ್ಳವನೂ, ವಿಶಾಲವಾದ ನೇತ್ರವುಳ್ಳವನೂ, ಪೀತಾಂಬರವನ್ನು ಧರಿಸಿದವನೂ, ಅಚ್ಯುತನೂ, ಹೃದಯದಲ್ಲಿ ಉತ್ತಮವಾದ ವೈಜಯಂತೀಮಾಲೆಯನ್ನು ಧರಿಸಿದವನೂ ಆಗಿದ್ದನು.

೫. ಮತ್ತು ಕಾಂತಿಯಿಂದ ರಾಜಿಸುತ್ತಿರುವವನೂ ತಾರುಣ್ಯಪೂರ್ಣನೂ, ಅತ್ಯಂತ ಕೋಮಲನೂ, ಪದ್ಮದಂತೆ ಸುಂದರವಾದ ಪಾದ ಮತ್ತು ನೇತ್ರಗಳಿಂದ ಶೋಭಿತನೂ, ಮಂದಹಾಸದಿಂದ ಕೂಡಿದವನೂ ಮತ್ತು ಸದ್ಗತಿಯನ್ನು ಕೊಡುವವನೂ, ಆಗಿದ್ದನು.

೬. ಕಾಂತಿಯಿಂದ ಪ್ರಕಾಶಿಸುವ, ದೇವಕೀದೇವಿಯ ಆನಂದವನ್ನು ಹೆಚ್ಚಿಸುವ, ಶ್ರೀ ಕೃಷ್ಣನು ಒಂದು ಸಮಯದಲ್ಲಿ ಲೀಲಾ ವಿನೋದಕ್ಕೋಸ್ಕರ ಅಲ್ಲಲ್ಲಿ ಗಿರಿ-ಗುಹೆಗಳಲ್ಲಿ ಸಂಚರಿಸಿದನು.

ಗಂಧರ್ವಾಪ್ಸರಸಾಂ ಮುಖ್ಯಾ ನಾಗಕನ್ಯಾಶ್ಚ ಕೃತ್ಸ್ನಶಃ ।
ಸಿದ್ಧಾ ಯಕ್ಷಾಶ್ಚ ಗಂಧರ್ವಾ ದೇವಾಸ್ತಂ ಚ ಜಗನ್ಮಯಃ ॥ ೭ ॥

ದೃಷ್ಟ್ವಾಶ್ಚರ್ಯಂ ಪರಂ ಗತ್ವಾ ಹರ್ಷಾದುತ್ಫುಲ್ಲಲೋಚನಾಃ ।
ಮುಮುಚುಃ ಪುಷ್ಪವರ್ಷಾಣಿ ತಸ್ಯ ಮೂರ್ಧ್ನಿ ಮಹಾತ್ಮನಃ ॥ ೮ ॥

ಗಂಧರ್ವಕನ್ಯಕಾ ದಿವ್ಯಾಸ್ತದ್ವದಪ್ಸರಸೋ ವರಾಃ ।
ದೃಷ್ಟ್ವಾ ಚಕಮಿರೇ ಕೃಷ್ಣಂ ಸುಸ್ತುತಂ ಶುಚಿಭೂಷಣಾಃ ॥ ೯ ॥

ಕಾಶ್ಚಿದ್ಗಾಯಂತಿ ವಿವಿಧಂ ಗಾನಂ ಗೀತವಿಶಾರದಾಃ ।
ಸಂಪ್ರೇಕ್ಷ್ಯ ದೇವಕೀಸೂನುಂ ಸುಂದರಂ ಕಾಮಮೋಹಿತಾಃ ॥ ೧೦ ॥

ಕಾಶ್ಚಿದ್ವಿಲಾಸಬಹುಲಾ ನೃತ್ಯಂತಿ ಸ್ಮ ತದಗ್ರತಃ ।
ಸಂಪ್ರೇಕ್ಷ್ಯ ಸಸ್ಮಿತಂ ಕಾಶ್ಚಿತ್ಪಪುಸ್ತದ್ವದನಾಮೃತಮ್ ॥ ೧೧ ॥

---

೭. ಅಲ್ಲಿ ಮುಖ್ಯರಾದ ಗಂಧರ್ವ ಮತ್ತು ಅಪ್ಸರಾಂಗನೆಯರೂ, ಸಮಸ್ತ ನಾಗಕನ್ಯೆಯರೂ, ಸಿದ್ಧರೂ, ಯಕ್ಷರೂ, ಗಂಧರ್ವರೂ ಮತ್ತು ದೇವತೆಗಳೂ ಆ ಜಗನ್ಮೂರ್ತಿಯಾದ ಕೃಷ್ಣನನ್ನು ಕಂಡರು.

೮. ಆಗ ಪರಮಾಶ್ಚರ್ಯವನ್ನು ಹೊಂದಿ ಸಂತೋಷದಿಂದ ವಿಕಾಸಗೊಂಡ ನೇತ್ರವುಳ್ಳವರಾಗಿ ಮಹಾತ್ಮನಾದ ಕೃಷ್ಣನ ಶಿರದಲ್ಲಿ ಪುಷ್ಪವೃಷ್ಟಿಯನ್ನು ಸುರಿಸಿದರು.

೯. ನಿರ್ಮಲವಾದ ಭೂಷಣವುಳ್ಳ, ದಿವ್ಯರಾದ ಗಂಧರ್ವ ಕನ್ಯೆಯರೂ ಉತ್ತಮರಾದ ಅಪ್ಸರಾಂಗನೆಯರೂ ಪ್ರಶಸ್ತನಾದ ಕೃಷ್ಣನನ್ನು ನೋಡಿ ಅವನನ್ನು ಕಾಮಿಸಿದರು.

೧೦. ಕಾಮವಿಕಾರದಿಂದ ಮೋಹಗೊಂಡಿರುವ, ಸಂಗೀತದಲ್ಲಿ ವಿಶಾರದರಾದ ಕೆಲವರು ಸುಂದರನಾದ ದೇವಕೀ ಪುತ್ರನನ್ನು ನೋಡಿ ಅನೇಕ ವಿಧವಾಗಿ ಗಾನವನ್ನು ಮಾಡಿದರು.

೧೧. ಮತ್ತೆ ಕೆಲವರು ಅಧಿಕವಾದ ಲೀಲಾವಿಲಾಸಗಳನ್ನು ತೋರಿಸುತ್ತಾ ಅವನ ಎದುರಿಗೆ ನರ್ತನಮಾಡಿದರು. ಇನ್ನು ಕೆಲವರು ಮಂದಹಾಸದಿಂದ ಕೂಡಿ ಕೃಷ್ಣನನ್ನು ನೋಡುತ್ತಾ ಅವನ ಮುಖಮಾಧುರ್ಯವನ್ನು ಪಾನಮಾಡಿದರು.

ಕಾಶ್ಚಿದ್ಭೂಷಣ ವರ್ಯಾಣಿ ಸ್ವಾಂಗಾದಾದಾಯ ಸಾದರಮ್ ।
ಭೂಷಯಾಂಚಕ್ರಿರೇ ಕೃಷ್ಣಂ ಕನ್ಯಾ ಲೋಕವಿಭೂಷಣಮ್ ॥ ೧೨ ॥

ಕಾಶ್ಚಿದ್ಭೂಷಣವರ್ಯಾಣಿ ಸಮಾದಾಯ ತದಂಗತಃ ।
ಸ್ವಾತ್ಮಾನಂ ಭೂಷಯಾಮಾಸುಃ ಸ್ವಾತ್ಮಕೈರಪಿ ಮಾಧವಮ್ ॥೧೩ ॥

ಕಾಚಿದಾಗತ್ಯ ಕೃಷ್ಣಸ್ಯ ಸಮೀಪಂ ಕಾಮಮೋಹಿತಾ ।
ಚುಚುಂಬ ವದನಾಂಭೋಜಂ ಹರೇರ್ಮುಗ್ಧಮೃಗೇಕ್ಷಣಾ ॥ ೧೪ ॥

ಪ್ರಗೃಹ್ಯ ಕಾಚಿದ್ಗೋವಿಂದಂ ಕರೇಣ ಭವನಂ ಸ್ವಕಮ್ ।
ಪ್ರಾಪಯಾಮಾಸ ಲೋಕಾದಿಂ ಮಾಯಯಾ ತಸ್ಯ ಮೋಹಿತಾ ॥ ೧೫ ॥

---

೧೨. ಮತ್ತೆ ಕೆಲವು ಕನ್ಯೆಯರು ತಮ್ಮ ದೇಹದಿಂದ ಶ್ರೇಷ್ಠವಾದ ಅಲಂಕಾರಗಳನ್ನು ತೆಗೆದು ಲೋಕಕ್ಕೆ ಅಲಂಕಾರಪ್ರಾಯನಾದ ಕೃಷ್ಣನನ್ನು ಆದರಪೂರ್ವಕವಾಗಿ ಅಲಂಕರಿಸಿದರು.

೧೩. ಇನ್ನು ಕೆಲವರು ಶ್ರೀ ಕೃಷ್ಣನ ದೇಹದಿಂದ ಉತ್ತಮಾಭರಣಗಳನ್ನು ತೆಗೆದು ತಮ್ಮ ದೇಹಗಳನ್ನು ಅಲಂಕರಿಸಿ ತಮ್ಮ ಒಡವೆಗಳಿಂದ ಕೃಷ್ಣನನ್ನು ಭೂಷಣ ಮಾಡಿದರು.

೧೪. ಸುಂದರವಾದ ಜಿಂಕೆಯಂತೆ ದೃಷ್ಟಿಯುಳ್ಳ ಒಬ್ಬಳು ತರುಣಿಯು ಕಾಮಪೀಡಿತಳಾಗಿ ಕೃಷ್ಣನ ಸಮೀಪಕ್ಕೆ ಬಂದು ಕಮಲದಂತಿರುವ ಕೃಷ್ಣನ ಮುಖವನ್ನು ಚುಂಬಿಸಿದಳು.

೧೫. ಇನ್ನೊಬ್ಬಳು ತರುಣಿಯು ಕೃಷ್ಣನ ಮಾಯೆಯಿಂದ ಮೋಹಿತಳಾಗಿ ಕೈಯಿಂದ ಜಗತ್ಕಾರಣನಾದ ಕೃಷನನ್ನು ಹಿಡಿದು ತನ್ನ ಮನೆಗೆ ಕರೆತಂದಳು.

ತಾಸಾಂ ಸ ಭಗವಾನ್ ಕೃಷ್ಣಃ ಕಾಮಾನ್ ಕಮಲಲೋಚನಃ ।
ಬಹೂನಿ ಕೃತ್ವಾ ರೂಪಾಣಿ ಪೂರಯಾಮಾಸ ಲೀಲಯಾ ॥ ೧೬ ॥

ಏವಂ ವೈ ಸುಚಿರಂ ಕಾಲಂ ದೇವದೇವಪುರೇ ಹರಿಃ ।
ರೇಮೇ ನಾರಾಯಣಃ ಶ್ರೀಮಾನ್ ಮಾಯಯಾ ಮೋಹಯನ್ ಜಗತ್॥

ಗತೇ ಬಹುತಿಥೇ ಕಾಲೇ ದ್ವಾರವತ್ಯಾ ನಿವಾಸಿನಃ ।
ಬಭೂವುರ್ವಿಕಲಾ ಭೀತಾ ಗೋವಿಂದವಿರಹೇ ಜನಾಃ ॥ ೧೮ ॥

ತತಃ ಸುಪರ್ಣೋ ಬಲವಾನ್ ಪೂರ್ವಮೇವ ವಿಸರ್ಜಿತಃ ।
ಸ ಕೃಷ್ಣಂ ಮಾರ್ಗಮಾಣಸ್ತು ಹಿಮವಂತಂ ಯಯೌ ಗಿರಿಮ್ ॥ ೧೯ ॥

---

೧೬. ಭಗವಂತನೂ, ಕಮಲದಂತೆ ಸುಂದರವಾದ ನೇತ್ರವುಳ್ಳವನೂ ಆದ ಕೃಷ್ಣನು ಲೀಲೆಯಿಂದ ಅನೇಕರೂಪಗಳನ್ನು ಸ್ವೀಕರಿಸಿ ಆ ಅಂಗನೆಯ ವಿವಿಧ ಕಾಮಗಳನ್ನು ಪೂರ್ತಿಮಾಡಿದನು.

೧೭. ಹೀಗೆ ಜಲಧಿಶಯನನಾದ ಶ್ರೀಕೃಷ್ಣನು ತನ್ನ ಮಾಯೆಯಿಂದ ಜಗತ್ತನ್ನು ಮೋಹಪಡಿಸುತ್ತಾ ದೇವೋತ್ತಮನಾದ ಶಿವನ ನಗರದಲ್ಲಿ ರಮಿಸುತ್ತಿದ್ದನು.

೧೮. ಹೀಗೆ ಅನೇಕ ಕಾಲವು ಕಳೆಯಲಾಗಿ ದ್ವಾರಕೆಯಲ್ಲಿ ವಾಸಮಾಡುವ ಪ್ರಜೆಗಳು ಶ್ರೀ ಕೃಷ್ಣನ ವಿಯೋಗದಿಂದ ವ್ಯಸನಪಡುವವರೂ ಮತ್ತು ಭಯಗ್ರಸ್ತರೂ ಆದರು.

೧೯. ಆಮೇಲೆ ಅವರಿಂದ ಬಲಿಷ್ಠನಾದ ಗರುಡನು ಕೃಷ್ಣಾನ್ವೇಷಣಕ್ಕೆ ಮೊದಲು ಕಳುಹಿಸಲ್ಪಟ್ಟನು. ಆ ಗರುಡನು ಕೃಷ್ಣನನ್ನು ಹುಡುಕುತ್ತಾ ಹಿಮಾಲಯ ಪರ್ವತವನ್ನು ಸೇರಿದನು.

ಅದೃಷ್ಟ್ವಾ ತತ್ರ ಗೋವಿಂದಂ ಪ್ರಣಮ್ಯ ಶಿರಸಾ ಮುನಿಮ್ ।
ಆಜಗಾಮೋಪಮನ್ಯುಂ ತಂ ಪುರೀಂ ದ್ವಾರವತೀಂ ಪುನಃ ॥ ೨೦ ॥

ತದಂತರೇ ಮಹಾದೈತ್ಯಾ ರಾಕ್ಷಸಾಶ್ಚಾತಿಭೀಷಣಾಃ ।
ಆಜಗ್ಮುರ್ದ್ವಾರಕಾಂ ಶುಭ್ರಾಂ ಭೀಷಯಂತಃ ಸಹಸ್ರಶಃ ॥ ೨೧ ॥

ಸ ತಾನ್ ಸುಪರ್ಣೋ ಬಲವಾನ್ ಕೃಷ್ಣತುಲ್ಯಪರಾಕ್ರಮಃ ।
ಹತ್ವಾ ಯುದ್ಧೇನ ಮಹತಾ ರಕ್ಷತಿ ಸ್ಮ ಪುರೀಂ ಶುಭಾಮ್ ॥ ೨೨ ॥

ಏತಸ್ಮಿನ್ನೇವ ಕಾಲೇ ತು ನಾರದೋ ಭಗವಾನೃಷಿಃ ।
ದೃಷ್ಟ್ವಾ ಕೈಲಾಸಶಿಖರೇ ಕೃಷ್ಣಂ ದ್ವಾರವತೀಂ ಗತಃ ॥ ೨೩ ॥

---

೨೦. ಆದರೆ ಗರುಡನು ಅಲ್ಲಿ ಗೋವಿಂದನನ್ನು ಕಾಣದೆ ಅಲ್ಲಿಂದ ಉಪಮನ್ಯು ಗುರುವಿನ ಸಮೀಪಕ್ಕೆ ಬಂದು ಅವನನ್ನು ಶಿರದಿಂದ ವಂದಿಸಿ ಮತ್ತೆ ದ್ವಾರಕಾ ನಗರಿಗೆ ಬಂದನು.

೨೧. ಆ ಸಮಯದಲ್ಲಿ ಅತಿ ಭಯಂಕರರಾದ ಮಹಾದೈತ್ಯರೂ ಅನೇಕ ಮಂದಿ ರಾಕ್ಷಸರೂ ನಿರ್ಮಲವಾದ ದ್ವಾರಕಾನಗರವನ್ನು ಭಯಪಡಿಸುತ್ತಾ ಬಂದು ಮುತ್ತಿದರು.

೨೨. ಆಗ ಕೃಷ್ಣನಿಗೆ ಸಮವಾದ ಪರಾಕ್ರಮವುಳ್ಳವನೂ, ಬಲಿಷ್ಠನೂ, ಆದ ಆ ಗರುಡನು ಮಹಾಯುದ್ಧದಿಂದ ರಾಕ್ಷಸ ಸಂಘವನ್ನು ಕೊಂದು ಮಂಗಳಕರವಾದ ನಗರವನ್ನು ರಕ್ಷಿಸುತ್ತಿದ್ದನು.

೨೩. ಇದೇ ಸಮಯದಲ್ಲಿ ಭಗವಂತನಾದ ನಾರದ ಮಹರ್ಷಿಯು ಕೈಲಾಸಾದ್ರಿಯ ಶಿಖರದಲ್ಲಿ ಶ್ರೀ ಕೃಷ್ಣನನ್ನು ದರ್ಶನಮಾಡಿ ಅಲ್ಲಿಂದ ದ್ವಾರಕಾನಗರಿಗೆ ಬಂದನು.

ತೇ ದೃಷ್ಟ್ವಾ ನಾರದಮೃಷಿಂ ಸರ್ವೇ ತತ್ರ ನಿವಾಸಿನಃ ।
ಪ್ರೋಚುರ್ನಾರಾಯಣೋ ನಾಥಃ ಕುತ್ರಾಸ್ತೇ ಭಗವಾನ್ ಹರಿಃ॥ ೨೪ ॥

ಸ ತಾನುವಾಚ ಭಗವಾನ್ ಕೈಲಾಸಶಿಖರೇ ಹರಿಃ ।
ರಮತೇಽದ್ಯ ಮಹಾಯೋಗೀ ತಂ ದೃಷ್ಟ್ವಾಹಮಿಹಾಗತಃ ॥ ೨೫ ॥

ತಸ್ಯೋಪಶ್ರುತ್ಯ ವಚನಂ ಸುಪರ್ಣಃ ಪತತಾಂ ವರಃ ।
ಜಗಾಮಾಕಾಶಗೋ ವಿಪ್ರಾಃ ಕೈಲಾಸಂ ಗಿರಿಮುತ್ತಮಮ್ ॥ ೨೬ ॥

ದದರ್ಶ ದೇವಕೀಸೂನುಂ ಭವನೇ ರತ್ನಮಂಡಿತೇ ।
ತತ್ರಾಸನಸ್ಥಂ ಗೋವಿಂದಂ ದೇವದೇವಾಂತಿಕೇ ಹರಿಮ್ ॥ ೨೭ ॥

---

೨೪. ದ್ವಾರಕಾ ನಗರ ನಿವಾಸಿಗಳಾದ ಜನರೆಲ್ಲರೂ ನಾರದಮುನಿಯನ್ನು ನೋಡಿ ಜಲಧಿಶಯನನೂ, ಪೂಜ್ಯನೂ ಮತ್ತು ನಮ್ಮ ಪ್ರಭುವೂ ಆದ ಶ್ರೀಕೃಷ್ಣನು ಈಗ ಎಲ್ಲಿರುವನೆಂದು ಕೇಳಿದರು.

೨೫. ಆಗ ನಾರದಮುನಿಯು ಹೀಗೆಂದು ಹೇಳಿದನು :—ಮಹಾಯೋಗಿಯೂ ಭಗವಂತನೂ ಆದ ಶ್ರೀಕೃಷ್ಣನು ಕೈಲಾಸಪರ್ವತದ ಶಿಖರದಲ್ಲಿ ರಮಿಸುತ್ತಿರುವನು. ನಾನು ಈಗ ಅವನನ್ನು ನೋಡಿ ಇಲ್ಲಿಗೆ ಬಂದಿರುವೆನು.

೨೬. ವಿಪ್ರೋತ್ತಮರೇ ! ಆ ನಾರದಮುನಿಯ ವಚನವನ್ನು ಕೇಳಿ ಪಕ್ಷಿಗಳಿಗೆ ಇಂದ್ರನಾದ ಗರುಡನು ಆಕಾಶ ಸಂಚಾರಿಯಾಗಿ ಉತ್ತಮವಾದ ಕೈಲಾಸ ಗಿರಿಯನ್ನು ಕುರಿತು ಪ್ರಯಾಣಮಾಡಿದನು.

೨೭. ಮತ್ತು ಅಲ್ಲಿ ರತ್ನಗಳಿಂದ ಅಲಂಕರಿಸಲ್ಪಟ್ಟ ಭವನದಲ್ಲಿ ದೇವೋತ್ತಮನಾದ ಈಶ್ವರನ ಸಮೀಪದಲ್ಲಿ ಆಸನದಲ್ಲಿ ಕುಳಿತಿರುವ, ಗೋಪಾಲಕನೂ, ಪಾಪ ಭಂಜಕನೂ ಮತ್ತು ದೇವಕೀ ಪುತ್ರನೂ ಆದ ಕೃಷ್ಣನನ್ನು ನೋಡಿದನು.

ಉಪಾಸ್ಯಮಾನಮಮರೈರ್ದಿವ್ಯಸ್ತ್ರೀಭಿಃ ಸಮಂತತಃ ।
ಮಹಾದೇವಗಣೈಃ ಸಿದ್ಧೈರ್ಯೋಗಿಭಿಃ ಪರಿವಾರಿತಮ್ ॥ ೨೮ ॥

ಪ್ರಣಮ್ಯ ದಂಡವದ್ಭೂಮೌ ಸುಪರ್ಣಃ ಶಂಕರಂ ಶಿವಮ್ ।
ನಿವೇದಯಾಮಾಸ ಹರಿಂ ಪ್ರವೃತ್ತಂ ದ್ವಾರಕಾಪುರೇ ॥ ೨೯ ॥

ತತಃ ಪ್ರಣಮ್ಯ ಶಿರಸಾ ಶಂಕರಂ ನೀಲಲೋಹಿತಮ್ ।
ಆಜಗಾಮ ಪುರೀಂ ಕೃಷ್ಣಃ ಸೋಽನುಜ್ಞಾತೋ ಹರೇಣ ತು ॥ ೩೦ ॥

ಆರುಹ್ಯ ಕಶ್ಯಪಸುತಂ ಸ್ತ್ರೀಗಣೈರಭಿಪೂಜಿತಃ ।
ವಚೋಭಿರಮೃತಾಸ್ವಾದೈರ್ಮಾನಿತೋ ಮಧುಸೂದನಃ ॥ ೩೧ ॥

---

೨೮. ದೇವತೆಗಳಿಂದಲೂ, ದಿವ್ಯರಾದ ಅಂಗನೆಯರಿಂದಲೂ ಸುತ್ತಲೂ ನಿಂತು ಸೇವಿಸಲ್ಪಡುವವನೂ ಮತ್ತು ಈಶ್ವರನ ಪ್ರಮಥಗಣಗಳಿಂದಲೂ, ಸಿದ್ಧರಿಂದಲೂ, ಯೋಗಿಗಳಿಂದಲೂ ಸುತ್ತುವರಿಯಲ್ಪಟ್ಟ ಕೃಷ್ಣನನ್ನು ನೋಡಿದನು.

೨೯. ಆಗ ಗರುಡನು ಮಂಗಳಕರನಾದ ಶಿವನಿಗೆ ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕರಿಸಿ ಕೃಷ್ಣನು ದ್ವಾರಕಾನರಕ್ಕೆ ಹಿಂದಿರಗಿ ಬರಬೇಕೆಂಬುವನ್ನು ವಿಜ್ಞಾಪಿಸಿಕೊಂಡನು.

೩೦. ತರುವಾಯ ಶಂಕರನ ಅನುಮತಿಯನ್ನು ಪಡೆದ ಶ್ರೀ ಕೃಷ್ಣನು ನೀಲ ಮತ್ತು ರಕ್ತವರ್ಣಗಳಿಂದ ಕೂಡಿದ ಶಂಕರರನ್ನು ಶಿರಸ್ಸಿನಿಂದ ನಮಸ್ಕರಿಸಿ ತನ್ನ ನಗರಕ್ಕೆ ಹಿಂದಿರುಗಿ ಬಂದನು.

೩೧. ಮಧುರವಚನಗಳಿಂದ ಗೌರವಿಸಲ್ಪಟ್ಟವನೂ, ಮಧುದಾನವನ ಸಂಹಾರಿಯೂ ಆದ ಶ್ರೀ ಕೃಷ್ಣನು ಕಶ್ಯಪಪುತ್ರನಾದ ಗರುಡನನ್ನು ಏರಿ ಪ್ರಯಾಣ ಮಾಡಿದನು.

ವೀಕ್ಷ್ಯ ಯಾಂತಮಮಿತ್ರಘ್ನಂ ಗಂಧರ್ವಾಪ್ಸರಸಾಂ ವರಾಃ ।
ಅನ್ವಗಚ್ಛನ್ಮಹಾಯೋಗಂ ಶಂಖಚಕ್ರಗದಾಧರಮ್ ॥ ೩೨ ॥

ವಿಸರ್ಜಯಿತ್ವಾ ವಿಶ್ವಾತ್ಮಾ ಸರ್ವಾ ಏವಾಂಗನಾ ಹರಿಃ ।
ಯಯೌ ಸ ತೂರ್ಣಂ ಗೋವಿಂದೋ ದಿವ್ಯಾಂ ದ್ವಾರವತೀಂ ಪುರೀಮ್

ಗತೇ ದೇವೇಽಸುರರಿಪೌ ನ ಕಾಮಿನ್ಯೋ ಮುನೀಶ್ವರಾಃ ।
ನಿಶೇವ ಚಂದ್ರರಹಿತಾ ವಿನಾ ತೇನ ಚಕಾಶಿರೇ ॥ ೩೪ ॥

ಶ್ರುತ್ವಾ ಪರಜನಾಸ್ತೂರ್ಣಂ ಕೃಷ್ಣಾಗಮನಮುತ್ತಮಮ್ ।
ಮಂಡಯಾಂಚಕ್ರಿರೇ ದಿವ್ಯಾಂ ಪುರೀಂ ದ್ವಾರವತೀಂ ಶುಭಾಮ್ ॥೩೫॥

---

೩೨. ಆಗ ಶ್ರೇಷ್ಠರಾದ ಗಂಧರ್ವಸ್ತ್ರೀಯರೂ ಮತ್ತು ಅಪ್ಸರ ಸ್ತ್ರೀಯರೂ ಮಹಾಯೋಗಿಯೂ, ಶಂಖ-ಚಕ್ರ-ಗದಾಧಾರಿಯೂ ಮತ್ತು ಶತ್ರು ನಿಗ್ರಹಿಯೂ ಆದ ಪ್ರಯಾಣಮಾಡುತ್ತಿದ್ದ ಕೃಷ್ಣನನ್ನು ಹಿಂಬಾಲಿಸಿದರು.

೩೩. ವಿಶ್ವರೂಪಿಯಾದ ಮತ್ತು ಗೋಪಾಲಕನಾದ ಶ್ರೀಹರಿಯು ಸಮಸ್ತ ಸ್ತ್ರೀಯರನ್ನೂ ಹಿಂದಕ್ಕೆ ಕಳುಹಿಸಿ ಶೀಘ್ರವಾಗಿ ದಿವ್ಯವಾದ ದ್ವಾರಕಾನಗರಿಗೆ ಬಂದನು.

೩೪. ಮುನೀಶ್ವರರೇ ! ದಾನವಶತ್ರುವಾದ ಶ್ರೀ ಕೃಷ್ಣನು ಹೊರಟು ಹೋಗಲು ಆ ಕಾಮಿನಿಯರು ಚಂದ್ರನಿಲ್ಲದ ರಾತ್ರಿಗಳಂತೆ ಕೃಷ್ಣನ ವಿಯೋಗದಿಂದ ಮೊದಲಿನಂತೆ ಪ್ರಕಾಶಿಸಲಿಲ್ಲ.

೩೫. ಆ ಪುರಜನರು ಶ್ರೇಷ್ಠವಾದ ಕೃಷ್ಣನ ಆಗಮನವನ್ನು ಕೇಳಿ ದಿವ್ಯವೂ, ಮಂಗಳಕರವೂ ಆದ ಆ ದ್ವಾರಕಾನಗರವನ್ನು ಬೇಗ ಶೃಂಗರಿಸಿದರು.

ಪತಾಕಾಭಿರ್ವಿಶಾಲಾಭಿರ್ಧ್ವಜೈರಂತರ್ಬಹಿಃ ಕೃತೈಃ ।
ಮಾಲಾದಿಭಿಃ ಪುರೀಂ ರಮ್ಯಾಂ ಭೂಷಯಾಂಚಕ್ರಿರೇ ಜನಾಃ ॥೩೬॥

ಅವಾದಯಂಶ್ಚ ವಿವಿಧಾನ್ ವಾದಿತ್ರಾನ್ ಮಧುರಸ್ವನಾನ್ ।
ಶಂಖಾನ್ ಸಹಸ್ರಶೋ ದಧ್ಮುರ್ವೀಣಾವಾದಾನ್ ವಿತೇನಿರೇ ॥ ೩೭ ॥

ಪ್ರವಿಷ್ಟಮಾತ್ರೇ ಗೋವಿಂದೇ ಪುರೀಂ ದ್ವಾರವತೀಂ ಶುಭಾಮ್ ।
ಅಗಾಯನ್ಮಧುರಂ ಗಾನಂ ಸ್ತ್ರಿಯೋ ಯೌವನಶೋಭಿತಾಃ ॥ ೩೮ ॥

ದೃಷ್ಟ್ವಾ ನನೃತುರೀಶಾನಂ ಸ್ಥಿತಾಃ ಪ್ರಾಸಾದಮೂರ್ಧಸು ।
ಮುಮುಚುಃ ಪುಷ್ಪವರ್ಷಾಣಿ ವಸುದೇವಸುತೋಪರಿ ॥ ೩೯ ॥

---

೩೬. ವಿಶಾಲವಾದ ಪತಾಕೆಗಳಿಂದಲೂ ಧ್ವಜಸ್ತಂಭಗಳಿಂದಲೂ ಒಳಗೆ ಮತ್ತು ಹೊರಗೆ ಇರಿಸಲ್ಪಟ್ಟ ಮುಕ್ತಾಹಾರ ಮುಂತಾದುವುಗಳಿಂದಲೂ ಜನರು ನಗರವನ್ನು ರಮ್ಯವಾಗಿ ಭೂಷಿಸಿದರು.

೩೭. ಮತ್ತು ಮಧುರವಾದ ಧ್ವನಿಯಿಂದ ಕೂಡಿದ ಅನೇಕ ವಾದ್ಯಗಳನ್ನು ನುಡಿಸಿದರು. ಕೆಲವರು ಸಹಸ್ರಾರು ಶಂಖಗಳನ್ನು ಊದಿದರು. ಮತ್ತೆ ಕೆಲವರು ವೀಣಾಧ್ವನಿಗಳನ್ನು ವಿಸ್ತರಿಸಿದರು.

೩೮. ಕೃಷ್ಣನು ಮಂಗಳಕರವಾದ ದ್ವಾರಕಾನಗರವನ್ನು ಪ್ರವೇಶಮಾಡಿದ ಕೂಡಲೇ ಯೌವನದಿಂದ ಶೋಭಿಸಲ್ಪಟ್ಟ ಸ್ತ್ರೀಯರು ಮಧುರವಾಗಿ ಗಾನ ಮಾಡಿದರು.

೩೯. ಮತ್ತು ಮಹಡಿಯ ಮೇಲುಗಡೆಯಲ್ಲಿ ನಿಂತು ಪ್ರಭುವಾದ ಕೃಷ್ಣನನ್ನು ನೋಡಿ ನರ್ತನಮಾಡಿದರು ಹಾಗು ವಸುದೇವನ ಪುತ್ರನಾದ ಕೃಷ್ಣನ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು.

ಪ್ರವಿಶ್ಯ ಭಗವಾನ್ ಕೃಷ್ಣಸ್ತ್ವಾಶೀರ್ವಾದಾಭಿವರ್ಧಿತಃ ।
ವರಾಸನೇ ಮಹಾಯೋಗೀ ಭಾತಿ ದೇವೀಭಿರನ್ವಿತಃ ॥ ೪೦ ॥

ಸುರಮ್ಯೇ ಮಂಡಪೇ ಶುಭ್ರೇ ಶಂಖಾದ್ಯೈಃ ಪರಿವಾರಿತಃ ।
ಆತ್ಮಜೈರಭಿತೋ ಮುಖ್ಯೈಃ ಸ್ತ್ರೀಸಹಸ್ರೈಶ್ಚ ಸಂವೃತಃ ॥ ೪೧ ॥

ತತ್ರಾಸನವರೇ ರಮ್ಯೇ ಜಾಂಬವತ್ಯಾ ಸಹಾಚ್ಯುತಃ ।
ಭ್ರಾಜತೇ ಚೋಮಯಾ ದೇವೋ ಯಥಾ ದೇವ್ಯಾ ಸಮನ್ವಿತಃ॥ ॥೪೨॥

ಆಜಗ್ಮುರ್ದೇವಗಂಧರ್ವಾ ದ್ರಷ್ಟುಂ ಲೋಕಾದಿಮವ್ಯಯಮ್ ।
ಮಹರ್ಷಯಃ ಪೂರ್ವಜಾತಾ ಮಾರ್ಕಂಡೇಯಾದಯೋ ದ್ವಿಜಾಃ॥೪೩॥

---

೪೦. ಮಹಾಯೋಗಿಯೂ ಪರಮಪೂಜ್ಯನೂ ಆದ ಕೃಷ್ಣನು ಆಶೀರ್ವಾದಗಳಿಂದ ಅಭಿವೃದ್ಧಿಹೊಂದುತ್ತಾ ನಗರವನ್ನು ಪ್ರವೇಶಿಸಿ ದೇವಿಯರಿಂದ ಕೂಡಿದವನಾಗಿ ಉತ್ತಮಾಸನದಲ್ಲಿ ಕುಳಿತು ಪ್ರಕಾಶಿಸಿದನು.

೪೧. ಅಲ್ಲಿ ರಮಣೀಯವಾದ ಒಂದು ಶುಭ್ರಮಂಟಪದಲ್ಲಿ ಶಂಖ ಮುಂತಾದ ತನ್ನ ಪುತ್ರರಿಂದಲೂ ಸಹಸ್ರಾರುಮಂದಿ ಮುಖ್ಯಜನರಿಂದಲೂ ಸುತ್ತುವರಿಯಲ್ಪಟ್ಟವನಾದನು.

೪೨. ಅಲ್ಲಿ ಜಾಂಬವತೀದೇವಿಯೊಡನೆ ರಮಣೀಯವಾದ ದಿವ್ಯಾಸನದಲ್ಲಿ ಕುಳಿತಿರುವ ಅಚ್ಯುತನು ಪಾರ್ವತೀದೇವಿಯೊಡನೆ ಕುಳಿತಿರುವ ಮಹಾದೇವನಂತೆ ಪ್ರಕಾಶಿಸಿದನು.

೪೩. ಆಗ ಲೋಕಗಳಿಗೆ ಆದಿಭೂತನೂ ಶಾಶ್ವತನೂ ಆದ ಕೃಷ್ಣನನ್ನು ನೋಡಲು ದೇವತೆಗಳೂ ಗಂಧರ್ವರೂ ಪೂರ್ವದಲ್ಲಿ ಹುಟ್ಟಿದ ಮಹರ್ಷಿಗಳೂ ಮಾರ್ಕಂಡೇಯ ಮುಂತಾದ ವಿಪ್ರರೂ ಬಂದು ಸೇರಿದರು.

ತತಃ ಸ ಭಗವಾನ್ ಕೃಷ್ಣೋ ಮಾರ್ಕಂಡೇಯಂ ಸಮಾಗತಮ್ ।
ಸನಾಮೋತ್ಥಾಯ ಶಿರಸಾ ಸ್ವಾಸನಂ ಚ ದದೌ ಹರಿಃ ॥ ೪೪ ॥

ಸಂಪೂಜ್ಯ ತಾನೃಷಿಗಣಾನ್ ಪ್ರಣಾಮೇನ ಸಹಾನುಗಃ ।
ವಿಸರ್ಜಯಾಮಾಸ ಹರಿರ್ದತ್ವಾ ತದಭಿವಾಂಛಿತಾನ್ ॥ ೪೫ ॥

ತದಾ ಮಧ್ಯಾಹ್ನ ಸಮಯೇ ದೇವದೇವಃ ಸ್ವಯಂ ಹರಿಃ ।
ಸ್ನಾತಃ ಶುಕ್ಲಾಂಬರೋ ಭಾನುಮುಪತಿಷ್ಠನ್ ಕೃತಾಂಜಲಿಃ ॥ ೪೬ ॥

ಜಜಾಪ ಜಾಪ್ಯಂ ವಿಧಿವತ್ಪ್ರೇಕ್ಷಮಾಣೋ ದಿವಾಕರಮ್ ।
ತರ್ಪಯಾಮಾಸ ದೇವೇಶೋ ದೇವಾನ್ ಪಿತೃಗಣಾನ್ ಮುನೀನ್॥೪೭॥

---

೪೪. ತರುವಾಯ ಪಾಪಭಂಜಕನೂ ಭಗವಂತನೂ ಆದ ಕೃಷ್ಣನು ಅಲ್ಲಿಗೆ ಬಂದಿದ್ದ ಮಾರ್ಕಂಡೇಯ ಮುನಿಯನ್ನು ನೋಡಿ ಎದ್ದುನಿಂತು ಶಿರಸ್ಸಿನಿಂದ ನಂಿಸಿ ಅವನಿಗೆ ತನ್ನ ಆಸನವನ್ನು ಕೊಟ್ಟನು.

೪೫. ಮತ್ತು ಕೃಷ್ಣನು ಆ ಮಹರ್ಷಿ ಸಂಘವನ್ನು ಅನೇಕ ಪರಿವಾರದೊಂದಿಗೆ ಪ್ರಣಾಮಪೂರ್ವಕವಾಗಿ ಪೂಜಿಸಿ ಅವರವರ ಇಷ್ಟಾರ್ಥಗಳನ್ನು ಅನುಗ್ರಹಿಸಿ ಕಳುಹಿಸಿಕೊಟ್ಟನು.

೪೬. ಆಗ ಮಧ್ಯಾಹ್ನದ ಸಮಯದಲ್ಲಿ ದೇವೋತ್ತಮನಾದ ಶ್ರೀಹರಿಯು ಸ್ನಾನಮಾಡಿ ಶುಭ್ರವಾದ ವಸ್ತ್ರಗಳನ್ನು ಧರಿಸಿ ಅಂಜಲಿ ಕಟ್ಟಿಕೊಂಡು ಸೂರ್ಯ ದೇವನನ್ನು ಸ್ತುತಿಸಿದನು.

೪೭. ಮತ್ತು ಸೂರ್ಯಮಂಡಲವನ್ನು ನೋಡುತ್ತಾ ಜಪ ಮಂತ್ರಗಳನ್ನು ಯಥಾವಿಧಿಯಾಗಿ ಜಪಿಸಿದನು. ಹಾಗು ದೇವತಾ ಪ್ರಭುವಾದ ಕೃಷ್ಣನು ದೇವತೆ ಪಿತೃ ಮಹರ್ಷಿಗಣಗಳಿಗೆ ತರ್ಪಣಾಂಜಲಿಯನ್ನು ಕೊಟ್ಟನು.

ಪ್ರವಿಶ್ಯ ದೇವಭವನಂ ಮಾರ್ಕಂಡೇಯೇನ ಚೈವ ಹಿ ।
ಪೂಜಯಾಮಾಸ ಲಿಂಗಸ್ಥಂ ಭೂತೇಶಂ ಭೂತಿಭೂಷಣಮ್ ॥ ೪೮ ॥

ಸಮಾಪ್ಯ ನಿಯಮಂ ಸರ್ವಂ ನಿಯಂತಾ ಸ ಸ್ವಯಂ ನೃಣಾಮ್ ।
ಭೋಜಯಿತ್ವಾ ಮುನಿವರಂ ಬ್ರಾಹ್ಮಣಾನಭಿಪೂಜ್ಯ ಚ ॥ ೪೯ ॥

ಕೃತ್ವಾತ್ಮಯೋಗಂ ವಿಪ್ರೇಂದ್ರಾ ಮಾರ್ಕಂಡೇಯೇನ ಚಾಚ್ಯುತಃ ।
ಕಥಾಂ ಪೌರಾಣಿಕೀಂ ಪುಣ್ಯಾಂ ಚಕ್ರೇ ಪುತ್ರಾದಿಭಿರ್ವೃತಃ ॥ ೫೦ ॥

ಅಥೈತತ್ಸರ್ವಮಖಿಲಂ ದೃಷ್ಟ್ವಾ ಕರ್ಮ ಮಹಾಮುನಿಃ ।
ಮಾರ್ಕಂಡೇಯೋ ಹಸನ್ ಕೃಷ್ಣಂ ಬಭಾಷೇ ಮಧುರಂ ವಚಃ ॥೫೧॥

---

೪೮. ಮತ್ತು ಮಾರ್ಕಂಡೇಯ ಮಹರ್ಷಿಯೊಂದಿಗೆ ದೇವಾಲಯವನ್ನು ಪ್ರವೇಶಮಾಡಿ ಭೂತಾಧಿಪತಿಯೂ ಭಸ್ಮದಿಂದ ಭೂಷಿಸಲ್ಪಟ್ಟವನೂ ಆದ ಲಿಂಗರೂಪದಿಂದಿರುವ ಶಿವನನ್ನು ಪೂಜಿಸಿದನು.

೪೯. ಸಮಸ್ತ ಮಾನವರಿಗೆ ನಿಯಾಮಕನಾದ ಶ್ರೀಕೃಷ್ಣನು ತಾನೇ ಸಮಸ್ತ ನಿಯಮಗಳನ್ನು ಪೂರ್ತಿಗೊಳಿಸಿ ಮುನಿಶ್ರೇಷ್ಠನಾದ ಮಾರ್ಕಂಡೇಯ ಮುನಿಗೆ ಭೋಜನಮಾಡಿಸಿ ಇನ್ನು ಅನೇಕ ವಿಪ್ರರನ್ನು ಸತ್ಕರಿಸಿದನು.

೫೦. ಬ್ರಾಹ್ಮಣೋತ್ತಮರೇ ! ಅಚ್ಯುತನಾದ ಕೃಷ್ಣನು ಮಾರ್ಕಂಡೇಯ ಮುನಿಯೊಡನೆ ಆತ್ಮಸಮಾಧಿಯೋಗವನ್ನು ಅವಲಂಬಿಸಿ ತನ್ನ ಪುತ್ರ ಮುಂತಾದ ವರಿಂದ ಕೂಡಿ ಪವಿತ್ರವಾದ ಪುರಾಣಕಥಾ ಗೋಷ್ಠಿಯನ್ನು ನಡೆಸಿದನು.

೫೧. ಅನಂತರದಲ್ಲಿ ಮಹಾಮುನಿಯಾದ ಮಾರ್ಕಂಡೇಯ ಮಹರ್ಷಿಯು ಕೃಷ್ಣನ ಸಮಸ್ತ ಕರ್ಮಾನುಷ್ಠಾನವನ್ನು ಸಂಪೂರ್ಣವಾಗಿ ನೋಡಿ ನಗುತಾ ಕೃಷ್ಣನನ್ನು ನೋಡಿ ಈ ಮಧುರ ವಚನವನ್ನು ಹೇಳಿದನು.

ಮಾರ್ಕಂಡೇಯ ಉವಾಚ :—

ಕಃ ಸಮಾರಾಧ್ಯತೇ ದೇವೋ ಭವತಾ ಕರ್ಮಭಿಃ ಶುಭೈಃ ।
ಬ್ರೂಹಿ ತ್ವಂ ಕರ್ಮಭಿಃ ಪೂಜ್ಯೋ ಯೋಗಿನಾಂ ಧ್ಯೇಯ ಏವ ಚ ॥

ತ್ವಂ ಹಿ ತತ್ಪರಮಂ ಬ್ರಹ್ಮ ನಿರ್ವಾಣಮಮಲಂ ಪದಮ್ ।
ಭಾರಾವತರಣಾರ್ಥಾಯ ಜಾತೋ ವೃಷ್ಣಿಕುಲೇ ಪ್ರಭುಃ ॥ ೫೩ ॥

ತಮಬ್ರವೀನ್ಮಹಾಬಾಹುಃ ಕೃಷ್ಣೋ ಬ್ರಹ್ಮವಿದಾಂ ವರಃ ।
ಶೃಣ್ವತಾಮೇವ ಪುತ್ರಾಣಾಂ ಸರ್ವೇಷಾಂ ಪ್ರಹಸನ್ನಿವ ॥ ೫೪ ॥

ಶ್ರೀ ಭಗವಾನುವಾಚ :—

ಭವತಾ ಕಥಿತಂ ಸರ್ವಂ ತಥ್ಯಮೇವ ನ ಸಂಶಯಃ ।
ತಥಾಪಿ ದೇವಮೀಶಾನಂ ಪೂಜಯಾಮಿ ಸನಾತನಮ್ ॥ ೫೫ ॥

---

೫೨. ಮಾರ್ಕಂಡೇಯಮುನಿಯು ಹೀಗೆಂದು ಹೇಳಿದನು :— ಕೃಷ್ಣನೇ ! ಮಂಗಳಕರವಾದ ಕರ್ಮಗಳಿಂದ ನಿನ್ನಿಂದ ಸೇವಿಸಲ್ಪಡುತ್ತಿರುವ ದೇವತೆಯು ಯಾರು? ಸತ್ಕರ್ಮಗಳಿಂದ ಕರ್ಮಿಗಳಿಗೆ ಪೂಜ್ಯನೂ, ಯೋಗಿಗಳಿಗೆ ಧ್ಯೇಯನೂ ಆದ ದೇವನು ಯಾರು ? ಇದನ್ನು ನೀನು ಹೇಳು.

೫೩. ಆನಂದಮಯವೂ ನಿರ್ಮಲವೂ ಪರಮಪದವೂ ಆದ ಬ್ರಹ್ಮವಸ್ತುವು ನೀನೇ ಆಗಿದ್ದೀಯೆ ; ಭೂಭಾರವನ್ನು ಇಳಿಸುವುದಕ್ಕೋಸ್ಕರ ಪ್ರಭುವಾದ ನೀನು ಯಾದವವಂಶದಲ್ಲಿ ಜನಿಸಿದ್ದೀಯೇ.

೫೪. ಆಗ ಮಹಾಬಾಹುಬಲಶಾಲಿಯೂ, ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ಕೃಷ್ಣನು ತನ್ನ ಸಮಸ್ತ ಪುತ್ರರು ಕೇಳುತ್ತಲಿರುವಹಾಗೆ ಹಸನ್ಮುಖಿಯಾಗಿ ಮಾರ್ಕಂಡೇಯ ಮುನಿಯನ್ನು ಕುರಿತು ಹೇಳಿದನು.

೫೫. ಕೃಷ್ಣನು ಹೀಗೆಂದು ಹೇಳಿದನು :— ಮುನಿಯೇ ! ನಿನ್ನಿಂದ ಹೇಳಲ್ಪಟ್ಟಿರುವ ಪ್ರತಿಯೊಂದು ವಿಷಯವೂ ಸತ್ಯವಾದುದು. ಸಂದೇಹವಿಲ್ಲ. ಹಾಗಿದ್ದರೂ ಅನಾದಿಯೂ ಸರ್ವೇಶ್ವರನೂ ಆದ ಶಿವನನ್ನು ಪೂಜಿಸುತ್ತೇನೆ.

ನ ಮೇ ವಿಪ್ರಾಸ್ತಿ ಕರ್ತವ್ಯಂ ನಾನವಾಪ್ತಂ ಕಥಂಚನ ।
ಪೂಜಯಾಮಿ ತಥಾಪೀಶಂ ಜಾನನ್ ವೈ ಪರಮಂ ಶಿವಮ್ ॥ ೫೬ ॥

ನ ವೈ ಪಶ್ಯಂತಿ ತೇ ದೇವಂ ಮಾಯಯಾ ಮೋಹಿತಾ ಜನಾಃ ।
ತತಶ್ಚೈವಾತ್ಮನೋ ಮೂಲಂ ಜ್ಞಾಪಯನ್ ಪೂಜಯಾಮಿ ತಮ್॥೫೭॥

ನ ಚ ಲಿಂಗಾರ್ಚನಾತ್ಪುಣ್ಯಂ ಲೋಕೇ ದುರ್ಗತಿನಾಶನಮ್ ।
ತಥಾ ಲಿಂಗೇ ಹಿತಾಯೈಷಾಂ ಲೋಕಾನಾಂ ಪೂಜಯೇಚ್ಛಿವಮ್॥೫೮॥

ಯೋಽಹಂ ತಲ್ಲಿಂಗಮಿತ್ಯಾಹುರ್ವೇದವಾದವಿದೋ ಜನಾಃ ।
ತತೋಽಹಮಾತ್ಮಮೀಶಾನಂ ಪೂಜಯಾಮ್ಯಾತ್ಮನೈವ ತತ್ ॥ ೫೯ ॥

---

೫೬. ವಿಪ್ರನೇ! ನನಗೆ ಯಾವುದೊಂದು ಕರ್ತವ್ಯಕರ್ಮವೂ, ಹೊಂದದಿರುವ ಪ್ರಯೋಜನವೂ ಇರುವುದಿಲ್ಲ. ಆದರೂ ಪರಮಶಿವನನ್ನು ತಾತ್ತ್ವಿಕವಾಗಿ ತಿಳಿದು ಅರ್ಚಿಸುತ್ತೇನೆ.

೫೭. ಮಾಯೆಯಿಂದ ಮೋಹಗೊಂಡಿರುವ ಜನರು ಆ ಪರಮಶಿವನನ್ನು ತಿಳಿಯುವುದಿಲ್ಲ. ಆದುದರಿಂದ ಆ ಪರಮಶಿವನೇ ತನಗೆ ಮೂಲವೆಂದು ಬೋಧಿಸುತ್ತಾ ಅವನನ್ನು ಪೂಜಿಸುತ್ತೇನೆ.

೫೮. ಮಹಾಲಿಂಗವನ್ನು ಅರ್ಚಿಸುವುದಕ್ಕಿಂತ ಉತ್ತಮವ
ಯನ್ನು ನಾಶಮಾಡುವ ಬೇರೊಂದು ಪುಣ್ಯವು ಲೋಕದಲ್ಲಿ ಇಲ್ಲ. ಆದ್ದರಿಂದ ಈ ಲೋಕಗಳ ಹಿತಕ್ಕೋಸ್ಕರ ಲಿಂಗದಲ್ಲಿ ಶಿವನನ್ನು ಪೂಜಿಸಬೇಕು.

೫೯. ವೇದಾರ್ಥ ವಾದಗಳನ್ನು ಅರಿತಿರುವ ಜನರು ತಮ್ಮ ಆತ್ಮವನ್ನು ಲಿಂಗವೆಂದು ಹೇಳುವರು. ಆದ್ದರಿಂದ ನಾನು ಆತ್ಮಸ್ವರೂಪಿಯಾದ ಈಶ್ವರನನ್ನು ಆತ್ಮನಿಂದಲೇ ಪೂಜಿಸುತ್ತೇನೆ.

ತಸ್ಯೈವ ಪರಮಾ ಮೂರ್ತಿಸ್ತನ್ಮಯೋಽಹಂ ನ ಸಂಶಯಃ ।
ನಾವಯೋರ್ವಿದ್ಯತೇ ಭೇದೋ ವೇದೇಷ್ವೇತನ್ನ ಸಂಶಯಃ ॥ ೬೦ ॥

ಏಷ ದೇವೋ ಮಹಾದೇವಃ ಸದಾ ಸಂಸಾರಭೀರುಭಿಃ ।
ಯಾಜ್ಯಃ ಪೂಜ್ಯಶ್ಚ ವಂದ್ಯಶ್ಚ ಜ್ಞೇಯೋ ಲಿಂಗೇ ಮಹೇಶ್ವರಃ ॥ ೬೧ ॥

ಮಾರ್ಕಂಡೇಯ ಉವಾಚ :—

ಕಿಂ ತಲ್ಲಿಂಗಂ ಸುರಶ್ರೇಷ್ಠ ಲಿಂಗೇ ಸಂಪೂಜ್ಯತೇ ಚ ಕಃ ।
ಬ್ರೂಹಿ ಕೃಷ್ಣ ವಿಶಾಲಾಕ್ಷ ಗಹನಂ ಹ್ಯೇತದುತ್ತಮಮ್ ॥ ೬೨ ॥

ಶ್ರೀ ಭಗವಾನುವಾಚ :—

ಅವ್ಯಕ್ತಂ ಲಿಂಗಮಿತ್ಯಾಹುರಾನಂದಂ ಜ್ಯೋತಿರಕ್ಷಯಮ್ ।
ವೇದಾ ಮಹೇಶ್ವರಂ ದೇವಮಾಹುರ್ಲಿಂಗಿನಮವ್ಯಯಮ್ ॥ ೬೩ ॥

---

೬೦. ನಾನು ಆ ಪರಮಶಿವನ ಮೂರ್ತಿಸ್ವರೂಪನೂ ತನ್ಮಯನೂ ಆಗಿದ್ದೇನೆ. ಇದರಲ್ಲಿ ಸಂಶಯವಿಲ್ಲ. ವೇದಗಳಲ್ಲಿ ಹೇಳುವ ಪರಮಾರ್ಥ ತತ್ತ್ವಮಾರ್ಗದಲ್ಲಿ ನನಗೂ ಶಿವನಿಗೂ ಭೇದವಿರುವುದಿಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ.

೬೧. ಸ್ವಾಮಿಯೂ, ಮಹೇಶ್ವರನೂ ಆದ ಈ ಮಹಾದೇವನು ಸಂಸಾರ ತಾಪದಿಂದ ಭೀರುಗಳಾದ ಜನರಿಂದ ಯಾಗ, ಪೂಜಾ, ವಂದನ ಮುಂತಾದ ಸತ್ಕರ್ಮಗಳಿಂದ ಸತ್ಕರಿಸಲ್ಪಡುವವನೂ ಮತ್ತು ಲಿಂಗಮೂರ್ತಿಯಲ್ಲಿ ತಿಳಿಯಲ್ಪಡುವವನೂ ಆಗಿರುವನು.

೬೨. ಮಾರ್ಕಂಡೇಯ ಮುನಿಯು ಹೀಗೆಂದು ಹೇಳಿದನು :—ದೇವತೆಗಳಲ್ಲಿ ಶ್ರೇಷ್ಠನೂ ವಿಶಾಲವಾದ ನೇತ್ರವುಳ್ಳವನೂ ಆದ ಕೃಷ್ಣನೇ ! ಲಿಂಗವೆಂಬುದು ಯಾವುದು ? ಲಿಂಗದಲ್ಲಿ ಪೂಜಿಸಲ್ಪಡುವ ದೇವನು ಯಾರು ? ಇದನ್ನು ಹೇಳು ಈ ವಿಷಯವು ಅತಿರಹಸ್ಯವೂ, ಗಹನವೂ ಆಗಿದೆ.

೬೩. ಭಗವಂತನು ಹೀಗೆಂದನು :—ವೇದಗಳು ಅವ್ಯಕ್ತತತ್ತ್ವವನ್ನು ಲಿಂಗವೆಂದು ವರ್ಣಿಸುತ್ತಿವೆ. ಹಾಗು ಆನಂದಮಯನೂ ಜ್ಯೋತಿರೂಪನೂ ಕ್ಷಯರಹಿತನೂ ಅವ್ಯಯನೂ ಆದ ಮಹೇಶ್ವರನನ್ನು ಲಿಂಗ ಎಂದು ಹೇಳುತ್ತವೆ.

ಪುರಾ ಚೈಕಾರ್ಣವೇ ಘೋರೇ ನಷ್ಟೇ ಸ್ಥಾವರಜಂಗಮೇ ।
ಪ್ರಬೋಧಾರ್ಥಂ ಬ್ರಹ್ಮಣೋ ಮೇ ಪ್ರಾದುರ್ಭೂತೋ ಮಹಾಶಿವಃ ॥

ತಸ್ಮಾತ್ಕಾಲಾತ್ಸಮಾರಭ್ಯ ಬ್ರಹ್ಮಾ ಚಾಹಂ ಸದೈವ ಹಿ ।
ಪೂಜಯಾವೋ ಮಹಾದೇವಂ ಲೋಕಾನಾಂ ಹಿತಕಾಮ್ಯಯಾ ॥ ೬೫ ॥

ಮಾರ್ಕಂಡೇಯ ಉವಾಚ—

ಕಥಂ ಲಿಂಗಮಭೂತ್ ಪೂರ್ವಮೈಶ್ವರಂ ಪರಮಂ ಪದಮ್ ।
ಪ್ರಬೋಧಾರ್ಥಂ ಸ್ವಯಂ ಕೃಷ್ಣ ವಕ್ತುಮರ್ಹಸಿ ಸಾಂಪ್ರತಮ್॥॥೬೬॥

ಶ್ರೀ ಭಗವಾನುವಾಚ :—

ಆಸೀದೇಕಾರ್ಣವಂ ಘೋರಮವಿಭಾಗಂ ತಮೋಮಯಮ್ ।
ಮಧ್ಯೇ ಚೈಕಾರ್ಣವೇ ತಸ್ಮಿನ್ ಶಂಖಚಕ್ರಗದಾಧರಃ ॥ ೬೭ ॥

---

೬೪. ಪೂರ್ವದಲ್ಲಿ ಕಲ್ಪಾಂತ ಸಮಯದಲ್ಲಿ ಸ್ಥಾವರ-ಜಂಗಮ ಪ್ರಾಣಿಗಳು ಲಯಹೊಂದಿ ಜಗತ್ತು ಏಕಾರ್ಣವಪ್ರಾಯವಾಗಿರಲು ಮಹಾಶಿವನು ನನಗೂ ಬ್ರಹ್ಮದೇವನಿಗೂ ಪ್ರಬೋಧವನ್ನು ಉಂಟುಮಾಡಲು ಪ್ರಾದುರ್ಭವಿಸಿದನು.

೬೫. ಆ ಮೊದಲುಗೊಂಡು ಬ್ರಹ್ಮದೇವನೂ ನಾನೂ ಈ ಲೋಕಗಳಿಗೆ ಹಿತವಾಗಲೆಂಬ ಆಕಾಂಕ್ಷೆಯಿಂದ ಯಾವಾಗಲೂ ಮಹಾದೇವನಾದ ಶಂಕರನನ್ನು ಪೂಜಿಸುತ್ತೇವೆ.

೬೬. ಮಾರ್ಕಂಡೇಯ ಮುನಿಯು ಹೀಗೆಂದು ಹೇಳಿದನು :— ಈಶ್ವರನೆಂಬ ಪರಮಪದವು ಪೂರ್ವದಲ್ಲಿ ಲಿಂಗರೂಪವಾದುದು ಹೇಗೆ ? ಕೃಷ್ಣನೇ ! ನನಗೆ ಜ್ಞಾನೋದಯವಾಗಲೋಸ್ಕರ ಈಗ ಈ ವಿಷಯವನ್ನು ನೀನು ಹೇಳಲು ಅರ್ಹನಾಗಿದ್ದೀಯೆ.

೬೭. ಭಗವಂತನು ಹೀಗೆಂದು ಹೇಳಿದನು :—ಪೂರ್ವದಲ್ಲಿ ಈ ಪ್ರಪಂಚವು ವಸ್ತುಭೇದರಹಿತವೂ ತಮೋಮಯವೂ ಘೋರವಾದ ಏಕಾರ್ಣವಪ್ರಾಯವೂ ಆಗಿತ್ತು. ಆಗ ಆ ಏಕಾರ್ಣವ ಮಧ್ಯದಲ್ಲಿ ನಾನು ಶಂಖ-ಚಕ್ರ-ಗದಾಧಾರಿಯಾಗಿ ಮಲಗಿದ್ದೆನು.

ಸಹಸ್ರಶೀರ್ಷಾ ಭೂತ್ವಾಹಂ ಸಹಸ್ರಾಕ್ಷಃ ಸಹಸ್ರಪಾತ್ ।
ಸಹಸ್ರಬಾಹುಃ ಪುರುಷಃ ಶಯಿತೋಽಹಂ ಸನಾತನಃ ॥ ೬೮ ॥

ಏತಸ್ಮಿನ್ನಂತರೇ ದೂರೇ ಪಶ್ಯಾಮಿ ಹ್ಯಮಿತಪ್ರಭಮ್ ।
ಕೋಟಿಸೂರ್ಯಪ್ರತೀಕಾಶಂ ಭ್ರಾಜಮಾನಂ ಶ್ರಿಯಾವೃತಮ್ ॥೬೯॥

ಚತುರ್ವಕ್ತ್ರಂ ಮಹಾಯೋಗಂ ಪುರುಷಂ ಕಾರಣಂ ಪ್ರಭುಮ್ ।
ಕೃಷ್ಣಾಜಿನಧರಂ ದೇವಮೃಗ್ಯಜುಸ್ಸಾಮಭಿಃ ಸ್ತುತಮ್ ॥ ೭೦ ॥

ನಿಮೇಷಮಾತ್ರೇಣ ಸ ಮಾಂ ಪ್ರಾಪ್ತೋ ಯೋಗವಿದಾಂ ವರಃ ।
ವ್ಯಾಜಹಾರ ಸ್ವಯಂ ಬ್ರಹ್ಮಾ ಸ್ಮಯಮಾನೋ ಮಹಾದ್ಯುತಿಃ ॥ ೭೧ ॥

---

೬೮. ಆಗ ಸನಾತನನಾದ ನಾನು ಸಹಸ್ರ ಶಿರಗಳಿಂದಲೂ ಸಹಸ್ರ ನಯನಗಳಿಂದಲೂ ಸಹಸ್ರಪಾದಗಳಿಂದಲೂ ಮತ್ತು ಸಹಸ್ರ ಬಾಹುಗಳಿಂದಲೂ ಕೂಡಿದ ಪೂರ್ಣರೂಪವುಳ್ಳವನಾಗಿ ಜಲರಾಶಿಯಲ್ಲಿ ಶಯನಮಾಡಿದ್ದೆನು.

೬೯. ಈ ಸಂದರ್ಭದಲ್ಲಿ ಅಪರಿಮಿತವಾದ ಪ್ರಭೆಯುಳ್ಳವನೂ ಕೋಟಿ ಸಂಖ್ಯೆಯ ಸೂರ್ಯರಂತೆ ತಪಿಸುವವನೂ, ಕಾಂತಿಯಿಂದ ವ್ಯಾಪಿಸಿ ಪ್ರಕಾಶಿಸುವವನೂ ಆದ ಬ್ರಹ್ಮನನ್ನು ದೂರದಲ್ಲಿ ಕಂಡೆನು.

೭೦. ಬ್ರಹ್ಮನು ನಾಲ್ಕು ಮುಖಗಳಿಂದ ಕೂಡಿದವನೂ ಮಹಾಯೋಗಿಯೂ ಪುರುಷಾಕಾರನೂ, ಸರ್ವಕಾರಣನೂ ಪ್ರಭುವೂ ಕೃಷ್ಣಾಜಿನವನ್ನು ಧರಿಸಿದವನೂ ಮತ್ತು ಋಕ್, ಯಜುಃ, ಸಾಮವೇದಗಳಿಂದ ಸ್ತುತಿಸಲ್ಪಡುವವನೂ ಆಗಿದ್ದನು.

೭೧. ಯೋಗವಿಧಿಜ್ಞರಲ್ಲಿ ಪ್ರವರನೂ ಮಹಾತೇಜಸ್ವಿಯೂ ಆದ ಬ್ರಹ್ಮದೇವನು ಒಂದು ನಿಮಿಷದಲ್ಲಿ ನನ್ನ ಸಮೀಪಕ್ಕೆ ಬಂದು ನಗುತ್ತ ತಾನಾಗಿ ಈ ವಚನವನ್ನು ಹೇಳಿದನು.

ಕಸ್ತ್ವಂ ಕುತೋ ವಾ ಕಿಂಚೇಹ ತಿಷ್ಠಸೇ ವದ ಮೇ ಪ್ರಭೋ ।
ಅಹಂ ಕರ್ತಾ ಹಿ ಲೋಕಾನಾಂ ಸ್ವಯಂಭೂಃ ಪ್ರಪಿತಾಮಹಃ ॥ ೬೨ ॥

ಏವಮುಕ್ತಸ್ತದಾ ತೇನ ಬ್ರಹ್ಮಣಾಹಮುವಾಚ ಹ ।
ಅಹಂ ಕರ್ತಾಸ್ಮಿ ಲೋಕಾನಾಂ ಸಂಹರ್ತಾ ಚ ಪುನಃ ಪುನಃ ॥ ೬೩ ॥

ಏವಂ ವಿವಾದೇ ವಿತತೇ ಮಾಯಯಾ ಪರಮೇಷ್ಠಿನಃ ।
ಪ್ರಬೋಧಾರ್ಥಂ ಪರಂ ಲಿಂಗಂ ಪ್ರಾದುರ್ಭೂತಂ ಶಿವಾತ್ಮಕಮ್॥೬೪॥

ಕಾಲಾನಲಸಮಪ್ರಖ್ಯಂ ಜ್ವಾಲಾಮಾಲಾಸಮಾಕುಲಮ್ ।
ಕ್ಷಯವೃದ್ಧಿವಿನಿರ್ಮುಕ್ತಮಾದಿಮಧ್ಯಾಂತವರ್ಜಿತಮ್ ॥ ೬೫ ॥

---

೬೨. ಪ್ರಭುವೆ ! ನೀನು ಯಾರು ? ಎಲ್ಲಿಂದ ಇಲ್ಲಿಗೆ ಬಂದಿರುವೆ ? ಏಕೆ ಇಲ್ಲಿ ನಿಂತಿರುತ್ತೀಯೇ ? ವಿಶದವಾಗಿ ಹೇಳು. ನಾನು ಈ ಲೋಕಗಳ ಸೃಷ್ಟಿ ಕರ್ತನೂ ಸ್ವಯಂಭುವೂ ಪ್ರಪಿತಾಮಹನೂ ಎಂದೆನಿಸಿರುವ ಬ್ರಹ್ಮನಾಗಿದ್ದೇನೆ.

೬೩. ಆಗ ಬ್ರಹ್ಮದೇವನಿಂದ ಹೀಗೆಂದು ಹೇಳಲ್ಪಟ್ಟಿರುವ ನಾನು ಹೀಗೆಂದು ಹೇಳಿದೆನು :- ನಾನು ಈ ಲೋಕಗಳನ್ನು ಸೃಷ್ಟಿಸುವವನೂ ಮತ್ತೆ ಮತ್ತೆ ಸಂಹರಿಸು ವವನೂ ಆಗಿದ್ದೇನೆ.

೬೪. ಹೀಗೆ ಜಗತ್ಸೃಷ್ಟಿವ್ಯಾಪಾರ ವಿಷಯದಲ್ಲಿ ಮಾಯೆಯಿಂದ ಅಜ್ಞನಾದ ಬ್ರಹ್ಮನಿಗೂ ನನಗೂ ವಿವಾದವು ಬೆಳೆಯುತ್ತಿರಲು ಬ್ರಹ್ಮನ ಪ್ರಬೋಧಕ್ಕೋಸ್ಕರ ಶಿವರೂಪವಾದ ಪರಮಲಿಂಗವು ಪ್ರಾದುರ್ಭವಿಸಿತು.

೬೫. ಪ್ರಲಯಕಾಲದ ಅಗ್ನಿಯಂತೆ ಜ್ವಲಿಸುವುದೂ ಜ್ವಾಲಾಮಾಲೆಗಳಿಂದ ವ್ಯಾಪ್ತವೂ ಕ್ಷಯ-ವೃದ್ಧಿ ವಿಕಾರಗಳಿಂದ ವರ್ಜಿತವೂ, ಮತ್ತು ಆದಿ-ಮಧ್ಯ-ಅಂತೆ ಗಳಿಂದ ಶೂನ್ಯವೂ ಆದ ಲಿಂಗವು ಪ್ರಾದುರ್ಭವಿಸಿತು.

ತತೋ ಮಾಮಾಹ ಭಗವಾನ್ ಅಧೋ ಗಚ್ಛ ತ್ವಮಾಶು ವೈ ।
ಅಂತಮಸ್ಯ ವಿಜಾನೀವ ಊರ್ಧ್ವಂ ಗಚ್ಛೇಽಹಮಿತ್ಯಜಃ ॥ ೭೬ ॥

ತದಾಶು ಸಮಯಂ ಕೃತ್ವಾ ಗತಾವೂರ್ಧ್ವಮಧಶ್ಚ ತೌ ।
ಪಿತಾಮಹೋಽಪ್ಯಹಂ ನಾಂತಂ ಜ್ಞಾತವಂತೌ ಸಮೇತ್ಯ ಕೈತೌ ॥ ೭೭ ॥

ತತೋ ವಿಸ್ಮಯಮಾಪನ್ನಾ ಭೀತೌ ದೇವಸ್ಯ ಶೂಲಿನಃ ।
ಮಾಯಯಾ ಮೋಹಿತೌ ತಸ್ಯ ಧ್ಯಾಯಂತೌ ವಿಶ್ವಮೀಶ್ವರಮ್ ॥ ೭೮ ॥

ಪ್ರೋಚ್ಚರಂತೌ ಮಹಾನಾದಮೋಂಕಾರಂ ಪರಮಂ ಪದಮ್ ।
ತಂ ಪ್ರಾಂಜಲಿಪುಟೌ ಭೂತ್ವಾ ಶಂಭುಂ ತುಷ್ಟುವತುಃ ಪರಮ್ ॥ ೭೯ ॥

---

೭೬. ಆಗ ಜನ್ಮರಹಿತನಾದ ಬ್ರಹ್ಮದೇವನು ನನಗೆ ಹೀಗೆಂದು ಹೇಳಿದನು :– ನೀನು ಬೇಗ ಅಧೋಭಾಗಕ್ಕೆ ಹೋಗು ; ನಾನು ಉರ್ಧ್ವಭಾಗಕ್ಕೆ ಹೋಗುತ್ತೇನೆ. ನಾವಿಬ್ಬರೂ ಈ ಲಿಂಗದ ತುದಿಯನ್ನು ಹುಡುಕೋಣ.

೭೭. ಆಗ ನಾವಿಬ್ಬರೂ ಸಮಯಬರೆಧವನ್ನು ಮಾಡಿಕೊಂಡು ನಾನು ಅಧೋಭಾಗಕ್ಕೂ ಬ್ರಹ್ಮದೇವನು ಊರ್ಧ್ವಭಾಗಕ್ಕೂ ಪ್ರಯಾಣಮಾಡಿದೆವು. ಆದರೆ ಒಬ್ಬರಿಗೂ ಲಿಂಗದ ಅವಧಿಭಾಗವು ಲಭಿಸದೆ ಹಾಗೆಯೆ ಹಿಂದಕ್ಕೆ ಬಂದು ಸೇರಿದೆವು.

೭೮. ತರುವಾಯ ಅತ್ಯಂತ ವಿಸ್ಮಯಗೊಂಡವರಾಗಿ ತ್ರಿಶೂಲಧಾರಿಯಾದ ಆ ಶಂಕರನ ಮಾಯೆಯಿಂದ ಮೋಹಿಸಲ್ಪಟ್ಟವರಾಗಿ ಭಯಗೊಂಡು ಆ ಈಶ್ವರನನ್ನು ವಿಶ್ವರೂಪನನ್ನಾಗಿ ಧ್ಯಾನಿಸಿದರು.

೭೯. ಮತ್ತು ಮಹಾನಾದ ಮಯವೂ ಪರಮಪದಸ್ವರೂಪವೂ ಆದ ಓಂಕಾರವನ್ನು ಉಚ್ಚರಿಸುತ್ತಾ ಅಂಜಲಿಬದ್ಧರಾಗಿ ನಿಂತು ಸರ್ವೋತ್ತಮನಾದ ಶಂಕರನನ್ನು ಸ್ತುತಿಸಿದರು.

ಬ್ರಹ್ಮ ವಿಷ್ಣೂ ಊಚತುಃ :—

ಅನಾದಿಮೂಲಸಂಸಾರರೋಗವೈದ್ಯಾಯ ಶಂಭವೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ೮೦ ॥

ಪ್ರಲಯಾರ್ಣವಸಂಸ್ಥಾಯ ಪ್ರಲಯೋದ್ಭೂತಿಹೇತವೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ೮೧ ॥

ಜ್ವಾಲಾಮಾಲಾಪ್ರತೀಕಾಯ ಜ್ವಲನಸ್ತಂಭರೂಪಿಣೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ೮೨ ॥

ಆದಿಮಧ್ಯಾಂತಹೀನಾಯ ಸ್ವಭಾವಾಮಲದೀಪ್ತಯೇ ।
ನಮಃ ಶಿವಾಯಾನಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ೮೩ ॥

---

೮೦. ಬ್ರಹ್ಮ ಮತ್ತು ವಿಷ್ಣುಗಳು ಈರೀತಿಯಾಗಿ ಸ್ತುತಿಸಿದರು. ಅನಾದಿಯಾದ ಅಜ್ಞಾನಮೂಲಕವಾಗಿ ಬಂದ ಸಂಸಾರವೆಂಬ ರೋಗಕ್ಕೆ ವೈದ್ಯನಂತಿರುವ ಶಂಕರನಿಗೆ ನಮಸ್ಕಾರವು. ಶಾಂತರೂಪಿಯೂ ಮಂಗಳಕರನೂ ವ್ಯಾಪಕನೂ ಮತ್ತು ಲಿಂಗಮೂರ್ತಿಯೂ ಆದ ಶಂಕರನಿಗೆ ನಮಸ್ಕಾರವು.

೮೧. ಪ್ರಳಯ ಸಮಯದಲ್ಲಿ ಸಮುದ್ರದಲ್ಲಿರುವವನೂ ಪ್ರಳಯಕ್ಕೆ ಕಾರಣಮೂರ್ತಿಯೂ ಶಾಂತರೂಪಿಯೂ ಮಂಗಳಕರನೂ ವ್ಯಾಪಕನೂ ಮತ್ತು ಲಿಂಗಮೂರ್ತಿಯೂ ಆದ ಶಂಕರನಿಗೆ ನಮಸ್ಕಾರವು.

೮೨. ಜ್ವಾಲೆಗಳ ಮಾಲೆಗಳಿಂದ ಮುಚ್ಚಿದ ದೇಹವುಳ್ಳವನೂ ಅಗ್ನಿಯ ಸ್ತಂಭನರೂಪಿಯೂ ಶಾಂತನೂ ಮಂಗಳಕರನೂ ವ್ಯಾಪಕನೂ ಮತ್ತು ಲಿಂಗಮೂರ್ತಿಯೂ ಆದ ಶಂಕರನಿಗೆ ನಮಸ್ಕಾರವು.

೮೩. ಆದಿ - ಮಧ್ಯ - ಅಂತಗಳಿಂದ ಹೀನನೂ ಸ್ವಾಭಾವಿಕವಾಗಿ ನಿರ್ಮಲಮೂರ್ತಿಯೂ ಶಾಂತನೂ ಮಂಗಳಕರನೂ ವ್ಯಾಪಕನೂ ಮತ್ತು ಲಿಂಗಮೂರ್ತಿರೂಪಿಯೂ ಆದ ಶಂಕರನಿಗೆ ನಮಸ್ಕಾರವು.

ಪ್ರಧಾನಪುರುಷೇಶಾಯ ವ್ಯೋಮರೂಪಾಯ ವೇಧಸೇ ।
ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ೮೪ ॥

ನಿರ್ವಿಕಾರಾಯ ಸತ್ಯಾಯ ನಿತ್ಯಾಯಾತುಲತೇಜಸೇ ।
ವೇದಾಂತಸಾರರೂಪಾಯ ಕಾಲರೂಪಾಯ ತೇ ನಮಃ ॥ ೮೫ ॥

ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ।
ಏವಂ ಸಂಸ್ತೂಯಮಾನಸ್ತು ವ್ಯಕ್ತೋ ಭೂತ್ವಾ ಮಹೇಶ್ವರಃ ॥ ೮೬ ॥

ಭಾತಿ ದೇವೋ ಮಹಾಯೋಗೀ ಸೂರ್ಯಕೋಟಿಸಮಪ್ರಭಃ ।
ವಕ್ತ್ರಕೋಟಿಸಹಸ್ರೇಣ ಗ್ರಸಮಾನ ಇವಾಂಬರಮ್ ॥ ೮೭ ॥

---

೮೪. ಪ್ರಧಾನ ಮತ್ತು ಪುರುಷರಿಗೆ ಈಶ್ವರನೂ ಆಕಾಶದಂತೆ ಸೂಕ್ಷ್ಮನೂ ಸೃಷ್ಟಿಕರ್ತನೂ ಶಾಂತಾಕಾರನೂ ಮಂಗಳಮಯನೂ ವ್ಯಾಪಕನೂ ಮತ್ತು ಲಿಂಗ ರೂಪಿಯೂ ಆದ ಮಹಾದೇವನಿಗೆ ನಮಸ್ಕಾರವು.

೮೫. ವಿಕಾರಶೂನ್ಯನೂ ಪರಮಾರ್ಥಸ್ವರೂಪನೂ ಶಾಶ್ವತನೂ ನಿರುಪಮ ತೇಜಃಪೂರ್ಣನೂ ವೇದಾಂತಸಾರರೂಪನೂ ಮತ್ತು ಕಾಲಸ್ವರೂಪಿಯೂ ಆದ ಈಶ್ವರನಿಗೆ ನಮಸ್ಕಾರವು.

೮೬. ಶಾಂತಸ್ವರೂಪನೂ ಮಂಗಳಮಯನೂ ಅಪರಿಚ್ಛಿನ್ನನೂ ಮತ್ತು ಲಿಂಗಾಕಾರವನ್ನು ಧರಿಸಿದವನೂ ಆದ ಶಿವನನ್ನು ವಂದಿಸುವೆವು ಈ ರೀತಿಯಾಗಿ ಸ್ತುತಿಸಲ್ಪಟ್ಟ ಮಹೇಶ್ವರನು ಅವರೆದುರಿಗೆ ಪ್ರತ್ಯಕ್ಷನಾದನು.

೮೭. ಮಹಾಯೋಗಿಯೂ ಕೋಟಿಸೂರ್ಯರಿಗೆ ಸಮಾನವಾದ ಕಾಂತಿ ಯುಳ್ಳವನೂ ಆದ ಮಹಾದೇವನು ಕೋಟಿಸಂಖ್ಯೆಯ ಮುಖಗಳಿಂದ ಆಕಾಶವನ್ನು ನುಂಗುವವನಂತೆ ಪ್ರಕಾಶಿಸಿದನು.

ಸಹಸ್ರಹಸ್ತಚರಣಃ ಸೂರ್ಯಸೋಮಾಗ್ನಿಲೋಚನಃ ।
ಪಿನಾಕಪಾಣಿರ್ಭಗವಾನ್ ಕೃತ್ತಿವಾಸಾಸ್ತ್ರಿಶೂಲಧೃಕ್ ॥ ೮೮ ॥

ವ್ಯಾಲಯಜ್ಞೋಪವೀತಶ್ಚ ಮೇಘದುಂದುಭಿನಿಸ್ವನಃ ।
ಅಥೋವಾಚ ಮಹಾದೇವಃ ಪ್ರೀತೋಽಹಂ ಸುರಸತ್ತಮೌ ॥ ೮೯ ॥

ಪಶ್ಯೇತಂ ಮಾಂ ಮಹಾದೇವಂ ಭಯಂ ಸರ್ವಂ ಪ್ರಮುಚ್ಯತಾಮ್ ।
ಯುವಾಂ ಪ್ರಸೂತೌ ಗಾತ್ರೇಭ್ಯೋ ಮಮ ಪೂರ್ವಂ ಸನಾತನೌ ॥೯೦॥

ಅಯಂ ಮೇ ದಕ್ಷಿಣೇ ಪಾರ್ಶ್ವೇ ಬ್ರಹ್ಮಾ ಲೋಕಪಿತಾಮಹಃ ।
ವಾಮಪಾರ್ಶ್ವೇ ಚ ಮೇ ವಿಷ್ಣುಃ ಪಾಲಕೋ ಹೃದಯೇ ಹರಃ ॥ ೯೧ ॥

---

೮೮. ಮತ್ತು ಸಾವಿರ ಹಸ್ತ-ಪಾದಗಳುಳ್ಳವನೂ ಸೂರ್ಯ ಚಂದ್ರ ಅಗ್ನಿ ರೂಪವಾದ ನೇತ್ರತ್ರಯವುಳ್ಳವನೂ ಪಿನಾಕಾಯುಧವನ್ನು ಧರಿಸಿದವನೂ ಗಜಚರ್ಮಾಂಬರವನ್ನು ಧರಿಸಿದವನೂ ಮತ್ತು ತ್ರಿಶೂಲವನ್ನು ಧರಿಸಿದವನೂ ಆಗಿ ಪ್ರಕಾಶಿಸಿದನು.

೮೯. ಸರ್ಪವೆಂಬ ಯಜ್ಞೋಪವೀತವನ್ನು ಧರಿಸಿದವನೂ ಮೇಘ ಮತ್ತು ದುಂದುಭಿಯಂತೆ ಗಂಭೀರಧ್ವನಿಯುಳ್ಳವನೂ ಆದ ಮಹಾದೇವನು ದೇವತೋತ್ತಮರಾದ ಬ್ರಹ್ಮ ವಿಷ್ಣುಗಳನ್ನು ಕುರಿತು ನಾನು ಸುಪ್ರೀತನಾಗಿರುವೆನೆಂದು ಹೇಳಿದನು.

೯೦. ಬ್ರಹ್ಮ ವಿಷ್ಣುಗಳೇ ! ನನ್ನನ್ನು ಮಹಾದೇವನೆಂದು ತಿಳಿಯಿರಿ. ಸಮಸ್ತ ಭಯವನ್ನೂ ಬಿಡಿರಿ. ನೀವು ಅನಾದಿಕಾಲದಲ್ಲಿ ನನ್ನ ಅವಯವಗಳಿಂದ ಜನಿಸಿದವರಾಗಿದ್ದೀರಿ.

೯೧. ಲೋಕಗಳಿಗೆ ಪಿತಾಮಹನಂತಿರುವ ಈ ಬ್ರಹ್ಮದೇವನು ನನ್ನ ದಕ್ಷಿಣ ಪಾರ್ಶ್ವದಲ್ಲಿ ವಾಸಮಾಡಿರುವನು. ಮತ್ತು ಪ್ರಪಂಚಪಾಲಕನಾದ ಮಹಾವಿಷ್ಣುವು ವಾಮಪಾರ್ಶ್ವದಲ್ಲಿ ವಾಸಮಾಡಿರುವನು. ಹರನು ಹೃದಯದಲ್ಲಿ ಇರುವನು.

ಪ್ರೀತೋಽಹಂ ಯುವಯೋಃ ಸಮ್ಯಗ್ವರಂ ದದ್ಮಿ ಯಥೇಪ್ಸಿತಮ್ ।
ಏವಮುಕ್ತ್ವಾಥ ಮಾಂ ದೇವೋ ಮಹಾದೇವಃ ಸ್ವಯಂ ಶಿವಃ ॥ ೯೨ ॥

ಆಲಿಂಗ್ಯ ದೇವಂ ಬ್ರಹ್ಮಾಣಂ ಪ್ರಸಾದಾಭಿಮುಖೋಽಭವತ್ ।
ತತಃ ಪ್ರಹೃಷ್ಟಮನಸೌ ಪ್ರಣಿಪತ್ಯ ಮಹೇಶ್ವರಮ್ ॥ ೯೩ ॥

ಊಚತುಃ ಪ್ರೇಕ್ಷ್ಯ ತದ್ವಕ್ತ್ರಂ ನಾರಾಯಣಪಿತಾಮಹೌ ।
ಯದಿ ಪ್ರೀತಿಃ ಸಮುತ್ಪನ್ನಾ ಯದಿ ದೇಯೋ ವರೋ ಹಿ ನಃ ॥ ೯೪ ॥

ಭಕ್ತಿರ್ಭವತು ನೌ ನಿತ್ಯಂ ತ್ವಯಿ ದೇವ ಮಹೇಶ್ವರೇ ।
ತತಃ ಸ ಭಗವಾನೀಶಃ ಪ್ರಹಸನ್ ಪರಮೇಶ್ವರಃ ॥ ೯೫ ॥

---

೯೨. ನಾನು ನಿಮ್ಮಿಬ್ಬರಿಗೆ ಸುಪ್ರೀತನಾಗಿರುವೆನು. ನಿಮಗೆ ಇಷ್ಟವಾದ ವರವನ್ನು ಕೊಡುವೆನು. ಹೀಗೆಂದು ಮಹಾದೇವನಾದ ಶಂಕರನು ತಾನಾಗಿ ನನ್ನ ಸ ಕುರಿತು ಹೇಳಿದನು.

೯೩. ಮತ್ತು ಬ್ರಹ್ಮದೇವನನ್ನು ಆಲಿಂಗಿಸಿಕೊಂಡು ಅನುಗ್ರಹಮಾಡಲು ಅಭಿಮುಖನಾದನು, ತರುವಾಯ ವಿಷ್ಣು ಮತ್ತು ಬ್ರಹ್ಮದೇವರು ಸಂತುಷ್ಟವಾದ ಮಾನಸವುಳ್ಳವರಾಗಿ ಈಶ್ವರನನ್ನು ನಮಸ್ಕರಿಸಿದರು.

೯೪. ಮತ್ತು ಪರಮೇಶ್ವರನ ಮುಖವನ್ನು ನೋಡಿ ಹೀಗೆ ಕೇಳಿಕೊಂಡರು: ಸ್ವಾಮಿಯೇ! ನಿನಗೆ ನಮ್ಮಲ್ಲಿ ಪ್ರೀತಿಯುಂಟಾಗಿರುವುದಾದರೆ ನಮಗೆ ಈ ವರವನ್ನು ಅನುಗ್ರಹಿಸು.

೯೫. ಸ್ವಾಮಿಯೇ! ಪರಮೇಶ್ವರನಾದ ನಿನ್ನಲ್ಲಿ ನಮ್ಮಿಬ್ಬರಿಗೆ ಸ್ಥಿರವಾದ ಭಕ್ತಿಯುಂಟಾಗಲಿ. ತರುವಾಯ ಪೂಜ್ಯನೂ ಸರ್ವೇಶ್ವರನೂ ಆದ ಶಂಕರನು ಪ್ರಸನ್ನಮುಖನಾಗಿ ಮಾತನಾಡಿದನು.

ಉವಾಚ ಮಾಂ ಮಹಾದೇವಃ ಪ್ರೀತಂ ಪ್ರೀತೇನ ಚೇತಸಾ ।

ದೇವ ಉವಾಚ :—

ಪ್ರಲಯಸ್ಥಿತಿಸರ್ಗಾಣಾಂ ಕರ್ತಾ ತ್ವಂ ಧರಣೀಪತೇ ॥ ೯೬ ॥

ವತ್ಸ ವತ್ಸ ಹರೇ ವಿಶ್ವಂ ಪಾಲಯೈತಚ್ಚರಾಚರಮ್ ।
ತ್ರಿಧಾ ಭಿನ್ನೋಽಸ್ಮ್ಯಹಂ ವಿಷ್ಣೋ ಬ್ರಹ್ಮವಿಷ್ಣುಹರಾಖ್ಯಯಾ ॥ ೯೭ ॥

ಸರ್ಗರಕ್ಷಾಲಯಗುಣೈರ್ನಿರ್ಗುಣೋಽಪಿ ನಿರಂಜನಃ ।
ಸಮ್ಮೋಹಂ ತ್ಯಜ ಭೋ ವಿಷ್ಣೋ ಪಾಲಯೈನಂ ಪಿತಾಮಹಮ್ ॥೯೮॥

ಭವಿಷ್ಯತ್ಯೇವ ಭಗವಾಂಸ್ತವ ಪುತ್ರಃ ಸನಾತನಃ ।
ಅಹಂ ಹಿ ಭವತೋ ವಕ್ತ್ರಾತ್ ಕಲ್ಪಾದೌ ಸುರರೂಪಧೃಕ್ ॥ ೯೯ ॥

---

೯೬. ಮಹಾದೇವನು ಪ್ರೀತಿಗೊಂಡಿರುವ ನನ್ನನ್ನು ಕುರಿತು ಸಂತೋಷಗೊಂಡ ಮನಸ್ಸಿನಿಂದ ಮಾತನಾಡಿದನು. ಮಹೇಶ್ವರನು ಹೀಗೆ ಹೇಳಿದನು :— ಭೂಮಂಡಲದ ಪಾಲಕನೇ ! ನೀನು ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ರಚಿಸುವವನಾಗಿದ್ದೀಯೆ.

೯೭. ವತ್ಸನೇ ! ಹರಿಯೇ ! ಚರ ಅಚರ ಪ್ರಾಣಿಗಳಿಂದ ಕೂಡಿದ ಈ ವಿಶ್ವವನ್ನು ನೀನು ಪಾಲಿಸು ವಿಷ್ಣುವೇ ! ನಾನು ಬ್ರಹ್ಮ ವಿಷ್ಣು ಶಿವ ಎಂಬ ನಾಮಗಳಿಂದ ಮೂರಾಗಿ ಭಿನ್ನನಾಗಿರುವೆನು.

೯೮. ವಿಷ್ಣುವೇ ! ನಿರ್ಗುಣನೂ ನಿರ್ದೋಷನೂ ಆದ ನಾನು ಸರ್ಗಸ್ಥಿತಿ ಸಂಹಾರಗಳೆಂಬ ಗುಣೋಪಾಧಿಗಳಿಂದ ಭೇದಹೊಂದಿರುವೆನು. ನೀನು ನಿನ್ನ ಸಂಮೋಹವನ್ನು ಬಿಡು. ಪಿತಾಮಹನಾದ ಈ ಬ್ರಹ್ಮನನ್ನು ಪಾಲಿಸು.

೯೯. ಅನಾದಿಯಾದ ಭಗವಂತನು. ನಿನಗೆ ಪುತ್ರನಾಗಿ ಜನಿಸುವನು ನಾನು ಕಲ್ಪದ ಆದಿಯಲ್ಲಿ ಘೋರವಾದ ರೂಪವನ್ನು ಧರಿಸಿ ನಿನ್ನ ಮುಖದಿಂದ ಜನಿಸುತ್ತೇನೆ.

ಶೂಲಪಾಣಿರ್ಭವಿಷ್ಯಾಮಿ ಕ್ರೋಧಜಸ್ತವ ಪುತ್ರಕಃ ।
ಏವಮುಕ್ತ್ವಾ ಮಹಾದೇವೋ ಬ್ರಹ್ಮಾಣಂ ಮುನಿಸತ್ತಮ ॥ ೧೦೦ ॥

ಅನುಗೃಹ್ಯ ಚ ಮಾಂ ದೇವಸ್ತತ್ರೈವಾಂತರಧೀಯತ ।
ತತಃ ಪ್ರಭೃತಿ ಲೋಕೇಷು ಲಿಂಗಾರ್ಚಾ ಸುಪ್ರತಿಷ್ಠಿತಾ ॥ ೧೦೧ ॥

ಲಿಂಗಂ ತತ್ತು ಯತೋ ಬ್ರಹ್ಮನ್ ಬ್ರಹ್ಮಣಃ ಪರಮಂ ವಪುಃ ।
ಏತಲ್ಲಿಂಗಸ್ಯ ಮಾಹಾತ್ಮ್ಯಂ ಭಾಷಿತಂ ತೇ ಮಯಾನಘ ॥ ೧೦೨ ॥

ಏತದ್ಬುಧ್ಯಂತಿ ಯೋಗಜ್ಞಾ ನ ದೇವಾ ನ ಚ ದಾನವಾಃ ।
ಏತದ್ಧಿ ಪರಮಂ ಜ್ಞಾನಮವ್ಯಕ್ತಂ ಶಿವಸಂಜ್ಞಿತಮ್ ॥ ೧೦೩ ॥

---

೧೦೦. ಹಸ್ತದಲ್ಲಿ ತ್ರಿಶೂಲವನ್ನು ಧರಿಸಿದವನಾಗಿ ಕ್ರೋಧದಿಂದ ಜನಿಸಿದ ನಿನ್ನ ಪುತ್ರನಾಗುವೆನು. ಮುನಿಶ್ರೇಷ್ಠನೇ ! ಮಹಾದೇವನು ಬ್ರಹ್ಮದೇವನನ್ನು ಕುರಿತು ಹೀಗೆಂದು ಹೇಳಿದನು.

೧೦೧. ಮತ್ತು ಮಹಾದೇವನು ನನ್ನನ್ನು ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನ ಹೊಂದಿದನು. ಆ ಮೊದಲುಗೊಂಡು ಲೋಕಗಳಲ್ಲಿ ಲಿಂಗರೂಪಿಯಾದ ಶಂಕರನ ಪೂಜೆಯು ಪ್ರತಿಷ್ಠೆ ಹೊಂದಿತು.

೧೦೨. ವಿಪ್ರನೇ! ಆ ಲಿಂಗವೆಂಬುದು ಪರಬ್ರಹ್ಮನ ಉತ್ತಮವಾದ ಮೂರ್ತಿಯು ನಿಷ್ಕಳಂಕನೇ! ಈ ರೀತಿಯಾಗಿ ನನ್ನಿಂದ ನಿನಗೆ ಲಿಂಗದ ಮಾಹಾತ್ಮ್ಯವು ವರ್ಣಿಸಲ್ಪಟ್ಟಿತು.

೧೦೩. ಹೀಗೆ ಅತೀಂದ್ರಿಯವೂ ಶಿವ ಎಂಬ ಸಂಜ್ಞೆಯಿಂದ ಅಂಕಿತವೂ ಪರಮಾರ್ಥವೂ ಆದ ಜ್ಞಾನಯೋಗವನ್ನು ಯೋಗಿಗಳು ತಿಳಿಯುವರು. ದೇವತೆಗಳೂ ದಾನವರೂ ಇದನ್ನು ತಿಳಿಯಲಾರರು.

ಯೇನ ಸೂಕ್ಷ್ಮಮಚಿಂತ್ಯಂ ತತ್ ಪಶ್ಯಂತಿ ಜ್ಞಾನಚಕ್ಷುಷಃ ।
ತಸ್ಮೈ ಭಗವತೇ ನಿತ್ಯಂ ನಮಸ್ಕಾರಂ ಪ್ರಕುರ್ಮಹೇ ॥ ೧೦೪ ॥

ಮಹಾದೇವಾಯ ದೇವಾಯ ದೇವದೇವಾಯ ಲಿಂಗಿನೇ ।
ನಮೋ ವೇದರಹಸ್ಯಾಯ ನೀಲಕಂಠಾಯ ವೈ ನಮಃ ॥ ೧೦೫ ॥

ವಿಭೀಷಣಾಯ ಶಾಂತಾಯ ಸ್ಥಾಣವೇ ಹೇತವೇ ನಮಃ ।
ಬ್ರಹ್ಮಣೇ ವಾಮದೇವಾಯ ತ್ರಿಣೇತ್ರಾಯ ಮಹೀಯಸೇ ॥ ೧೦೬ ॥

ಶಂಕರಾಯ ಮಹೇಶಾಯ ಗಿರೀಶಾಯ ಶಿವಾಯ ಚ ।
ನಮಃ ಕುರುಷ್ವ ಸತತಂ ಧ್ಯಾಯಸ್ವ ಚ ಮಹೇಶ್ವರಮ್ ॥ ೧೦೭ ॥

---

೧೦೪. ಯಾವ ಆತ್ಮಬಲದಿಂದ ಜ್ಞಾನದೃಷ್ಟಿಯುಳ್ಳವರು ಸೂಕ್ಷ್ಮವೂ ಧ್ಯಾನಕ್ಕೆ ಅಗೋಚರವೂ ಆದ ತತ್ತ್ವವನ್ನು ಸಾಕ್ಷಾತ್ಕರಿಸುವರೋ ; ಭಗವಂತನಾದ ಆ ಪರಮಾತ್ಮನಿಗೆ ಯಾವಾಗಲೂ ನಮಸ್ಕಾರವನ್ನು ಮಾಡುತ್ತೇವೆ.

೧೦೫. ಮಹಾದೇವನೂ ಪ್ರಕಾಶಮಾನನೂ ದೇವೋತ್ತಮನೂ ಲಿಂಗ ರೂಪಿಯೂ ವೇದಗಳ ಸಾರಾಂಶಸ್ವರೂಪನೂ ಮತ್ತು ನೀಲವಾದ ಕಂಠವುಳ್ಳವನೂ ಆದ ಈಶ್ವರನಿಗೆ ನಮಸ್ಕಾರವು.

೧೦೬. ಮತ್ತು ಭಯಂಕರಮೂರ್ತಿಯೂ ಶಾಂತಾಕಾರನೂ ಶಾಶ್ವತನೂ ಸರ್ವಕಾರಣನೂ ವೇದರೂಪಿಯೂ ದೇವೋತ್ತಮನೂ ನೇತ್ರತ್ರಯವುಳ್ಳವನೂ ಮತ್ತು ಮಹಾತ್ಮನೂ ಆದ ಈಶ್ವರನಿಗೆ ನಮಸ್ಕಾರವು.

೧೦೭. ಸುಖಕರನೂ ಮಹೇಶ್ವರನೂ ಕೈಲಾಸಾದ್ರಿನಾಥನೂ ಮಂಗಳ ಮಯನೂ ಆದ ಶಿವನಿಗೆ ನೀನು ಯಾವಾಗಲೂ ನಮಸ್ಕಾರಮಾಡು ; ಮತ್ತು ಅಂತಹ ಮಹೇಶ್ವರನನ್ನು ಸಂತತವಾಗಿ ಧ್ಯಾನಿಸು.

ಸಂಸಾರಸಾಗರಾದಸ್ಮಾದಚಿರಾದುದ್ಧರಿಷ್ಯಸಿ ।
ಏವಂ ಸ ವಾಸುದೇವೇನ ವ್ಯಾಕೃತೋ ಮುನಿಪುಂಗವಃ ॥ ೧೦೮ ॥

ಜಗಾಮ ಮನಸಾ ದೇವಮೀಶಾನಂ ವಿಶ್ವತೋಮುಖಮ್ ।
ಪ್ರಣಮ್ಯ ಶಿರಸಾ ಕೃಷ್ಣಮನುಜ್ಞಾತೋ ಮಹಾಮುನಿಃ ॥ ೧೦೯ ॥

ಜಗಾಮ ಚೇಪ್ಸಿತಂ ಶಂಭುಂ ದೇವದೇವಂ ತ್ರಿಶೂಲಿನಮ್ ।
ಯ ಇಮಂ ಶ್ರಾವಯೇನ್ನಿತ್ಯಂ ಲಿಂಗಾಧ್ಯಾಯಮನುತ್ತಮಮ್॥೧೧೦॥

ಶೃಣುಯಾದ್ವಾ ಪಠೇದ್ವಾಪಿ ಸರ್ವಪಾಪೈಃ ಪ್ರಮುಚ್ಯತೇ ।
ಶ್ರುತ್ವಾ ಸಕೃದಪಿ ಹ್ಯೇತತ್ತಪಶ್ಚರಣಮುತ್ತಮಮ್ ॥ ೧೧೧ ॥

---

೧೦೮. ಅದರಿಂದ ನೀನು ಈ ಅಪಾರವಾದ ಸಂಸಾರ ಸಮುದ್ರದಿಂದ ಶೀಘ್ರವಾಗಿ ಉದ್ಧಾರವನ್ನು ಹೊಂದುತ್ತೀಯೆ. ಈ ರೀತಿಯಾಗಿ ವಸುದೇವ ಪುತ್ರನಾದ ಕೃಷ್ಣನಿಂದ ಮಾರ್ಕಂಡೇಯ ಮುನಿಯು ಹೇಳಲ್ಪಟ್ಟನು.

೧೦೯. ಮತ್ತು ,ಮುನಿಯು ಸರ್ವತೋಮುಖನೂ ಸರ್ವೇಶ್ವರನೂ ಆದ ಮಹಾದೇವನನ್ನು ಚಿತ್ತದಲ್ಲಿ ಧ್ಯಾನಿಸಿ ಶಿರಸ್ಸಿನಿಂದ ಕೃಷ್ಣನನ್ನು ಅಭಿವಂದಿಸಿ ಮುಂದಕ್ಕೆ ಹೋಗಲು ಕೃಷ್ಣನ ಅನುಮತಿಯನ್ನು ಪಡೆದನು.

೧೧೦. ಮತ್ತು ಮಹಾಮುನಿಯು ತ್ರಿಶೂಲಧಾರಿಯೂ ದೇವಾಧಿದೇವನೂ ಆದ ಶಂಕರನಲ್ಲಿ ಭಕ್ತಿಯನ್ನಿಟ್ಟನು. ಈ ಸರ್ವೋತ್ತಮವಾದ ಲಿಂಗಮಾಹಾತ್ಮ್ಯಾಧ್ಯಾಯವನ್ನು ಮಾನವನು ಪರರಿಂದ ಶ್ರವಣಮಾಡಿಸುವುದು ಶ್ರೇಯಸ್ಕರವು.

೧೧೧. ಅಥವಾ ಮಾನವನು ಶ್ರವಣ ಪಠನಗಳನ್ನಾದರೂ ಮಾಡಿ ಸಮಸ್ತ ಪಾಪಗಳಿಂದ ನಿರ್ಮುಕ್ತನಾಗುವನು. ಹೀಗೆ ಕೃಷ್ಣನ ತಪಶ್ಚರ್ಯಾರೂಪವಾದ ಉತ್ತಮ ಚರಿತ್ರೆಯನ್ನು ಒಂದುಸಲವಾದರೂ ಶ್ರವಣಮಾಡಬೇಕು.

ವಾಸುದೇವಸ್ಯ ವಿಪ್ರೇಂದ್ರಾಃ ಪಾಪಂ ಮುಂಚತಿ ಮಾನವಃ ।
ಜಪೇದ್ವಾಹರಯನ್ನಿತ್ಯಂ ಬ್ರಹ್ಮಲೋಕೇ ಮಹೀಯತೇ ॥ ೧೧೨ ॥

ಏವಮಾಹ ಮಹಾಯೋಗೀ ಕೃಷ್ಣದ್ವೈಪಾಯನಃ ಪ್ರಭುಃ ॥ ೧೧೩ ॥

ಇತಿ ಶ್ರೀ ಕೂರ್ಮಪುರಾಣೇ ಷಡ್ವಿಂಶೋಽಧ್ಯಾಯಃ

---

೧೧೨. ವಿಪ್ರೇಂದ್ರರೇ! ವಾಸುದೇವನ ತಪಶ್ಚರ್ಯಾಮಾಹಾತ್ಮ್ಯದ ಶ್ರವಣದಿಂದ ಮಾನವನು ಪಾಪವನ್ನು ಕಳೆದುಕೊಳ್ಳುವನು. ಅಥವಾ ಪ್ರತಿನಿತ್ಯವೂ ಇದನ್ನು ಜಪಿಸುವುದರಿಂದ ಮಾನವನು ಬ್ರಹ್ಮಲೋಕದಲ್ಲಿ ಪೂಜ್ಯನಾಗುತ್ತಾನೆ.

೧೧೩. ಹೀಗೆ ಮಹಾಯೋಗಿಯೂ ಸರ್ವಸಮರ್ಥನೂ ಆದ ಕೃಷ್ಣದ್ವೈಪಾಯನ ಮುನಿಯು ಶ್ರೀ ಕೃಷ್ಣನ ತಪಶ್ಚರ್ಯೆ ಮತ್ತು ಲಿಂಗಮಾಹಾತ್ಮ್ಯಗಳಿಂದ ಕೂಡಿದ ಪುರಾಣ ಕಥೆಯನ್ನು ಉಪದೇಶಿಸಿದನು.

( ಕೂರ್ಮಪುರಾಣದಲ್ಲಿ ಇಪ್ಪತ್ತಾರನೆಯ ಅಧ್ಯಾಯವು ಸಮಾಪ್ತವು. )



ಶ್ರೀಃ

# ಕೂರ್ಮ ಪುರಾಣಂ

---

## ಸಪ್ತವಿಂಶೋಽಧ್ಯಾಯಃ.

ಸೂತ ಉವಾಚ :—

ತತೋ ಲಬ್ಧವರಃ ಕೃಷ್ಣೋ ಜಾಂಬವತ್ಯಾಂ ಮಹೇಶ್ವರಾತ್ ।
ಅಜೀಜನನ್ಮಹಾತ್ಮಾನಂ ಸಾಂಬಮಾತ್ಮಜಮುತ್ತಮಮ್ ॥ ೧ ॥

ಪ್ರದ್ಯುಮ್ನಸ್ಯ ಹ್ಯಭೂತ್ಪುತ್ರೋ ಹ್ಯನಿರುದ್ಧೋ ಮಹಾಬಲಃ ।
ತಾವುಭೌ ಗುಣಸಂಪನ್ನೌ ಕೃಷ್ಣಸ್ಯೈವಾಪರೇ ತನೂ ॥ ೨ ॥

---

## ಇಪ್ಪತ್ತೇಳನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :—ಶ್ರೀಕೃಷ್ಣನು ಮಹೇಶ್ವರನಿಂದ ವರವನ್ನು ಹೊಂದಿದ ತರುವಾಯ ಜಾಂಬುವತೀ ದೇವಿಯಲ್ಲಿ ಮಹಾತ್ಮನೂ, ಸಾಂಬ ಎಂಬ ನಾಮಾಂಕಿತನೂ ಆದ ಉತ್ತಮಪುತ್ರನನ್ನು ಹೊಂದಿದನು.

೨. ಪ್ರದ್ಯುಮ್ನನಿಗೆ ಮಹಾಬಲಿಷ್ಠನಾದ ಅನಿರುದ್ಧ ಎಂಬ ಪುತ್ರನಿದ್ದನು ಸಾಂಬ ಮತ್ತು ಅನಿರುದ್ಧರಿಬ್ಬರೂ ಅನೇಕ ಗುಣಸಂಪನ್ನರಾಗಿ ಕೃಷ್ಣನ ಮೂರ್ತ್ಯಂತರ ರೂಪದಿಂದ ಇದ್ದರು.

ಹತ್ವಾ ಚ ಕಂಸಂ ನರಕಮನ್ಯಾಂಶ್ಚ ಶತಶೋಽಸುರಾನ್ ।
ವಿಜಿತ್ಯ ಲೀಲಯಾ ಶಕ್ರಂ ಜಿತ್ವಾ ಬಾಣಂ ಮಹಾಸುರಮ್ ॥ ೩ ॥

ಸ್ಥಾಪಯಿತ್ವಾ ಜಗತ್ಕೃತ್ಸ್ನಂ ಲೋಕೇ ಧರ್ಮಾಂಶ್ಚ ಶಾಶ್ವತಾನ್ ।
ಚಕ್ರೇ ನಾರಾಯಣೋ ಗಂತುಂ ಸ್ವಸ್ಥಾನಂ ಬುದ್ಧಿಮುತ್ತಮಾಮ್॥ ೪ ॥

ಏತಸ್ಮಿನ್ನಂತರೇ ವಿಪ್ರಾ ಭೃಗ್ವಾದ್ಯಾಃ ಕೃಷ್ಣಮೀಶ್ವರಮ್ ।
ಆಜಗ್ಮುರ್ದ್ವಾರಕಾಂ ದ್ರಷ್ಟುಂ ಕೃತಕಾರ್ಯಂ ಸನಾತನಮ್ ॥ ೫ ॥

ಸ ತಾನುವಾಚ ವಿಶ್ವಾತ್ಮಾ ಪ್ರಣಿಪತ್ಯಾಭಿಪೂಜ್ಯ ಚ ।
ಆಸನೇಷೂಪವಿಷ್ಟಾನ್ ವೈ ಸಹ ರಾಮೇಣ ಧೀಮತಾ ॥ ೬ ॥

---

೩. ಶ್ರೀ ಕೃಷ್ಣನು ಕಂಸ ನರಕ ಮತ್ತು ಇತರ ಅನೇಕರಾದ ಅಸುರರನ್ನು ಸಂಹರಿಸಿ ಲೀಲೆಯಿಂದಲೇ ಇಂದ್ರನನ್ನು ಜಯಿಸಿ ಮಹಾಸುರನಾದ ಬಾಣನನ್ನು ಗೆದ್ದನು.

೪. ಮತ್ತು ನಾರಾಯಣನ ಅಪರಾವತಾರವಾದ ಕೃಷ್ಣನು ಸಮಸ್ತ ಜಗತ್ತನ್ನೂ ಸ್ಥಾಪಿಸಿ ಲೋಕದಲ್ಲಿ ಶಾಶ್ವತವಾಗಿ ಧರ್ಮಗಳನ್ನು ನೆಲೆಗೊಳಿಸಿ ತನ್ನ ಶಾಶ್ವತಪದವನ್ನು ಕುರಿತು ಹೋಗಲು ಸಂಕಲ್ಪಿಸಿದನು.

೫. ಈ ಸಮಯದಲ್ಲಿ ಭೃಗುಮುನಿ ಮುಂತಾದ ವಿಪ್ರರು ಕರ್ತವ್ಯವನ್ನು ನೆರವೇರಿಸಿರುವವನೂ ಅನಾದಿಯೂ ಸರ್ವ ನಿಯಾಮಕನೂ ಆದ ಕೃಷ್ಣನನ್ನು ನೋಡಲು ದ್ವಾರಕಾ ನಗರಕ್ಕೆ ಬಂದರು.

೬. ಆಗ ವಿಶ್ವರೂಪಿಯಾದ ಶ್ರೀ ಕೃಷ್ಣನು ಜ್ಞಾನಿಯಾದ ಬಲರಾಮನೊಡನೆ ಆಸನದಲ್ಲಿ ಕುಳಿತಿರುವ ಆ ವಿಪ್ರರನ್ನು ನಮಸ್ಕಾರಪೂರ್ವಕವಾಗಿ ಸತ್ಕರಿಸಿ ಹೀಗೆಂದು ಹೇಳಿದನು.

ಗಮಿಷ್ಯಾಮಿ ಪರಂ ಸ್ಥಾನಂ ಸ್ವಕೀಯಂ ವಿಷ್ಣು ಸಂಜ್ಞಿತಮ್ ।
ಕೃತಾನಿ ಸರ್ವಕಾರ್ಯಾಣಿ ಪ್ರಸೀದಧ್ವಂ ಮುನೀಶ್ವರಾಃ ॥ ೭ ॥

ಇದಂ ಕಲಿಯುಗಂ ಘೋರಂ ಸಂಪ್ರಾಪ್ತಮಧುನಾಶುಭಮ್ ।
ಭವಿಷ್ಯಂತಿ ಜನಾಃ ಸರ್ವೇ ಹ್ಯಸ್ಮಿನ್ ಪಾಪಾನುವರ್ತಿನಃ ॥ ೮ ॥

ಪ್ರವರ್ತಯಧ್ವಂ ವಿಜ್ಞಾನಮಜ್ಞಾನಾಂ ಚ ಹಿತಾವಹಮ್ ।
ಯೇನೇಮೇ ಕಲಿಜೈಃ ಪಾಪೈರ್ಮುಚ್ಯಂತೇ ಹಿ ದ್ವಿಜೋತ್ತಮಾಃ ॥ ೯ ॥

ಯೇ ಮಾಂ ಜನಾಃ ಸಂಸ್ಮರಂತಿ ಕಲೌ ಸಕೃದಪಿ ಪ್ರಭುಮ್ ।
ತೇಷಾಂ ನಶ್ಯತಿ ತತ್ಪಾಪಂ ಭಕ್ತಾನಾಂ ಪುರುಷೋತ್ತಮೇ ॥ ೧೦ ॥

---

೭. ಮುನೀಶ್ವರರೇ ! ನಾನು ನನ್ನ ಸಮಸ್ತ ಕಾರ್ಯಗಳನ್ನೂ ನೆರವೇರಿಸಿರುವೆನು. ಇನ್ನುಮುಂದೆ ವಿಷ್ಣು ಎಂಬ ಸಂಜ್ಞಾಂಕಿತವಾದ ನನ್ನ ಉತ್ತಮಸ್ಥಾನಕ್ಕೆ ನಾನು ಹೋಗುವೆನು. ನೀವೆಲ್ಲರೂ ಅನುಗ್ರಹಮಾಡಿರಿ.

೮. ಈಗ ಅಮಂಗಳಪ್ರಾಯವಾದ ಈ ಘೋರ ಕಲಿಯುಗವು ಪ್ರಾಪ್ತವಾಗಿರುವುದು. ಈ ಯುಗದಲ್ಲಿ ಸಮಸ್ತ ಜನರೂ ಪಾಪಕರ್ಮವನ್ನು ಅನುವರ್ತಿಸುವವರಾಗುತ್ತಾರೆ.

೯. ನೀವು ಈ ಸಮಯದಲ್ಲಿ ಅಜ್ಞಾನಿಗಳಿಗೆ ಹಿತವನ್ನು ಉಂಟುಮಾಡುವ ಜ್ಞಾನಯೋಗವನ್ನು ಪ್ರಚಾರಗೊಳಿಸಿ. ದ್ವಿಜೋತ್ತಮರೇ ! ಜ್ಞಾನಯೋಗದಿಂದ ಮಾನವರು ಕಲಿಯುಗದ ಪಾಪಗಳಿಂದ ಬಿಡಲ್ಪಡುವರು.

೧೦. ಈ ಕಲಿಯುಗದಲ್ಲಿ ಪ್ರಭುವಾದ ನನ್ನನ್ನು ಯಾವ ಮಾನವರು ಒಂದು ಸಲವಾದರೂ ಸ್ಮರಿಸುವರೋ ; ಪುರುಷೋತ್ತಮನಲ್ಲಿ ಭಕ್ತರಾದ ಆ ಮಾನವರ ಸಮಸ್ತಪಾಪವೂ ನಾಶವಾಗುವುದು.

ಯೇಽರ್ಚಯಿಷ್ಯಂತಿ ಮಾಂ ಭಕ್ತ್ಯಾ ನಿತ್ಯಂ ಕಲಿಯುಗೇ ದ್ವಿಜಾಃ ।
ವಿಧಿನಾ ವೇದದೃಷ್ಟೇನ ತೇ ಗಮಿಷ್ಯಂತಿ ತತ್ಪದಮ್ ॥ ೧೧ ॥

ಯೇ ಬ್ರಾಹ್ಮಣಾ ವಂಶಜಾತಾ ಯುಷ್ಮಾಕಂ ವೈ ಸಹಸ್ರಶಃ ।
ತೇಷಾಂ ನಾರಾಯಣೇ ಭಕ್ತಿರ್ಭವಿಷ್ಯತಿ ಕಲೌ ಯುಗೇ ॥ ೧೨ ॥

ಪರಾತ್ಪರತರಂ ಯಾಂತಿ ನಾರಾಯಣಪರಾ ಜನಾಃ ।
ನ ತೇ ತತ್ರ ಗಮಿಷ್ಯಂತಿ ಯೇ ದ್ವಿಷಂತಿ ಮಹೇಶ್ವರಮ್ ॥ ೧೩ ॥

ಧ್ಯಾನಂ ಯೋಗಸ್ತಪಸ್ತಪ್ತಂ ಜ್ಞಾನಂ ಯಜ್ಞಾದಿಕೋ ವಿಧಿಃ ।
ತೇಷಾಂ ವಿನಶ್ಯತಿ ಕ್ಷಿಪ್ರಂ ಯೇ ನಿಂದಂತಿ ಮಹೇಶ್ವರಮ್ ॥ ೧೪ ॥

---

೧೧. ಈ ಕಲಿಯುಗದಲ್ಲಿ ಯಾವ ದ್ವಿಜರು ಪ್ರತಿದಿನದಲ್ಲಿಯೂ ಭಕ್ತಿಯಿಂದ ಮತ್ತು ವೇದೋಕ್ತವಾದ ವಿಧಾನದಿಂದ ನನ್ನನ್ನು ಅರ್ಚಿಸುವರೋ, ಅವರು ಆ ಪರಮಪದವನ್ನು ಹೊಂದುವರು.

೧೨. ಮತ್ತು ಈ ಕಲಿಯುಗದಲ್ಲಿ ಯಾವ ಸಹಸ್ರಾರು ಬ್ರಾಹ್ಮಣರು ನಿಮ್ಮ ಪವಿತ್ರವಂಶದಲ್ಲಿ ಜನಿಸುವರೋ ; ಅವರಿಗೆ ಶ್ರೀಮನ್ನಾರಾಯಣನಲ್ಲಿ ಭಕ್ತಿ ಯುಂಟಾಗುವುದು.

೧೩. ನಾರಾಯಣನಲ್ಲಿ ಪರಮಭಕ್ತರಾದ ಜನರು ಶ್ರೇಷ್ಠಕ್ಕಿಂತ ಶ್ರೇಷ್ಠವಾದ ಪದವನ್ನು ಹೊಂದುತ್ತಾರೆ. ಆದರೆ ಮಹೇಶ್ವರನನ್ನು ದ್ವೇಷಿಸುವ ಪಾಪಿ ಜನಗಳು ಪರಮ ಪದವಿಗೆ ಹೋಗುವುದಿಲ್ಲ.

೧೪. ಯಾವ ಮಾನವರು ಮಹೇಶ್ವರನನ್ನು ನಿಂದಿಸುವರೋ ; ಅವರು ಆಚರಿಸಿದ ಧ್ಯಾನಯೋಗ-ತಪಸ್ಸು-ಜ್ಞಾನ ಮತ್ತು ಯಜ್ಞಾದಿಕರ್ಮ ಮುಂತಾದ ಸಮಸ್ತ ಸತ್ಕರ್ಮಗಳು ಬೇಗ ನಾಶವಾಗುವುದು.

ಯೋ ಮಾಂ ಸಮರ್ಚಯೇನ್ನಿತ್ಯಮೇಕಾಂತಂ ಭಾವಮಾಶ್ರಿತಃ ।
ವಿನಿಂದನ್ ದೇವಮೀಶಾನಂ ಸ ಯಾತಿ ನರಕಾಯುತಮ್ ॥೧೫ ॥

ತಸ್ಮಾತ್ ಸಂಪರಿಹರ್ತವ್ಯಾ ನಿಂದಾ ಪಶುಪತೇರ್ದ್ವಿಜಾಃ ।
ಕರ್ಮಣಾ ಮನಸಾ ವಾಚಾ ಮದ್ಭಕ್ತೇಷ್ವಪಿ ಯತ್ನತಃ ॥ ೧೬ ॥

ಯೇ ಚ ದಕ್ಷಾಧ್ವರೇ ಶಪ್ತಾ ದಧೀಚೇನ ದ್ವಿಜೋತ್ತಮಾಃ ।
ಭವಿಷ್ಯಂತಿ ಕಲೌ ಭಕ್ತೈಃ ಪರಿಹಾರ್ಯಾಃ ಪ್ರಯತ್ನತಃ ॥ ೧೭ ॥

ದ್ವಿಷಂತೋ ದೇವಮೀಶಾನಂ ಯುಷ್ಮಾಕಂ ವಂಶಸಂಭವಾಃ ।
ಶಪ್ತಾಶ್ಚ ಗೌತಮೇನೋರ್ವ್ಯಾಂ ನ ಸಂಭಾಷ್ಯಾ ದ್ವಿಜೋತ್ತಮೈಃ ॥೧೮॥

---

೧೫. ಯಾವ ಮಾನವನು ಸರ್ವೇಶ್ವರನಾದ ಶಂಕರನನ್ನು ನಿಂದಿಸುತ್ತಾ ಅವ್ಯಭಿಚಾರಿಯಾದ ಭಕ್ತಿಭಾವವನ್ನು ಅವಲಂಬಿಸಿ ನಿತ್ಯವಲ್ಲಿ ನನ್ನನ್ನು ಅರ್ಚಿಸುವನೋ ; ಅವನು ಅಯುತಸಂಖ್ಯೆಯ ನರಕಯಾತನೆಗಳನ್ನು ಅನುಭವಿಸುವನು.

೧೬. ದ್ವಿಜರೇ ! ಆದ್ದರಿಂದ ಪಶುಪತಿಯಾದ ಈಶ್ವರನ ವಿಷಯದಲ್ಲಿ ಕರ್ಮ-ಮಾನಸ ಮತ್ತು ವಾಗಿಂದ್ರಿಯಗಳಿಂದ ಸಂಭವಿಸುವ ಸರ್ವವಿಧವಾದ ನಿಂದೆಯು ವರ್ಜಿಸಲ್ಪಡಬೇಕು. ನನ್ನ ಭಕ್ತರ ನಿಂದೆಯನ್ನು ಯತ್ನದಿಂದ ತ್ಯಜಿಸಬೇಕು.

೧೭. ದಕ್ಷಬ್ರಹ್ಮನ ಯಜ್ಞಸಮಯದಲ್ಲಿ ದಧೀಚಮುನಿಯಿಂದ ಶಪಿಸಲ್ಪಟ್ಟ ದ್ವಿಜೋತ್ತಮರು ಕಲಿಯುಗದಲ್ಲಿ ಜನ್ಮವೆತ್ತುವರು. ಭಕ್ತರು ಅಂತಹವರ ಸಂಗವನ್ನು ಪ್ರಯತ್ನದಿಂದ ದೂರಮಾಡಬೇಕು.

೧೮. ನಿಮ್ಮ ವಂಶದಲ್ಲಿ ಸಂಭೂತರಾಗಿ ಸರ್ವೇಶ್ವರನಾದ ಶಿವನನ್ನು ದ್ವೇಷಿಸುವವರೂ ಗೌತಮಮುನಿಯಿಂದ ಶಪಿಸಲ್ಪಟ್ಟವರೂ ಆದ ವಿಪ್ರರು ಭೂಮಿಯಲ್ಲಿ ದ್ವಿಜೋತ್ತಮರಿಂದ ಸಂಭಾಷಣೆಗೆ ಅರ್ಹರಲ್ಲ.

ಏವಮುಕ್ತಾಶ್ಚ ಕೃಷ್ಣೇನ ಸರ್ವೇ ತೇ ವೈ ಮಹರ್ಷಯಃ ।
ಓಮಿತ್ಯುಕ್ತ್ವಾ ಯಯುಸ್ತೂರ್ಣಂ ಸ್ವಾನಿ ಸ್ಥಾನಾನಿ ಸತ್ತಮಾಃ ॥೧೯॥

ತತೋ ನಾರಾಯಣಃ ಕೃಷ್ಣೋ ಲೀಲಯೈವ ಜಗನ್ಮಯಃ ।
ಸಂಹೃತ್ಯ ಸ್ವಕುಲಂ ಸರ್ವಂ ಯಯೌ ತತ್ಪರಮಂ ಪದಮ್ ॥ ೨೦ ॥

ಇತ್ಯೇಷ ವಃ ಸಮಾಸೇನ ರಾಜ್ಞಾಂ ವಂಶಃ ಸುಕೀರ್ತಿತಃ ।
ನ ಶಕ್ಯೋ ವಿಸ್ತರಾದ್ವಕ್ತುಂ ಕಿಂ ಭೂಯಃ ಶ್ರೋತುಮಿಚ್ಛಥ ॥ ೨೧ ॥

ಯಃ ಪಠೇಚ್ಛೃಣುಯಾದ್ವಾಪಿ ವಂಶಾನಾಂ ಕಥನಂ ಶುಭಮ್ ।
ಸರ್ವಪಾಪವಿನಿರ್ಮುಕ್ತಃ ಸ್ವರ್ಗಲೋಕೇ ಮಹೀಯತೇ ॥ ೨೨ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತವಿಂಶೋಽಧ್ಯಾಯಃ.

---

೧೯. ಸಾಧೂತ್ತಮರೇ ! ಕೃಷ್ಣನಿಂದ ಈರೀತಿಯಾಗಿ ಹೇಳಲ್ಪಟ್ಟ ಆ ಸಮಸ್ತ ಮಹರ್ಷಿಗಳು ಹಾಗೆ ಆಗಲೆಂದು ಹೇಳಿ ಅಲ್ಲಿಂದ ಬೇಗ ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು.

೨೦. ತರುವಾಯ ಪರಮಾತ್ಮರೂಪಿಯೂ ಜಗನ್ಮಯನೂ ಆದ ಶ್ರೀಕೃಷ್ಣನು ತನ್ನ ಸಮಸ್ತ ವಂಶವನ್ನು ಲೀಲೆಯಿಂದ ಸಂಹಾರಮಾಡಿ ತನ್ನ ಪರಮಪದವನ್ನು ಕುರಿತು ಹೊರಟುಹೋದನು.

೨೧. ಮುನಿವರ್ಯರೇ ! ಈರೀತಿಯಾಗಿ ನನ್ನಿಂದ ರಾಜರ ವಂಶಾವಳಿಯು ಸಂಗ್ರಹವಾಗಿ ನಿಮಗೆ ಕೀರ್ತಿಸಲ್ಪಟ್ಟಿದೆ. ಇದನ್ನು ವಿಸ್ತಾರವಾಗಿ ವರ್ಣಿಸುವುದು ಅಶಕ್ಯವು. ಈಗ ಮತ್ತೇನು ಕೇಳಬೇಕೆಂದಿರುವಿರಿ ?

೨೨. ಹೀಗೆ ಮಂಗಳಕರವಾದ ವಂಶಗಳ ಕೀರ್ತನವನ್ನು ಪಠನ-ಶ್ರವಣ ಮಾಡಿದ ಮಾನವನು ಸಮಸ್ತ ಪಾಪಗಳಿಂದ ದೂರಬಿಡಲ್ಪಟ್ಟವನಾಗಿ ಸ್ವರ್ಗ ಲೋಕದಲ್ಲಿ ಪೂಜ್ಯನಾಗುವನು.

( ಕೂರ್ಮಪುರಾಣದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು ಸಮಾಪ್ತವು. )

ಶ್ರೀಃ

# ಕೂರ್ಮಪುರಾಣಂ



## ಅಷ್ಟಾವಿಂಶೋಽಧ್ಯಾಯಃ.

**ಋಷಯ ಊಚುಃ :—**

**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।**
**ಏಷಾಂ ಪ್ರಭಾವಂ ಸೂತಾದ್ಯ ಕಥಯಸ್ವ ಸಮಾಸತಃ ॥ ೧ ॥**

**ಸೂತ ಉವಾಚ :—**

**ಗತೇ ನಾರಾಯಣೇ ಕೃಷ್ಣೇ ಸ್ವಮೇವ ಪರಮಂ ಪದಮ್ ।**
**ಪಾರ್ಥಃ ಪರಮಧರ್ಮಾತ್ಮಾ ಪಾಂಡವಃ ಶತ್ರುತಾಪನಃ ॥ ೨ ॥**

---

## ಇಪ್ಪತ್ತೆಂಟನೆಯ ಅಧ್ಯಾಯವು.

೧. ಮಹರ್ಷಿಗಳು ಹೀಗೆಂದು ಹೇಳಿದರು :— ಸೂತಮುನಿಯೇ ! ಕೃತ-ತ್ರೇತಾ-ದ್ವಾಪರ-ಕಲಿಯೆಂದು ನಾಲ್ಕುಯುಗಗಳು ಇರುತ್ತವೆಯಲ್ಲವೆ ; ಈ ಯುಗಗಳ ಪ್ರಭಾವವನ್ನು ನೀನು ಈಗ ಸಂಗ್ರಹವಾಗಿ ವರ್ಣಿಸು.

೨. ಸೂತಮುನಿಯು ಹೀಗೆಂದು ಹೇಳಿದನು :—ನಾರಾಯಣನ ಅಂಶಾವತಾರಿಯಾದ ಶ್ರೀ ಕೃಷ್ಣನು ತನ್ನ ಪರಮಪದವಿಗೆ ಹೋಗಲಾಗಿ ಪರಮಧಾರ್ಮಿಕನೂ ಶತ್ರುಗಳನ್ನು ತಪಿಸುವವನೂ ಪಾಂಡುಪುತ್ರನೂ ಆದ ಅರ್ಜುನನು ಅತಿಯಾಗಿ ಶೋಕಪಟ್ಟನು.

ಕೃತ್ವಾ ಚೈವೋತ್ತರವಿಧಿಂ ಶೋಕೇನ ಮಹತಾ ವೃತಃ ।
ಅಪಶ್ಯತ್ಪಥಿ ಗಚ್ಛಂತಂ ಕೃಷ್ಣದ್ವೈಪಾಯನಂ ಮುನಿಮ್ ॥ ೩ ॥

ಶಿಷ್ಯೈಃ ಪ್ರಶಿಷ್ಯೈರಭಿತಃ ಸಂವೃತಂ ಬ್ರಹ್ಮವಾದಿನಮ್ ।
ಪಪಾತ ದಂಡವದ್ಭೂಮೌ ತ್ಯಕ್ತ್ವಾ ಶೋಕಂ ತದಾರ್ಜುನಃ ॥ ೪ ॥

ಉವಾಚ ಪರಮಪ್ರೀತ್ಯಾ ಕಸ್ಮಾದೇತನ್ಮಹಾಮುನೇ ।
ಇದಾನೀಂ ಗಚ್ಛಸಿ ಕ್ಷಿಪ್ರಂ ಕಂ ವಾ ದೇಶಂ ಪ್ರತಿ ಪ್ರಭೋ ॥ ೫ ॥

ಸಂದರ್ಶನಾದ್ವೈ ಭವತಃ ಶೋಕೋ ಮೇ ವಿಪುಲೋ ಗತಃ ।
ಇದಾನೀಂ ಮಮ ಯತ್ಕಾರ್ಯಂ ಬ್ರೂಹಿ ಪದ್ಮದಲೇಕ್ಷಣ ॥ ೬ ॥

---

೩. ಮತ್ತು ಮಹಾಶೋಕದಿಂದ ಆವರಿಸಲ್ಪಟ್ಟವನಾಗಿ ಉತ್ತರಕ್ರಿಯಾ ವಿಧಿಯನ್ನು ನೆರವೇರಿಸಿ ಮಾರ್ಗದಲ್ಲಿ ಹೋಗುತ್ತಿದ್ದ ಕೃಷ್ಣದ್ವೈಪಾಯನ ಮುನಿಯನ್ನು ಆಕಸ್ಮಿಕವಾಗಿ ನೋಡಿದನು.

೪. ಅನೇಕಮಂದಿ ಶಿಷ್ಯ ಮತ್ತು ಪ್ರಶಿಷ್ಯರಿಂದ ಪಾರ್ಶ್ವದಲ್ಲಿ ಸುತ್ತಲ್ಪಟ್ಟವನಾಗಿ ಹೋಗುತ್ತಿರುವ ಆ ಬ್ರಹ್ಮವಾದಿಯನ್ನು ನೋಡಿ ಆಗ ಅರ್ಜುನನು ಶೋಕವನ್ನು ಬಿಟ್ಟು ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕಾರಮಾಡಿದನು.

೫. ಮತ್ತು ಪರಮಪ್ರೇಮದಿಂದ ಮಾತನಾಡಿದನು. ಪ್ರಭುವಾದ ಮಹಾಮುನಿಯೇ! ನೀನು ಈಗ ಶೀಘ್ರವಾಗಿ ಯಾವ ಸ್ಥಳದಿಂದ ಬಂದಿರುತ್ತೀಯೆ ? ಈಗ ಯಾವ ದೇಶವನ್ನು ಕುರಿತು ಶೀಘ್ರವಾಗಿ ಗಮನಮಾಡುತ್ತಿದ್ದೀಯೆ ?

೬. ತಾವರೆಯದಳದಂತೆ ಸುಂದರವಾದ ದೃಷ್ಟಿಯುಳ್ಳ ಮುನಿಯೇ! ನಿನ್ನ ಸಂದರ್ಶನದಿಂದ ನನ್ನ ಅಪಾರವಾದ ಶೋಕವು ಹೋಗಿರುವುದು. ನೀನು ಈಗ ನನ್ನ ಉಚಿತವಾದ ಕರ್ತವ್ಯವನ್ನು ಉಪದೇಶಿಸು.

ತಮುವಾಚ ಮಹಾಯೋಗೀ ಕೃಷ್ಣದ್ವೈಪಾಯನಃ ಸ್ವಯಮ್ ।
ಉಪವಿಶ್ಯ ನದೀತೀರೇ ಶಿಷ್ಯೈಃ ಪರಿವೃತೋ ಮುನಿಃ ॥ ೭ ॥

ಇತಿ ಶ್ರೀ ಕೂರ್ಮಪುರಾಣೇ ಅಷ್ಟಾವಿಂಶೋಽಧ್ಯಾಯಃ.

---

೭. ಆಗ ಮಹಾಯೋಗಿಯೂ, ಶಿಷ್ಯಜನರಿಂದ ಸುತ್ತಲ್ಪಟ್ಟವನೂ ಆದ ಕೃಷ್ಣದ್ವೈಪಾಯನಮುನಿಯು ನದಿಯ ತೀರದಲ್ಲಿ ಕುಳಿತುಕೊಂಡು ಅರ್ಜುನನ್ನು ಕುರಿತು ಉಪದೇಶಿಸಿದನು.

( ಕೂರ್ಮಪುರಾಣದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತವು )



ಶ್ರೀಃ

# ಕೂರ್ಮಪುರಾಣಂ

## ಏಕೋನ ತ್ರಿಂಶೋಽಧ್ಯಾಯಃ.

ವ್ಯಾಸ ಉವಾಚ:—

ಇದಂ ಕಲಿಯುಗಂ ಘೋರಂ ಸಂಪ್ರಾಪ್ತಂ ಪಾಂಡುನಂದನ ।
ತತೋ ಗಚ್ಛಾಮಿ ದೇವಸ್ಯ ಪುರೀಂ ವಾರಾಣಸೀಂ ಶುಭಾಮ್ ॥ ೧ ॥

ಅಸ್ಮಿನ್ ಕಲಿಯುಗೇ ಘೋರೇ ಲೋಕಾಃ ಪಾಪಾನುವರ್ತಿನಃ ।
ಭವಿಷ್ಯಂತಿ ಮಹಾಬಾಹೋ ವರ್ಣಾಶ್ರಮವಿವರ್ಜಿತಾಃ ॥ ೨ ॥

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ವ್ಯಾಸಮುನಿಯು ಹೇಳಿದನು :— ಪಾಂಡುಪುತ್ರನಾದ ಅರ್ಜುನನೇ ! ಈಗ ಘೋರವಾದ ಕಲಿಯುಗವು ಪ್ರಾಪ್ತವಾಗಿರುವುದು. ಆದುದರಿಂದ ಮಹಾದೇವನ ಪುರವಾದ, ಮಂಗಳಕರವಾದ ವಾರಾಣಸೀ ನಗರಕ್ಕೆ ಹೋಗುತ್ತಿದ್ದೇನೆ.

೨. ಮಹಾಬಾಹು ಬಲಶಾಲಿಯಾದ ಅರ್ಜುನನೇ ! ಘೋರವಾದ ಈ ಕಲಿಯುಗದಲ್ಲಿ ಜನರೆಲ್ಲರೂ ವರ್ಣಾಶ್ರಮಧರ್ಮವರ್ಜಿತರೂ ಮಹಾಪಾಪವನ್ನು ಅನುವರ್ತಿಸುವವರೂ ಆಗುತ್ತಾರೆ.

ನಾನ್ಯತ್ಪಶ್ಯಾಮಿ ಜಂತೂನಾಂ ಮುಕ್ತ್ವಾ ವಾರಾಣಸೀಂ ಪುರೀಮ್ ।
ಸರ್ವಪಾಪೋಶಮನಂ ಪ್ರಾಯಶ್ಚಿತ್ತಂ ಕಲೌ ಯುಗೇ ॥ ೩ ॥

ಕೃತಂ ತ್ರೇತಾ ದ್ವಾಪರಂ ಚ ಸರ್ವೇಷ್ವೇತೇಷು ವೈ ನರಾಃ ।
ಭವಿಷ್ಯಂತಿ ಮಹಾತ್ಮಾನೋ ಧಾರ್ಮಿಕಾಃ ಸತ್ಯವಾದಿನಃ ॥ ೪ ॥

ತ್ವಂ ಹಿ ಲೋಕೇಷು ವಿಖ್ಯಾತೋ ಧೃತಿಮಾನ್ ಜನವತ್ಸಲಃ ।
ಪಾಲಯಾದ್ಯ ಪರಂ ಧರ್ಮಂ ಸ್ವಕೀಯಂ ಮುಚ್ಯಸೇ ಭಯಾತ್ ॥ ೫ ॥

ಏವಮುಕ್ತೋ ಭಗವತಾ ಪಾರ್ಥಃ ಪರಪುರಂಜಯಃ ।
ಪೃಷ್ಟವಾನ್ ಪ್ರಣಿಪತ್ಯಾಸೌ ಯುಗಧರ್ಮಾನ್ ದ್ವಿಜೋತ್ತಮಾಃ॥ ೬ ॥

---

೩. ಇಂತಹ ಪ್ರಾಣಿಗಳಿಗೆ ಈ ಕಲಿಯುಗದಲ್ಲಿ ವಾರಾಣಸೀ ನಗರವಾಸವನ್ನು ಬಿಟ್ಟು ಸಮಸ್ತ ಪಾಪ ಭಂಜಕವಾದ ಮತ್ತಾವ ಪ್ರಾಯಶ್ಚಿತ್ತವನ್ನೂ ನಾನು ಅರಿಯೆನು.

೪. ಕೃತ-ತ್ರೇತಾ-ಮತ್ತು ದ್ವಾಪರವೆಂಬ ಮೂರು ಯುಗಗಳಲ್ಲಿ ಮಾನವರು ಮಹಾತ್ಮರೂ ಧಾರ್ಮಿಕರೂ ಮತ್ತು ಸತ್ಯವಾದಿಗಳೂ ಆಗಿ ಇರುತ್ತಾರೆ.

೫. ನೀನು ಧೈರ್ಯಶಾಲಿಯೂ ಜನರಲ್ಲಿ ವಾತ್ಸಲ್ಯವುಳ್ಳವನೂ ಆಗಿ ಲೋಕಗಳಲ್ಲಿ ವಿಖ್ಯಾತನಾಗಿರುತ್ತೀಯೆ. ನೀನು ನಿನ್ನ ಉತ್ತಮವಾದ ಸ್ವಧರ್ಮವನ್ನು ಪಾಲಿಸು. ಭಯದಿಂದ ಮುಕ್ತನಾಗುತ್ತಿಯೆ.

೬. ದ್ವಿಜೋತ್ತಮರೇ ! ಭಗವಂತನಾದ ವ್ಯಾಸಮುನಿಯಿಂದ ಈರೀತಿಯಾಗಿ ಹೇಳಲ್ಪಟ್ಟ ಶುತ್ರುನಿಗ್ರಹಿಯಾದ ಪಾರ್ಥನು ವ್ಯಾಸಮುನಿಗೆ ನಮಸ್ಕರಿಸಿ ಯುಗಧರ್ಮಗಳನ್ನು ಹೇಳುವಂತೆ ಪ್ರಶ್ನೆ ಮಾಡಿದನು.

ತಸ್ಮೈ ಪ್ರೋವಾಚ ಸಕಲಂ ಮುನಿಃ ಸತ್ಯವತೀಸುತಃ ।
ಪ್ರಣಮ್ಯ ದೇವಮೀಶಾನಂ ಯುಗಧರ್ಮಾನ್ ಸನಾತನಾನ್ ॥ ೭ ॥

ವ್ಯಾಸ ಉವಾಚ :—

ವಕ್ಷ್ಯಾಮಿ ತೇ ಸಮಾಸೇನ ಯುಗಧರ್ಮಾನ್ನರೇಶ್ವರ ।
ನ ಶಕ್ಯತೇ ಮಯಾ ರಾಜನ್ ವಿಸ್ತರೇಣಾಭಿಭಾಷಿತುಮ್ ॥ ೮ ॥

ಆದ್ಯಂ ಕೃತಯುಗಂ ಪ್ರೋಕ್ತಂ ತತಸ್ತ್ರೇತಾಯುಗಂ ಬುಧೈಃ ।
ತೃತೀಯಂ ದ್ವಾಪರಂ ಪಾರ್ಥ ಚತುರ್ಥಂ ಕಲಿರುಚ್ಯತೇ ॥ ೯ ॥

ಧ್ಯಾನಂ ತಪಃ ಕೃತಯುಗೇ ತ್ರೇತಾಯಾಂ ಜ್ಞಾನಮುಚ್ಯತೇ ।
ದ್ವಾಪರೇ ಯಜ್ಞಮೇವಾಹುರ್ದಾನಮೇಕಂ ಕಲೌ ಯುಗೇ ॥ ೧೦ ॥

---

೭. ಆಗ ಸರ್ವೇಶ್ವರನಾದ ಮಹಾದೇವನನ್ನು ನಮಸ್ಕರಿಸಿ ಸತ್ಯವತೀ ಪುತ್ರನಾದ ವ್ಯಾಸಮುನಿಯು ಅವನಿಗೆ ಸಮಸ್ತ ವಿಷಯಗಳನ್ನು ವಿವರಿಸುತ್ತಾ ಅನಾದಿಯಾದ ಯುಗಧರ್ಮಗಳನ್ನು ವಿವರಿಸಿದನು.

೮. ವ್ಯಾಸಮುನಿಯು ಹೀಗೆಂದು ಹೇಳಿದನು :— ಪ್ರಜೆಗಳ ಈಶ್ವರನಾದ ರಾಜನೇ ! ನಿನಗೆ ಸಂಗ್ರಹವಾಗಿ ಸಕಲ ಯುಗಧರ್ಮಗಳನ್ನೂ ನಿರೂಪಿಸುತ್ತೇನೆ ; ನನ್ನಿಂದ ವಿಸ್ತಾರವಾಗಿ ಯುಗಧರ್ಮಗಳನ್ನು ಹೇಳಲು ಸಾಧ್ಯವಿಲ್ಲವು.

೯. ಪಾರ್ಥನೇ ! ಯುಗಗಳಲ್ಲಿ ಮೊದಲನೆಯದು ಕೃತಯುಗವೆಂದೂ, ಎರಡನೆಯದು ತ್ರೇತಾಯುಗವೆಂದೂ, ಮೂರನೆಯದು ದ್ವಾಪರಯುಗವೆಂದೂ ಮತ್ತು ನಾಲ್ಕನೆಯದು ಕಲಿಯುಗವೆಂದೂ ಬುಧರಿಂದ ಹೇಳಲ್ಪಟ್ಟಿದೆ.

೧೦. ಕೃತಯುಗದಲ್ಲಿ ಧ್ಯಾನವು ತಪಸ್ಸಾಗಿರುವುದು. ತ್ರೇತಾಯುಗದಲ್ಲಿ ಜ್ಞಾನವೇ ತಪಸ್ಸು, ದ್ವಾಪರಯುಗದಲ್ಲಿ ಯಜ್ಞವು ತಪಸ್ಸೆಂದು ಹೇಳುವರು. ಕಲಿಯುಗದಲ್ಲಿ ದಾನವೊಂದೇ ತಪವಾಗಿ ಹೇಳಲ್ಪಟ್ಟಿದೆ.

ಬ್ರಹ್ಮಾ ಕೃತಯುಗೇ ದೇವಸ್ತ್ರೇತಾಯಾಂ ಭಗವಾನ್ ರವಿಃ ।
ದ್ವಾಪರೇ ದೈವತಂ ವಿಷ್ಣುಃ ಕಲೌ ದೇವೋ ಮಹೇಶ್ವರಃ ॥ ೧೧ ॥

ಬ್ರಹ್ಮಾ ವಿಷ್ಣುಸ್ತಥಾ ಸೂರ್ಯಃ ಸರ್ವ ಏವ ಕಲಾವಪಿ ।
ಪೂಜ್ಯಂತೇ ಭಗವಾನ್ ರುದ್ರಶ್ಚತುರ್ಷ್ವಪಿ ಪಿನಾಕಧೃಕ್ ॥ ೧೨ ॥

ಆದ್ಯೇ ಕೃತಯುಗೇ ಧರ್ಮಶ್ಚತುಷ್ಪಾದಃ ಪ್ರಕೀರ್ತಿತಃ ।
ತ್ರೇತಾಯುಗೇ ತ್ರಿಪಾದಃ ಸ್ಯಾದ್ದ್ವಿಪಾದೋ ದ್ವಾಪರೇ ಸ್ಥಿತಃ ॥ ೧೩ ॥

ತ್ರಿಪಾದಹೀನಸ್ತಿಷ್ಯೇತು ಸತ್ತಾಮಾತ್ರೇಣ ತಿಷ್ಠತಿ ।
ಕೃತೇ ತು ಮಿಥುನೋತ್ಪತ್ತಿರ್ವೃತ್ತಿಃ ಸಾಕ್ಷಾದಲೋಲುಪಾ ॥ ೧೪ ॥

---

೧೧. ಕೃತಯುಗದಲ್ಲಿ ಬ್ರಹ್ಮದೇವನು ಪೂಜ್ಯದೇವತೆಯು. ತ್ರೇತಾಯುಗದಲ್ಲಿ ಸೂರ್ಯನು ಪೂಜ್ಯದೇವತೆಯು, ದ್ವಾಪರಯುಗದಲ್ಲಿ ವಿಷ್ಣುವು ಪೂಜ್ಯದೇವತೆಯು. ಮತ್ತು ಕಲಿಯುಗದಲ್ಲಿ ಸಾಕ್ಷಾತ್ಪರಮೇಶ್ವರನು ಪೂಜ್ಯದೇವತೆಯು.

೧೨. ಬ್ರಹ್ಮ-ವಿಷ್ಣು-ಸೂರ್ಯ ಎಂಬ ಎಲ್ಲ ದೇವತೆಗಳೂ ಕಲಿಯುಗದಲ್ಲಿ ಪೂಜಿಸಲ್ಪಡುವರು. ಭಗವಂತನಾದ ಮತ್ತು ಪಿನಾಕಧಾರಿಯಾದ ಈಶ್ವರನು ಸಮಸ್ತ ಯುಗಗಳಲ್ಲಿಯೂ ಪೂಜಿಸಲ್ಪಡುವನು.

೧೩. ಮೊದಲನೆಯ ಕೃತಯುಗದಲ್ಲಿ ಧರ್ಮವು ನಾಲ್ಕು ಪಾದಗಳಿಂದ ಸ್ಥಿತಿಯನ್ನು ಹೊಂದಿದೆಯೆಂದು ಕೀರ್ತಿಸಲ್ಪಟ್ಟಿದೆ. ತ್ರೇತಾಯುಗದಲ್ಲಿ ಮೂರು ಪಾದಗಳ ಸ್ಥಿತಿಯನ್ನು ಹೊಂದುವುದು. ದ್ವಾಪರ ಯುಗದಲ್ಲಿ ಎರಡು ಪಾದಗಳಿಂದ ಸ್ಥಿತಿಯನ್ನು ಹೊಂದುವುದು.

೧೪. ಕಲಿಯುಗದಲ್ಲಿ ಧರ್ಮವು ಪಾದತ್ರಯದಿಂದ ಹೀನವಾಗಿ ಸ್ವಸತ್ತಾಮಾತ್ರದಿಂದ ಇರುವುದು. ಕೃತಯುಗದಲ್ಲಿ ಮೈಥುನಧರ್ಮದಿಂದ ಪ್ರಜಾವೃದ್ಧಿಯೂ ಮತ್ತು ನಿಸ್ಪೃಹತ್ವಸ್ವಭಾವವೂ ವೃತ್ತಿಯೋಗಿರುವುದು.

ಪ್ರಜಾಸ್ತೃಪ್ತಾಃ ಸದಾ ಸರ್ವಾಃ ಸರ್ವಾನಂದಾಶ್ಚ ಭೋಗಿನಃ ।
ಅಧಮೋತ್ತಮತ್ವಂ ನಾಸ್ತ್ಯಾಸಾಂ ನಿರ್ವಿಶೇಷಾಃ ಪುರಂಜಯ ॥ ೧೫ ॥

ತುಲ್ಯಮಾಯುಃ ಸುಖಂ ರೂಪಂ ತಾಸು ತಸ್ಮಿನ್ ಕೃತೇ ಯುಗೇ ।
ವಿಶೋಕಾಸ್ತತ್ತ್ವಬಹುಲಾ ಏಕಾಂತಬಹುಲಾಸ್ತಥಾ ॥ ೧೬ ॥

ಧ್ಯಾನನಿಷ್ಠಾಸ್ತಪೋನಿಷ್ಠಾ ಮಹಾದೇವಪರಾಯಣಾಃ ।
ತಾ ವೈ ನಿಷ್ಕಾಮಚಾರಿಣ್ಯೋ ನಿತ್ಯಂ ಮುದಿತಮಾನಸಾಃ ॥ ೧೭ ॥

ಪರ್ವತೋದಧಿವಾಸಿನ್ಯೋ ಹ್ಯನಿಕೇತಾಃ ಪರಂತಪ ।
ರಸೋಲ್ಲಾಸಃ ಕಾಲಯೋಗಾತ್ತ್ರೇತಾಖ್ಯೇ ನಶ್ಯತಿ ದ್ವಿಜಾಃ ॥ ೧೮ ॥

---

೧೫. ಶತ್ರುನಿಗ್ರಹಿಯಾದ ಅರ್ಜುನನೆ! ಆಗ ಸಮಸ್ತ ಪ್ರಜೆಗಳು ಯಾವಾಗಲೂ ತೃಪ್ತರೂ ಆನಂದಪರಿಪೂರ್ಣರೂ ಭೋಗಿಗಳೂ ಆಗಿರುವರು. ಆ ಪ್ರಜೆಗಳಲ್ಲಿ ಅಧಮ-ಉತ್ತಮಭಾವವು ಇಲ್ಲದೆ ಎಲ್ಲರೂ ವಿಶೇಷರಹಿತರಾಗಿ ಸಮಾನ ರಾಗಿರುವರು.

೧೬. ಕೃತಯುಗದಲ್ಲಿ ಎಲ್ಲ ಪ್ರಜೆಗಳಿಗೆ ಆಯುಸ್ಸು, ಸುಖ, ರೂಪಗಳು ತುಲ್ಯವಾಗಿರುತ್ತವೆ. ಮತ್ತು ಆಗ ಪ್ರಜೆಗಳು ಶೋಕರಹಿತರೂ ಪ್ರಾಮಾಣ್ಯವಂತರೂ ನಿಯಮಾನುಷ್ಠಾನ ಪ್ರೇಮಿಗಳೂ ಆಗಿರುವರು.

೧೭. ಹಾಗು ಧ್ಯಾನ-ತಪೋನಿಷ್ಠೆಗಳಿಂದ ಕೂಡಿದವರೂ ಮಹಾದೇವನಲ್ಲಿ ಪರಮಭಕ್ತರೂ ನಿಷ್ಕಾಮಾಚರಣೆಯುಳ್ಳವರೂ ಮತ್ತು ಸಂತತವಾಗಿ ಆನಂದ ದಿಂದಿರುವ ಮಾನಸವುಳ್ಳವರೂ ಆಗುತ್ತಾರೆ.

೧೮. ಶತ್ರುಂಜಯನೆ! ಪರ್ವತ-ಸಮುದ್ರಪ್ರಾಂತಗಳಲ್ಲಿ ವಾಸಿಸುವವರೂ ವಸತಿಶೂನ್ಯರೂ ಆಗಿರುವರು. ದ್ವಿಜರೆ! ತ್ರೇತಾಯುಗವು ಪ್ರಾಪ್ತವಾಗಲು ಕಾಲ ಯೋಗದಿಂದ ನಿರ್ನಿಮಿತ್ತವಾದ ಸೌಖ್ಯಾನಂದೋಲ್ಲಾಸವು ಕ್ಷೀಣವಾಗುವುದು.

ತಸ್ಯಾಂ ಸಿದ್ಧೌ ಪ್ರಣಷ್ಟಾಯಾಮನ್ಯಾ ಸಿದ್ಧಿರವರ್ತತ ।
ಅಪಾಂ ಸೌಖ್ಯೇ ಪ್ರತಿಹತೇ ತದಾ ಮೇಘಾತ್ಮನಾ ತು ವೈ ॥ ೧೯ ॥

ಮೇಘೇಭ್ಯಃ ಸ್ತನಯಿತ್ನುಭ್ಯಃ ಪ್ರವೃತ್ತಂ ವೃಷ್ಟಿಸರ್ಜನಮ್ ।
ಸಕೃದೇವ ತಯಾ ವೃಷ್ಟ್ಯಾ ಸಂಯುಕ್ತೇ ಪೃಥಿವೀತಲೇ ॥ ೨೦ ॥

ಪ್ರಾದುರಾಸಂಸ್ತಥಾ ತಾಸಾಂ ವೃಕ್ಷಾ ವೈ ಗೃಹಸಂಜ್ಞಿತಾಃ ।
ಸರ್ವಃ ಪ್ರತ್ಯುಪಯೋಗಸ್ತು ತಾಸಾಂ ತೇಭ್ಯಃ ಪ್ರಜಾಯತೇ ॥ ೨೧ ॥

ವರ್ತಯಂತಿ ಸ್ಮ ತೇಭ್ಯಸ್ತಾಸ್ತ್ರೇತಾಯುಗಮುಖೇ ಪ್ರಜಾಃ ।
ತತಃ ಕಾಲೇನ ಮಹತಾ ತಾಸಾಮೇವ ವಿಪರ್ಯಯಾತ್ ॥ ೨೨ ॥

---

೧೯. ಆಗ ಕೃತಯುಗದ ಸಿದ್ಧಿಯು ನಷ್ಟವಾಗಿ ಮತ್ತೊಂದು ಸಿದ್ಧಿವಿಶೇಷವು ಉಂಟಾಗುವುದು. ಆಗ ಜಲಮಯವಾದ ಸೌಖ್ಯಾನುಭವದ ಪ್ರಗತಿಯುಂಟಾಗಿ ಜಲಗಳು ಮೇಘರೂಪವಾದ ಪರಿಣಾಮವನ್ನು ಹೊಂದುವುವು.

೨೦. ಗರ್ಜನಾದಿ ವೈಭವದಿಂದ ಕೂಡಿದ ಮೇಘಗಳಿಂದ ಮಳೆಯು ಸುರಿಯಲಾರಂಭವಾಯಿತು. ಭೂಮಂಡಲವು ಒಂದುಸಲ ಮಹಾವೃಷ್ಟಿಯಿಂದ ನೆನೆದ ಕೂಡಲೆ ವೃಷ್ಟಿಯ ಫಲವನ್ನು ತೋರಿಸಿತು.

೨೧. ಆಗ ಪ್ರಜೆಗಳಿಗೆ ವಾಸಯೋಗ್ಯವಾದ ಗೃಹವೆಂಬ ಸಂಜ್ಞಾಂಕಿತಗಳಾದ ಅನೇಕ ವೃಕ್ಷಗಳು ಜನಿಸಿದುವು. ಆ ಪ್ರಜೆಗಳಿಗೆ ವೃಕ್ಷಗಳಿಂದ ಅನೇಕವಿಧದ ಉಪಯೋಗವು ಸಿದ್ಧಿಸಿತು.

೨೨. ತ್ರೇತಾಯುಗದ ಆದಿಯಲ್ಲಿದ್ದ ಪ್ರಜೆಗಳು ಆ ವೃಕ್ಷಗಳಿಂದ ಅನೇಕ ವಿಧವಾದ ವೃತ್ತಿಗಳನ್ನು ಹೊಂದಿದ್ದರು. ತರುವಾಯ ಹಾಗೆ ಹೆಚ್ಚುಕಾಲ ಕಳೆಯಲಾಗಿ ಅದೇ ಕಾಲವಿಪರ್ಯಯದಿಂದ ಪ್ರಜೆಗಳಲ್ಲಿ ವಿಪರ್ಯಯವು ಕಾಣಿಸಿತು.

ರಾಗಲೋಭಾತ್ಮಕೋ ಭಾವಸ್ತದಾ ಹ್ಯಾಕಸ್ಮಿಕೋಽಭವತ್ ।
ವಿಪರ್ಯಯೇಣ ತಾಸಾಂ ತು ತೇನ ತತ್ಕಾಲಭಾವಿತಾಃ ॥ ೨೩ ॥

ಪ್ರಣಶ್ಯಂತಿ ತತಃ ಸರ್ವೇ ವೃಕ್ಷಾಸ್ತೇ ಗೃಹಸಂಜ್ಞಿತಾಃ ।
ತತಸ್ತೇಷು ಪ್ರಣಷ್ಟೇಷು ವಿಭ್ರಾಂತಾ ಮೈಥುನೋದ್ಭವಾಃ ॥ ೨೪ ॥

ಅಭಿಧ್ಯಾಯಂತಿ ತಾಂ ಸಿದ್ಧಿಂ ಸತ್ಯಾಭಿಧ್ಯಾನತಸ್ತದಾ ।
ಪ್ರಾದುರ್ಬಭೂವುಸ್ತಾಸಾಂ ತು ವೃಕ್ಷಾಸ್ತೇ ಗೃಹಸಂಜ್ಞಿತಾಃ ॥ ೨೫ ॥

ವಸ್ತ್ರಾಣಿ ತೇ ಪ್ರಸೂಯಂತೇ ಫಲಾನ್ಯಾಭರಣಾನಿ ಚ ।
ತೇಷ್ವೇವ ಜಾಯತೇ ತಾಸಾಂ ಗಂಧವರ್ಣರಸಾನ್ವಿತಮ್ ॥ ೨೬ ॥

---

೨೩. ಆಗ ಪ್ರಜೆಗಳಿಗೆ ಆಕಸ್ಮಿಕವಾಗಿ ಅಂತಃಕರಣದಲ್ಲಿ ರಾಗ-ಲೋಭಗಳ ಭಾವನೆಯು ಪ್ರಾದುರ್ಭವಿಸಿತು. ಪ್ರಜೆಗಳ ವಿಪರ್ಯಯ ವೃತ್ತಿಯಿಂದ ಭಾವ ಪರಿವೃತ್ತಿಯುಂಟಾಗಿ ಎಲ್ಲರೂ ವಿಪರೀತಭಾವನೆಯಿಂದ ವ್ಯಾಪ್ತರಾದರು.

೨೪. ಅದರಿಂದ ಗೃಹಸಂಜ್ಞಾಂಕಿತಗಳಾದ ಸಮಸ್ತ ವೃಕ್ಷಗಳು ನಾಶಹೊಂದಿದುವು. ಆ ವೃಕ್ಷ ಗೃಹಗಳು ನಾಶಹೊಂದಿರಲು ಮೈಥುನ ಧರ್ಮದಿಂದ ಉತ್ಪನ್ನರಾದ ಪ್ರಜೆಗಳು ಭ್ರಾಂತಿಗೊಂಡರು.

೨೫. ಆಗ ಸತ್ಯಸಂಕಲ್ಪವಂತರಾದ ಆ ಪ್ರಜೆಗಳು ನಷ್ಟವಾದ ಆ ಸಿದ್ಧಿಯನ್ನು ಮತ್ತೆ ಧ್ಯಾನಿಸಿದರು. ಆಗ ಆ ಪ್ರಜೆಗಳಿಗೆ ಮತ್ತೆ ಗೃಹ ಸಂಜ್ಞಾಂಕಿತಗಳಾದ ಆ ವೃಕ್ಷಗಳು ಪ್ರಾದುರ್ಭಾವವನ್ನು ಹೊಂದಿದುವು.

೨೬. ಆ ವೃಕ್ಷಗಳು ವಸ್ತ್ರ ಆಭರಣರೂಪವಾದ ವಿವಿಧಫಲಗಳನ್ನು ಫಲಿಸುತ್ತವೆ ಅಂತಹ ವೃಕ್ಷಫಲಗಳಿಂದ ಆ ಪ್ರಜೆಗಳಿಗೆ ಗಂಧ-ವರ್ಣ-ರಸಾದಿಗಳಿಂದ ಕೂಡಿದ ಭೋಗ್ಯವಸ್ತು ಜಾಲವು ಹುಟ್ಟುವುದು.

ಅಮಾಕ್ಷಿಕಂ ಮಹಾವೀರ್ಯಂ ಪುಟಕೇ ಪುಟಕೇ ಮಧು ।
ತೇನ ತಾ ವರ್ತಯಂತಿ ಸ್ಮ ತ್ರೇತಾಯುಗಮುಖೇ ಪ್ರಜಾಃ ॥ ೨೭ ॥

ಹೃಷ್ಟಾಸ್ತುಷ್ಟಾಸ್ತಯಾ ಸಿದ್ಧ್ಯಾ ಸರ್ವಾ ವೈ ವಿಗತಜ್ವರಾಃ ।
ಪುನಃ ಕಾಲಾಂತರೇಣೈವ ತತೋ ಲೋಭಾವೃತಾಸ್ತದಾ ॥ ೨೮ ॥

ವೃಕ್ಷಾಂಸ್ತಾನ್ ಪರ್ಯಗೃಹ್ಣಂತ ಮಧು ವಾ ಮಾಕ್ಷಿಕಂ ಬಲಾತ್ ।
ತಾಸಾಂ ತೇನಾಪಚಾರೇಣ ಪುನರ್ಲೋಭಕೃತೇನ ವೈ ॥ ೨೯ ॥

ಪ್ರಣಷ್ಟಾ ಮಧುನಾ ಸಾರ್ಧಂ ಕಲ್ಪವೃಕ್ಷಾಃ ಕ್ವಚಿತ್ ಕ್ವಚಿತ್ ।
ಶೀತವರ್ಷಾತಪೈಸ್ತೀವ್ರೈಸ್ತಾಸ್ತತೋ ದುಃಖಿತಾ ಭೃಶಮ್ ॥ ೩೦ ॥

---

೨೭. ವೃಕ್ಷಪರ್ಣಗಳ ಪ್ರತಿಯೊಂದು ಸಂಪುಟದಲ್ಲಿಯೂ ಮಕ್ಷಿಕೆಗಳಿಂದ ರಚಿತವಲ್ಲದ ಮಧುವು ಸ್ರವಿಸುತ್ತಿತ್ತು. ತ್ರೇತಾಯುಗದ ಆದಿಯಲ್ಲಿದ್ದ ಆ ಪ್ರಜೆಗಳು ಆ ಮಧುರಸದಿಂದ ವೃತ್ತಿಯನ್ನು ನಿರ್ವಹಿಸಿದರು.

೨೮. ಆಗಿನ ಸಮಸ್ತ ಪ್ರಜೆಗಳು ಆ ಸಿದ್ಧಿವಿಶೇಷದಿಂದ ಹೃಷ್ಟರೂ, ತುಷ್ಟರೂ ಆಗಿ ಜ್ವರದಿಂದ ರಹಿತರಾದರು. ತರುವಾಯ ಹಾಗೆ ಕೆಲವು ಕಾಲಾನಂತರದಲ್ಲಿ ಪ್ರಜೆಗಳು ಲೋಭದಿಂದ ಪೂರ್ಣರಾದರು.

೨೯. ಆ ಲೋಭದಿಂದ ಸಮಸ್ತ ವೃಕ್ಷಗಳನ್ನೂ ಮಕ್ಷಿಕಾ ನಿರ್ಮಿತವಾದ ಮಧುವನ್ನೂ ಬಲಾತ್ಕಾರದಿಂದ ಅಧೀನಪಡಿಸಿಕೊಂಡರು. ಹೀಗೆ ಆ ಪ್ರಜೆಗಳ ಲೋಭಾತಿಶಯದಿಂದ ಸಿದ್ಧಿವಿಶೇಷಕ್ಕೆ ಅಪಚಾರವು ಮಾಡಲ್ಪಟ್ಟಿತು.

೩೦. ಆಗ ಮಧುರಸದೊಡನೆ ಆ ಕಲ್ಪವೃಕ್ಷಗಳು ಅಲ್ಲಲ್ಲಿಯೇ ನಾಶಹೊಂದಿ ಅದೃಶ್ಯವಾದುವು. ಆಗ ಪ್ರಜೆಗಳು ಸಹಿಸಲಾಗದ ಶೀತ- ವೃಷ್ಟಿ-ಆತಪಗಳಿಂದ ಹೆಚ್ಚಾಗಿ ಪೀಡಿಸಲ್ಪಟ್ಟರು.

ದ್ವಂದ್ವೈಃ ಸಂಪೀಡ್ಯಮಾನಾಸ್ತು ಚಕ್ರುರಾವರಣಾನಿ ಚ।
ಕೃತ್ವಾ ದ್ವಂದ್ವವಿನಿರ್ಘಾತಾನ್ ವಾರ್ತೋಪಾಯಮಚಿಂತಯನ್ ॥೩೧॥

ನಷ್ಟೇಷು ಮಧುನಾ ಸಾರ್ಧಂ ಕಲ್ಪವೃಕ್ಷೇಷು ವೈ ತದಾ ।
ತತಃ ಪ್ರಾದುರಭೂತ್ತಾಸಾಂ ಸಿದ್ಧಿಸ್ತ್ರೇತಾಯುಗೇ ಪುನಃ ॥ ೩೨ ॥

ವಾರ್ತಾಯಾಃ ಸಾಧಿಕಾ ಹ್ಯನ್ಯಾ ವೃಷ್ಟಿಸ್ತಾಸಾಂ ನಿಕಾಮತಃ ।
ತಾಸಾಂ ವೃಷ್ಟ್ಯುದಕಾನೀಹ ಯಾನಿ ನಿಮ್ನೈರ್ಗತಾನಿ ತು ॥ ೩೩ ॥

ಅಭವನ್ ವೃಷ್ಟಿಸಂತತ್ಯಾ ಸ್ರೋತಃಸ್ಥಾನಾನಿ ನಿಮ್ನಗಾಃ ।
ಯದಾ ಆಪೋ ಬಹುತರಾ ಆಪನ್ನಾಃ ಪೃಥಿವೀತಲೇ ॥ ೩೪ ॥

---

೩೧. ಶೀತತಾಪಾದಿ ದ್ವಂದ್ವಗಳಿಂದ ಪೀಡಿಸಲ್ಪಟ್ಟವರಾಗಿ ಆವರಣಗಳನ್ನು ರಚಿಸಿದರು. ಆಗ ದ್ವಂದ್ವದುಃಖಗಳ ಪ್ರತೀಕಾರ ವಿಧಿಯನ್ನು ರಚಿಸಿ ವಾರ್ತಾ ನಿರ್ವಾಹದ ಉಪಾಯವನ್ನು ಚಿಂತಿಸಿದರು.

೩೨. ಆಗ ಕಲ್ಪವೃಕ್ಷಗಳು ತಮ್ಮ ಮಧುರಸದೊಡನೆ ನಾಶವನ್ನು ಹೊಂದಲಾಗಿ ಆ ಪ್ರಜೆಗಳಿಗೆ ತ್ರೇತಾಯುಗದಲ್ಲಿ ಮತ್ತೊಂದು ಸಿದ್ಧಿಯು ಪ್ರಾದುರ್ಭಾವವನ್ನು ಹೊಂದಿತು.

೩೩. ಆ ಪ್ರಜೆಗಳ ಆಶೋತ್ತರಗಳ ಅನುಗಣವಾಗಿ ವೃತ್ತಿಯನ್ನು ಸಾಧಿಸುವ ಮತ್ತೊಂದು ವಿಧವಾದ ವೃಷ್ಟಿಯು ಪ್ರಾದುರ್ಭವಿಸಿತು. ಆ ವೃಷ್ಟಿಯ ಜಲರಾಶಿಯು ಹಳ್ಳವಾದ ಪ್ರದೇಶಗಳಲ್ಲಿ ಹರಿದು ಹೋಗುವುದಾಯಿತು.

೩೪. ಯಾವ ಸಮಯದಲ್ಲಿ ಸಂತತವಾದ ವೃಷ್ಟಿಯಿಂದ ಪ್ರಭೂತವಾದ ಜಲವು ವೃಷ್ಟಿರೂಪವಾಗಿ ಭೂಮಿಯಲ್ಲಿ ಬಿದ್ದಿತೋ; ಆಗ ಪ್ರವಾಹಕ್ಕೆ ಆಸ್ಪದವಾದ ನದಿಗಳು ಹುಟ್ಟಿದುವು.

ಅಪಾಂ ಭೂಮೇಶ್ಚ ಸಂಯೋಗಾದೌಷಧ್ಯಸ್ತಾಸ್ತದಾಭವನ್ ।
ಅಫಾಲಕೃಷ್ಟಾಶ್ಚಾನುಪ್ತಾ ಗ್ರಾಮ್ಯಾರಣ್ಯಾಶ್ಚತುರ್ದಶ ॥ ೩೫ ॥

ಋತುಪುಷ್ಪಫಲೈಶ್ಚೈವ ವೃಕ್ಷಗುಲ್ಮಾಶ್ಚ ಜಜ್ಞಿರೇ ।
ತತಃ ಪ್ರಾದುರಭೂತ್ತಾಸಾಂ ರಾಗೋ ಲೋಭಶ್ಚ ಸರ್ವಶಃ ॥ ೩೬ ॥

ಅವಶ್ಯಂ ಭಾವಿನಾರ್ಥೇನ ತ್ರೇತಾಯುಗವಶೇನ ವೈ ।
ತತಸ್ತಾಃ ಪರ್ಯಗೃಹ್ಣಂತ ನದೀಕ್ಷೇತ್ರಾಣಿ ಪರ್ವತಾನ್ ॥ ೩೭ ॥

ವೃಕ್ಷಗುಲ್ಮೌಷಧೀಶ್ಚೈವ ಪ್ರಸಹ್ಯ ತು ಯಥಾಬಲಮ್ ।
ವಿಪರ್ಯಯೇಣ ತಾಸಾಂ ತಾ ಓಷಧ್ಯೋ ವಿವಿಶುರ್ಮಹೀಮ್ ॥೩೮॥

---

೩೫. ಮತ್ತು ಆಗ ಜಲ-ಭೂಮಿಗಳ ಸಂಯೋಗದಿಂದ ನೇಗಲಿನಿಂದ ಕೃಷಿ, ಬೀಜಾವಾಪ ಮುಂತಾದ ಸಾಧನಗಳು ಇಲ್ಲದೆ ಗ್ರಾಮ್ಯ ಆರಣ್ಯವೆಂಬ ಹದಿನಾಲ್ಕು ಬಗೆಯ ಓಷಧಿಗಳು ಜನಿಸಿದುವು.

೩೬. ಅನೇಕ ಜಾತಿಯ ವೃಕ್ಷಗಳೂ ಗುಲ್ಮಗಳೂ ಆಯಾಯ ಋತುಗಳ ಸಮಯದಲ್ಲಿ ಸಂಭವಿಸುವ ಪುಷ್ಪ ಫಲಗಳಿಂದ ಕೂಡಿ ಹುಟ್ಟಿದುವು. ಅದರಿಂದ ಆ ಪ್ರಜೆಗಳಿಗೆ ಸರ್ವವಸ್ತುಗಳಲ್ಲಿ ರಾಗ ಲೋಭಗಳು ಅತಿಶಯವಾಗಿ ಹುಟ್ಟಿದುವು.

೩೭. ತ್ರೇತಾಯುಗದ ಮಹಿಮೆಯಿಂದ ಅವಶ್ಯವಾಗಿ ಸಂಭವಿಸುವ ಅರ್ಥದ ನಿಮಿತ್ತದಿಂದ ಮುಗ್ಧರಾದ ಆ ಪ್ರಜೆಗಳು ನದೀ ಕ್ಷೇತ್ರ ಪರ್ವತ ಮುಂತಾದ ಪ್ರದೇಶ ಗಳನ್ನು ವಸತಿ ಸೌಕರ್ಯಕ್ಕೆ ಅವಲಂಬಿಸಿದರು.

೩೮. ಮತ್ತು ವೃಕ್ಷ-ಗುಲ್ಮ-ಓಷಧಿಗಳನ್ನು ತಮ್ಮ ಶಕ್ತಿಯನ್ನು ಉಪಯೋಗಿಸಿ ಬಲಾತ್ಕಾರದಿಂದ ಪರಿಗ್ರಹಿಸಿದರು. ಆ ಪ್ರಜೆಗಳ ವಿಪರ್ಯಯ ವೃತ್ತಿಯಿಂದ ಆ ಓಷಧಿಗಳು ಭೂಮಿಯನ್ನು ಪ್ರವೇಶಿಸಿದುವು.

ಪಿತಾಮಹನಿಯೋಗೇನ ದುದೋಹ ಪೃಥಿವೀಂ ಪೃಥುಃ ।
ತತಸ್ತಾ ಜಗೃಹುಃ ಸರ್ವಾ ಹ್ಯನ್ಯೋಽನ್ಯಂ ಕ್ರೋಧಮೂರ್ಛಿತಾಃ ॥೩೯॥

ಸದಾಚಾರೇ ವಿನಷ್ಟೇ ತು ಬಲಾತ್ಕಾಲಬಲೇನ ಚ ।
ಮರ್ಯಾದಾಯಾಃ ಪ್ರತಿಷ್ಠಾರ್ಥಂ ಜ್ಞಾತ್ವೈತದ್ಭಗವಾನಜಃ ॥ ೪೦ ॥

ಸಸರ್ಜ ಕ್ಷತ್ರಿಯಾನ್ ಬ್ರಹ್ಮಾ ಬ್ರಾಹ್ಮಣಾನಾಂ ಹಿತಾಯ ವೈ ।
ವರ್ಣಾಶ್ರಮವ್ಯವಸ್ಥಾಂ ಚ ತ್ರೇತಾಯಾಂ ಕೃತವಾನ್ ಪ್ರಭುಃ ॥ ೪೧ ॥

ಯಜ್ಞಪ್ರವರ್ತನಂ ಚೈವ ಪಶುಹಿಂಸಾವಿವರ್ಜಿತಮ್ ।
ದ್ವಾಪರೇಽಪ್ಯಥ ವಿದ್ಯಂತೇ ಮತಿಭೇದಾಸ್ತಥಾ ನೃಣಾಮ್ ॥ ೪೨ ॥

---

೩೯. ಆಗ ಬ್ರಹ್ಮದೇವನ ಆಜ್ಞೆಯಿಂದ ಪೃಥುರಾಜನು ಪೃಥಿವಿಯನ್ನು ದೋಹನಮಾಡಿದನು, ದೋಹನದಿಂದ ಹುಟ್ಟಿದ ಓಷಧಿಗಳನ್ನು ಪ್ರಜೆಗಳು ಅನ್ಯೋನ್ಯವಾಗಿ ಕ್ರೋಧದಿಂದ ವ್ಯಾಪ್ತರಾಗಿ ಪರಿಗ್ರಹಿಸಿದರು.

೪೦. ಕಾಲಮಹಿಮೆಯಿಂದ ಬಲಾತ್ಕಾರವಾಗಿ ಪ್ರಜೆಗಳಲ್ಲಿ ಸದಾಚಾರವು ನಷ್ಟವಾಯಿತು. ಆಗ ಷಡ್ಗುಣೈಶ್ವರ್ಯ ಸಂಪನ್ನನಾದ ಬ್ರಹ್ಮದೇವನು ಜಗತ್ತಿನ ಮರ್ಯಾದೆಯನ್ನು ಪ್ರತಿಷ್ಠೆಗೊಳಿಸಲು ಯತ್ನಿಸಿದನು.

೪೧. ಪ್ರಭುವಾದ ಬ್ರಹ್ಮದೇವನು ತ್ರೇತಾಯುಗದಲ್ಲಿ ಬ್ರಾಹ್ಮಣರ ಹಿತರಕ್ಷಣೆಗೋಸ್ಕರ ಕ್ಷತ್ರಿಯರನ್ನು ಸೃಷ್ಟಿಮಾಡಿದನು. ಮತ್ತು ತನ್ಮೂಲಕವಾಗಿ ವರ್ಣ ಆಶ್ರಮಗಳ ಧರ್ಮವ್ಯವಸ್ಥೆಯನ್ನು ಮಾಡಿದನು.

೪೨. ಧರ್ಮವ್ಯವಸ್ಥಾಪ್ರಸಂಗದಲ್ಲಿ ಪಶುಹಿಂಸೆಯಿಂದ ವರ್ಜಿಸಲ್ಪಟ್ಟ ಯಜ್ಞ ಕರ್ಮಾನುಷ್ಠಾನವನ್ನು ಪ್ರವರ್ತಿಸಿದನು. ಮುಂದೆ ಬಂದ ದ್ವಾಪರಯುಗದಲ್ಲಿಯೂ ಮಾನವರ ಮತಿಯಲ್ಲಿ ಅವ್ಯವಸ್ಥೆಗಳು ಉಂಟಾದುವು.

ರಾಗೋ ಲೋಭಸ್ತಥಾ ಯುದ್ಧಂ ಮತ್ವಾ ಬುದ್ಧಿವಿನಿಶ್ಚಯಮ್ ।
ಏಕೋ ವೇದಶ್ಚತುಷ್ಪಾದಸ್ತ್ರಿಧಾ ತ್ವಿಹ ವಿಭಾವ್ಯತೇ ॥ ೪೩ ॥

ವೇದವ್ಯಾಸೈಶ್ಚತುರ್ಧಾ ಚ ನ್ಯಸ್ಯತೇ ದ್ವಾಪರಾದಿಷು ।
ಋಷಿಪುತ್ರೈಃ ಪುನರ್ವೇದಾ ಭಿದ್ಯಂತೇ ದೃಷ್ಟಿವಿಭ್ರಮೈಃ ॥ ೪೪ ॥

ಮಂತ್ರಬ್ರಾಹ್ಮಣವಿನ್ಯಾಸೈಃ ಸ್ವರವರ್ಣವಿಪರ್ಯಯೈಃ ।
ಸಂಹಿತಾ ಋಗ್ಯಜುಃಸಾಮ್ನಾಂ ಪ್ರೋಚ್ಯಂತೇ ಪರಮರ್ಷಿಭಿಃ ॥ ೪೫ ॥

ಸಾಮಾನ್ಯೋದ್ಭವನಾ ಚೈವ ದೃಷ್ಟಿಭೇದೈಃ ಕ್ವಚಿತ್ ಕ್ವಚಿತ್ ।
ಬ್ರಾಹ್ಮಣಂ ಕಲ್ಪಸೂತ್ರಾಣಿ ಬ್ರಹ್ಮಪ್ರವಚನಾನಿ ಚ ॥ ೪೬ ॥

---

೪೩. ಬ್ರಹ್ಮನು ಜನರ ಬುದ್ಧಿಯಲ್ಲಿ ರಾಗ-ಲೋಭ-ಯುದ್ಧಕರ್ತವ್ಯತೆಗಳ ನಿಶ್ಚಯಗಳು ಸಂಭವಿಸಿರುವುದನ್ನು ನೋಡಿ ತ್ರೇತಾಯುಗದಲ್ಲಿ ಏಕರೂಪವಾಗಿದ್ದ ವೇದವು ನಾಲ್ಕು ಪಾದಗಳ ರೂಪದಿಂದ ಪ್ರಸರಿಸುವಂತೆ ಕಲ್ಪಿಸಿದನು.

೪೪. ದ್ವಾಪರ ಮುಂತಾದ ಯುಗಗಳಲ್ಲಿ ವೇದವ್ಯಾಸ ಮಹರ್ಷಿಗಳಿಂದ ವೇದವು ನಾಲ್ಕುಭಾಗವಾಗಿ ವಿಂಗಡಿಸಲ್ಪಡುತ್ತಿದೆ. ಮತ್ತು ಅನೇಕ ಋಷಿ ಕುಮಾರರಿಂದ ಆ ವೇದಗಳು ಮತ್ತೆ ಒಂದೊಂದು ಬಗೆಯ ದೃಷ್ಟಿಯಿಂದ ವಿಂಗಡಿಸಲ್ಪಡುವುವು.

೪೫. ಸ್ವರ-ವರ್ಣಗಳ ತಾರತಮ್ಯದಿಂದ ಮಂತ್ರ ಬ್ರಾಹ್ಮಣ ಎಂಬ ವಿಭಾಗವನ್ನು ಹೊಂದಿರುವ ಋಗ್ವೇದ-ಯಜುರ್ವೇದ-ಸಾಮವೇದಗಳ ಸಂಹಿತೆಗಳು ಮಹರ್ಷಿಗಳಿಂದ ಬೋಧಿಸಲ್ಪಟ್ಟವೆ.

೪೬. ಮಂತ್ರ-ಬ್ರಾಹ್ಮಣಗಳಲ್ಲಿ ಕೆಲವೆಡೆಗಳಲ್ಲಿ ತೋರಿಬರುವ ದೃಷ್ಟಿಭೇದ ಗಳಿಂದ ಸಾಮಾನ್ಯರೂಪವಾಗಿ ಈ ವಿಭಾಗವು ಕಲ್ಪಿಸಲ್ಪಟ್ಟಿರುವುದು. ಬ್ರಾಹ್ಮಣ-ಕಲ್ಪಸೂತ್ರ-ಬ್ರಹ್ಮವಚನ ಮುಂತಾದುವು ಅದರ ಅವಾಂತರ ವಿಭಾಗವಾಗಿವೆ.

ಇತಿಹಾಸಪುರಾಣಾನಿ ಧರ್ಮಶಾಸ್ತ್ರಾಣಿ ಸುವ್ರತ ।
ಅವೃಷ್ಟಿರ್ಮರಣಂ ಚೈವ ತಥೈವಾನ್ಯೇ ಹ್ಯುಪದ್ರವಾಃ ॥ ೪೭ ॥

ವಾಙ್ಮನಃಕಾಯಜೈರ್ದೋಷೈರ್ನಿರ್ವೇದೋ ಜಾಯತೇ ನೃಣಾಮ್ ।
ನಿರ್ವೇದಾಜ್ಜಾಯತೇ ತೇಷಾಂ ದುಃಖಮೋಕ್ಷವಿಚಾರಣಾ ॥ ೪೮ ॥

ವಿಚಾರಣಾಚ್ಚ ವೈರಾಗ್ಯಂ ವೈರಾಗ್ಯಾದ್ದೋಷದರ್ಶನಮ್ ।
ದೋಷಾಣಾಂ ದರ್ಶನಾಚ್ಚೈವ ದ್ವಾಪರೇ ಜ್ಞಾನಸಂಭವಃ ॥ ೪೯ ॥

ಏಷಾಂ ರಜಸ್ತಮೋಯುಕ್ತಾ ವೃತ್ತಿರ್ವೈ ದ್ವಾಪರೇ ದ್ವಿಜಾಃ ।
ಆದ್ಯೇ ಕೃತೇ ತು ಧರ್ಮೋಽಸ್ತಿ ಸ ತ್ರೇತಾಯಾಂ ಪ್ರವರ್ತತೇ ॥ ೫೦ ॥

---

೪೭. ವ್ರತ-ನಿಯಮಾನುಷ್ಠಾನಪರನೆ! ಹಾಗೆ ಇತಿಹಾಸ, ಪುರಾಣ, ಧರ್ಮಶಾಸ್ತ್ರಗಳು ಅದರ ಅಂಗಗಳಾಗಿ ಗಣಿಸಲ್ಪಟ್ಟಿವೆ. ಆಗ ಅನಾವೃಷ್ಟಿ ಮತ್ತು ಮರಣವೆಂಬ ಮತ್ತೆ ಕೆಲವು ಉಪದ್ರವಗಳು ತಲೆದೋರಿದುವು.

೪೮. ಆಗ ವಚನ, ಶರೀರ, ಮಾನಸಗಳಿಂದ ಸಂಭವಿಸುವ ಅನೇಕ ದೋಷಗಳಿಂದ ಜನಗಳಿಗೆ ವೈರಾಗ್ಯವುಂಟಾಗುವುದು. ಆ ನಿರ್ವೇದದಿಂದ ಪ್ರಜೆಗಳಿಗೆ ದುಃಖಮೋಕ್ಷಗಳ ವಿಚಾರವು ಪ್ರವರ್ತಿಸುವುದು.

೪೯. ದ್ವಾಪರಯುಗದಲ್ಲಿ ದೋಷಾದಿ ವಿಚಾರದಿಂದ ವೈರಾಗ್ಯವೂ, ವೈರಾಗ್ಯದಿಂದ ಉಪಕರಣವಸ್ತುಗಳಲ್ಲಿ ತೀವ್ರದೋಷ ದೃಷ್ಟಿಯೂ ಅಂತಹ ದೋಷದೃಷ್ಟಿಯಿಂದ ಕ್ರಮವಾಗಿ ಜ್ಞಾನವೂ ಸಂಭವಿಸುವುದು.

೫೦. ದ್ವಿಜರೆ! ದ್ವಾಪರಯುಗದಲ್ಲಿ ಈರೀತಿಯಾಗಿ ರಜಸ್ತಮೋಗುಣಗಳಿಂದ ಕೂಡಿದ ವೃತ್ತಿಯು ಉದ್ರೇಕಗೊಳ್ಳುವುದು. ಆದಿಭೂತವಾದ ಕೃತಯುಗದಲ್ಲಿ ಧರ್ಮಪ್ರಾಬಲ್ಯವಿರುವುದರಿಂದ ಆ ಧರ್ಮವು ತ್ರೇತಾಯುಗದಲ್ಲಿ ನಡೆಯುವುದು.

ದ್ವಾಪರೇ ವ್ಯಾಕುಲೀಭೂತ್ವಾ ಪ್ರಣಶ್ಯತಿ ಕಲೌ ಯುಗೇ ॥ ೫೧ ॥

ಇತಿ ಶ್ರೀ ಕೂರ್ಮ ಪುರಾಣೇ ಏಕೋನತ್ರಿಂಶೋಽಧ್ಯಾಯಃ.

---

೫೧. ಆ ಧರ್ಮವೃತ್ತಿಯು ಮೂರನೆಯದಾದ ತ್ರೇತಾಯುಗದಲ್ಲಿ ಬಹು ವ್ಯಾಕುಲವಾಗಿ ಕಡೆಯ ಕಲಿಯುಗದಲ್ಲಿ ಸಂಪೂರ್ಣವಾಗಿ ನಾಶಹೊಂದುವುದು.

( ಕೂರ್ಮಪುರಾಣದಲ್ಲಿ ಇಪ್ಪತ್ತೊಂಭತ್ತನೆಯ ಅಧ್ಯಾಯವು ಸಮಾಪ್ತವು. )

ಶ್ರೀಃ

# ಕೂರ್ಮಪುರಾಣಂ

---

## ತ್ರಿಂಶೋಽಧ್ಯಾಯಃ

**ವ್ಯಾಸ ಉವಾಚ :—**

**ತಿಷ್ಯೇ ಮಾಯಾಮಸೂಯಾಂ ಚ ವಧಂ ಚೈವ ತಪಸ್ವಿನಾಮ್ ।**
**ಸಾಧಯಂತಿ ನರಾ ನಿತ್ಯಂ ತಮಸಾ ವ್ಯಾಕುಲೀಕೃತಾಃ ॥ ೧ ॥**

**ಕಲೌ ಪ್ರಮಾರಕೋ ರೋಗಃ ಸತತಂ ಕ್ಷುದ್ಭಯಂ ತಥಾ ।**
**ಅನಾವೃಷ್ಟಿಭಯಂ ಘೋರಂ ದೇಶಾನಾಂ ಚ ವಿಪರ್ಯಯಃ ॥ ೨ ॥**

---

## ಮೂವತ್ತನೆಯ ಅಧ್ಯಾಯವು

೧. ವ್ಯಾಸಮುನಿಯು ಹೀಗೆಂದು ಹೇಳಿದನು :—ಕಲಿಯುಗದಲ್ಲಿ ಮಾನವರು ತಮೋಗುಣದಿಂದ ಕೆಡಿಸಲ್ಪಟ್ಟ ಬುದ್ಧಿಯುಳ್ಳವರಾಗಿ ಮಾಯೆ, ಅಸೂಯೆ ಮತ್ತು ತಪಸ್ವಿಜನರ ಪೀಡೆಗಳನ್ನು ಯಾವಾಗಲೂ ಆಚರಿಸುತ್ತಾರೆ.

೨. ಕಲಿಯುಗದಲ್ಲಿ ಸರ್ವಸಂಹಾರಕವಾದ ಉಲ್ಬಣರೋಗವೂ. ಸಂತತವಾದ ಕ್ಷುದ್ಬಾಧೆಯೂ ಘೋರವಾದ ಅನಾವೃಷ್ಟಿಯ ಭೀತಿಯೂ ಮತ್ತು ದೇಶಗಳ ವಿಪರ್ಯಯವೂ ಉಂಟಾಗುವುವು.

ಅಧಾರ್ಮಿಕಾ ನಿರಾಹಾರಾ ಮಹಾಕೋಪಾಲ್ಪತೇಜಸಃ ।
ಅನೃತಂ ಬ್ರುವತೇ ಲುಬ್ಧಾಸ್ತಿಷ್ಯೇ ಜಾತಾಃ ಸುದುಷ್ಪ್ರಜಾಃ ॥ ೩ ॥

ದುರಿಷ್ಟೈರ್ದುರಧೀತೈಶ್ಚ ದುರಾಚಾರೈರ್ದುರಾಗಮೈಃ ।
ವಿಪ್ರಾಣಾಂ ಕರ್ಮದೋಷೈಶ್ಚ ಪ್ರಜಾನಾಂ ಜಾಯತೇ ಭಯಮ್॥ ೪ ॥

ನಾಧೀಯತೇ ತದಾ ವೇದಾನ್ ನ ಯಜಂತಿ ದ್ವಿಜಾತಯಃ ।
ಯಜಂತಿ ಯಜ್ಞಾನ್ ವೇದಾಂಶ್ಚ ಪಠಂತೇ ಚಾಲ್ಪಬುದ್ಧಯಃ ॥ ೫ ॥

ಶೂದ್ರಾಣಾಂ ಮಂತ್ರಯೋಗೈಶ್ಚ ಸಂಬಂಧೋ ಬ್ರಾಹ್ಮಣೈಃ ಸಹ ।
ಭವಿಷ್ಯತಿ ಕಲೌ ತಸ್ಮಿನ್ ಶಯನಾಸನಭೋಜನೈಃ ॥ ೬ ॥

---

೩. ಕಲಿಯುಗದಲ್ಲಿ ಜನ್ಮವೆತ್ತಿರುವ ದುಷ್ಟಪ್ರಜೆಗಳು ಅಧಾರ್ಮಿಕರೂ ಆಹಾರ ಶೂನ್ಯರೂ, ಮಹಾಕೋಪಿಗಳೂ ಮತ್ತು ಅಲ್ಪವಾದ ತೇಜೋವಂತರೂ ಆಗಿ ಲೋಭದಿಂದ ಅನೃತ ವಚನವನ್ನು ಹೆಚ್ಚಾಗಿ ಹೇಳುತ್ತಾರೆ.

೪. ಮತ್ತು ವಿಪ್ರರು ಮಾಡುವ ಕೆಟ್ಟ ವಿಧಾನವುಳ್ಳ ಯಾಗ-ಅಧ್ಯಯನ ಆಚಾರ ಮತ್ತು ಆಗಮತಂತ್ರವಿಧಿ ಮುಂತಾದ ದೋಷಗಳಿಂದ ಕಲಿಯುಗದಲ್ಲಿ ಸಮಸ್ತ ಪ್ರಜೆಗಳಿಗೆ ಭಯವು ಪ್ರಾಪ್ತವಾಗುವುದು.

೫. ಆ ಯುಗದಲ್ಲಿ ತ್ರೈವರ್ಣಿಕರು ವೇದಾಧ್ಯಯನವನ್ನು ಮಾಡುವುದಿಲ್ಲ. ಹಾಗು ಯಜ್ಞಾದಿ ಕರ್ಮಗಳನ್ನು ಆಚರಿಸುವುದಿಲ್ಲ. ಅವರಿಗಿಂತ ಅಲ್ಪಬುದ್ಧಿಗಳಾದ ಅನಧಿಕಾರಿ ಜನರು ಯಜ್ಞಾದಿ ಕರ್ಮಗಳನ್ನೂ ವೇದಪಠನಗಳನ್ನೂ ಮಾಡುತ್ತಾರೆ.

೬. ಆ ದುಷ್ಟಯುಗದಲ್ಲಿ ಶೂದ್ರರಿಗೆ ಮಂತ್ರ ಪ್ರಾಪ್ತಿಯಾಗುವುದು. ಹಾಗು ಶೂದ್ರರು ಬ್ರಾಹ್ಮಣರೊಂದಿಗೆ ಶಯನ-ಆಸನ-ಭೋಜನಾದಿ ಲೌಕಿಕ ಕರ್ಮಗಳಲ್ಲಿ ಸಂಪರ್ಕವನ್ನು ಬೆಳೆಸುವರು.

ರಾಜಾನಃ ಶೂದ್ರಭೂಯಿಷ್ಠಾ ಬ್ರಾಹ್ಮಣಾನ್ ಬಾಧಯಂತಿ ಚ ।
ಭ್ರೂಣಹತ್ಯಾ ವೀರಹತ್ಯಾ ಪ್ರಜಾಯೇತ ನರೇಶ್ವರೇ ॥ ೭ ॥

ಸ್ನಾನಂ ಹೋಮಂ ಜಪಂ ದಾನಂ ದೇವತಾನಾಂ ತಥಾರ್ಚನಮ್ ।
ತಥಾನ್ಯಾನಿ ಚ ಕರ್ಮಾಣಿ ನ ಕುರ್ವಂತಿ ದ್ವಿಜಾತಯಃ ॥ ೮ ॥

ವಿನಿಂದಂತಿ ಮಹಾದೇವಂ ಬ್ರಾಹ್ಮಣಾನ್ ಪುರುಷೋತ್ತಮಮ್ ।
ಆಮ್ನಾಯಧರ್ಮಶಾಸ್ತ್ರಾಣಿ ಪುರಾಣಾನಿ ಕಲೌ ಯುಗೇ ॥ ೯ ॥

ಕುರ್ವಂತ್ಯವೇಷದೃಷ್ಟಾನಿ ಕರ್ಮಾಣಿ ವಿವಿಧಾನಿ ತು ।
ಸ್ವಧರ್ಮೇ ತು ರುಚಿರ್ನೈವ ಬ್ರಾಹ್ಮಣಾನಾಂ ಪ್ರಜಾಯತೇ ॥ ೧೦ ॥

---

೭. ರಾಜರು ಶೂದ್ರಜನರೊಡನೆ ಅತಿಶಯ ಸಂಪರ್ಕದಿಂದ ಮಿಶ್ರಿತರಾಗಿ ಬ್ರಾಹ್ಮಣರನ್ನು ಪೀಡಿಸುತ್ತಾರೆ. ಮತ್ತು ಆ ಯುಗದ ವೈಭವದಿಂದ ರಾಜರಲ್ಲಿ ಭ್ರೂಣಹತ್ಯಾ-ವೀರಹತ್ಯೆಗಳು ನಡೆಯುತ್ತವೆ.

೮. ದ್ವಿಜಾತಿ ಎನಿಸಿರುವವರು ತಮಗೆ ಕರ್ತವ್ಯವಾದ ಸ್ನಾನ, ಹೋಮ, ಜಪ, ದಾನ, ದೇವತಾರ್ಚನೆಗಳನ್ನೂ ಮತ್ತು ಇತರವಾದ ನಿತ್ಯಕರ್ಮಗಳನ್ನೂ ಆಚರಿಸುವುದಿಲ್ಲ.

೯. ಕಲಿಯುಗದಲ್ಲಿ ಮಹಾದೇವನಾದ ಶಂಕರನನ್ನೂ ಪುರುಷೋತ್ತಮನಾದ ವಿಷ್ಣುವನ್ನೂ ಬ್ರಾಹ್ಮಣರನ್ನೂ, ವೇದ-ಧರ್ಮಶಾಸ್ತ್ರಗಳನ್ನೂ ಮತ್ತು ಪುರಾಣ ಗ್ರಂಥಗಳನ್ನೂ ನಿಂದಿಸುತ್ತಾರೆ.

೧೦. ಬ್ರಾಹ್ಮಣರು ವೇದಬಾಹ್ಯಗ್ರಂಥಗಳಿಂದ ವಿಧಿಸಲ್ಪಟ್ಟ ವಿವಿಧಕರ್ಮ ಗಳನ್ನು ಆಚರಿಸುತ್ತಾರೆ. ಮತ್ತು ಬ್ರಾಹ್ಮಣರಿಗೆ ಸ್ವಧರ್ಮಾಚರಣೆಯಲ್ಲಿ ಆಸಕ್ತಿಯು ಉಂಟಾಗುವುದಿಲ್ಲ.

ಕುಶೀಲಚರ್ಯಾಃ ಪಾಷಂಡೈರ್ವೃಥಾರೂಪೈಃ ಸಮಾವೃತಾಃ ।
ಬಹುಯಾಚನಕಾ ಲೋಕಾ ಭವಿಷ್ಯಂತಿ ಪರಸ್ಪರಮ್ ॥ ೧೧ ॥

ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ।
ಪ್ರಮದಾಃ ಕೇಶಶೂಲಾಶ್ಚ ಭವಿಷ್ಯಂತಿ ಕಲೌ ಯುಗೇ ॥ ೧೨ ॥

ಶುಕ್ಲದಂತಾಜಿನಾಖ್ಯಾಶ್ಚ ಮುಂಡಾಃ ಕಾಷಾಯವಾಸಸಃ ।
ಶೂದ್ರಾ ಧರ್ಮಂ ಚರಿಷ್ಯಂತಿ ಯುಗಾಂತೇ ಸಮುಪಸ್ಥಿತೇ ॥ ೧೩ ॥

ಸಸ್ಯಚೌರಾ ಭವಿಷ್ಯಂತಿ ತಥಾ ಚೇಲಾಭಿಮರ್ಶಿನಃ ।
ಚೋರಾಚ್ಚೋರಾಶ್ಚ ಹರ್ತಾರೋ ಹರ್ತುರ್ಹರ್ಂತಾ ತಥಾಪರಃ ॥ ೧೪ ॥

---

೧೧. ನಿಂದ್ಯವಾದ ಶೀಲ-ಆಚಾರವುಳ್ಳವರೂ, ನಿರರ್ಥಕವಾದ ವೇಷಗಳನ್ನು ಧರಿಸಿದ ಪಾಷಂಡಿ ಜನಗಳಿಂದ ಕೂಡಿದವರೂ ಆದ ಜನರು ಅನ್ಯೋನ್ಯವಾಗಿ ಸೇರಿ ಹೆಚ್ಚಾದ ಯಾಚನಾವೃತ್ತಿಯನ್ನು ಅವಲಂಬಿಸುವವರಾಗುತ್ತಾರೆ.

೧೨. ಕಲಿಯುಗದಲ್ಲಿ ದೇಶಗಳು ಅನ್ನ .ವಿಕ್ರಯಸ್ಥಾನಗಳಿಂದ ಪೂರ್ಣವೂ, ಮಾರ್ಗಗಳ ಸಂಧಿಸ್ಥಾನಗಳು ಶಿವಪ್ರತಿಮಾಧಾರಿಗಳಿಂದ ಪೂರ್ಣವೂ, ಪತಿರಹಿತರಾದ ಸ್ತ್ರೀಯರು ಕೇಶಧಾರಣ-ಸಂಸ್ಕಾರಶೂಲಸಹಿತರೂ ಆಗಿರುವರು.

೧೩. ಕಲಿಯುಗದ ಅಂತ ಸಮಯವು ಪ್ರಾಪ್ತವಾಗಲು ಶೂದ್ರರು ಶುಕ್ಲದಂತ-ಅಜಿನ ಧಾರಣಾದಿ ನಿಯಮಾನುಷ್ಠಾನವಂತರ ತೇಜಸ್ಸನ್ನು ಅನುಕರಿಸಿ ಶಿರೋ ಮುಂಡನ ಮಾಡಿಸಿ ಕಾಷಾಯ ವಸ್ತ್ರಗಳನ್ನು ಧರಿಸಿ ಧರ್ಮವನ್ನು ಆಚರಿಸುತ್ತಾರೆ.

೧೪. ಮತ್ತು ಸಸ್ಯಗಳನ್ನು ಅಪಹರಿಸುವವರೂ, ಪರವಸ್ತ್ರಗಳನ್ನು ಅಪಹರಿಸುವವರೂ, ಆದ ಚೋರರು ಸಂಭವಿಸುತ್ತಾರೆ. ಹಾಗು ಚೋರದ್ರವ್ಯವನ್ನು ಅಪಹರಿಸುವ ಮಹಾಚೋರರೂ, ಕಟುಕರನ್ನು ಕೊಲೆಮಾಡುವ ಮಹಾ ಕಟುಕರೂ ಜನಿಸುತ್ತಾರೆ.

ದುಃಖಪ್ರಚುರಮಲ್ಪಾಯುರ್ದೇಹೋತ್ಸಾದಃ ಸರೋಗತಾ ।
ಅಧರ್ಮಾಭಿನಿವೇಶತ್ವಾತ್ತಮೋವೃತ್ತಂ ಕಲೌ ಸ್ಮೃತಮ್ ॥ ೧೫ ॥

ಕಾಷಾಯಿಣೋಽಥ ನಿರ್ಗ್ರಂಥಾಸ್ತಥಾ ಕಾಪಾಲಿಕಾಶ್ಚ ಯೇ ।
ವೇದವಿಕ್ರಯಿಣಶ್ಚಾನ್ಯೇ ತೀರ್ಥವಿಕ್ರಯಿಣಃ ಪರೇ ॥ ೧೬ ॥

ಆಸನಸ್ಥಾನ್ ದ್ವಿಜಾನ್ ದೃಷ್ಟ್ವಾ ಚಾಲಯಂತ್ಯಲ್ಪಬುದ್ಧಯಃ ।
ತಾಡಯಂತಿ ದ್ವಿಜೇಂದ್ರಾಂಶ್ಚ ಶೂದ್ರಾ ರಾಜೋಪಜೀವಿನಃ ॥ ೧೭ ॥

ಉಚ್ಚಾಸನಸ್ಥಾಃ ಶೂದ್ರಾಶ್ಚ ದ್ವಿಜಮಧ್ಯೇ ಪರಂತಪ ।
ದ್ವಿಜಾವಮಾನಕರೋ ರಾಜಾ ಕಲೌ ಕಾಲಬಲೇನ ತು ॥ ೧೮ ॥

---

೧೫. ಆ ಕಲಿಯುಗದಲ್ಲಿ ದುಃಖಗಳ ಪ್ರಾಚುರ್ಯ, ಅಲ್ಪಾಯುಷ್ಯ, ದೇಹದ ಹಾನಿ, ರೋಗೋಪದ್ರವ ಮುಂತಾದ ದೋಷಗಳೂ, ಅಧರ್ಮದಲ್ಲಿ ಆಗ್ರಹವಿರುವುದರಿಂದ ತಮೋಗುಣ ವಿಕಾರದ ವರ್ತನೆಯೂ ಇರುವುವು.

೧೬. ಕಷಾಯ ವಸ್ತ್ರಧಾರಿಗಳಾದ ಬೌದ್ಧರೂ, ಕಾಪಾಲಿಕರೂ, ವೇದ ವಿಕ್ರಯಮಾಡುವವರೂ ಮತ್ತು ಪುಣ್ಯತೀರ್ಥ ವಿಕ್ರಯಮಾಡುವವರೂ ಆದ ಜನಗಳು ಕಲಿಯುಗದಲ್ಲಿ ಪ್ರವರ್ತಿಸುವರು.

೧೭. ಅಲ್ಪಬುದ್ಧಿಯುಳ್ಳ ಪಾಮರ ಜನರು ನಿಯಮದಿಂದ ಆಸನಸ್ಥರಾಗಿರುವ ದ್ವಿಜರನ್ನು ಕಂಡು ಅವರನ್ನು ಚಲನಮಾಡಿಸುವರು. ರಾಜೋಪಜೀವಿಗಳಾದ ಶೂದ್ರರು ಬ್ರಾಹ್ಮಣರನ್ನು ಹೊಡೆಯುವರು.

೧೮. ಶತ್ರುನಿಗ್ರಹದಕ್ಷನೇ ! ದ್ವಿಜಾತಿಗಳ ಮಧ್ಯದಲ್ಲಿ ಶೂದ್ರರು ಉಚ್ಚಾಸನದಲ್ಲಿ ಕುಳಿತುಕೊಳ್ಳುವರು. ಕಲಿಯುಗದಲ್ಲಿ ಕಾಲಮಹಿಮೆಯಿಂದ ರಾಜನು ದ್ವಿಜರಿಗೆ ಅವಮಾನವನ್ನು ಉಂಟುಮಾಡುವನು.

ಪುಷ್ಪೈಶ್ಚ ಭೂಷಣೈಶ್ಚೈವ ತಥಾನ್ಯೈರ್ಮಂಗಲೈರ್ದ್ವಿಜಾಃ ।
ಶೂದ್ರಾನ್ ಪರಿಚರಂತ್ಯಲ್ಪಶ್ರುತಭಾಗ್ಯಬಲಾನ್ವಿತಾಃ ॥ ೧೯ ॥

ನ ಪ್ರೇಕ್ಷಂತೇಽರ್ಚಿತಾಶ್ಚಾಪಿ ಶೂದ್ರಾ ದ್ವಿಜವರಾನ್ನೃಪ ।
ಸೇವಾವಸರಮಾಲೋಕ್ಯ ದ್ವಾರೇ ತಿಷ್ಠಂತಿ ಚ ದ್ವಿಜಾಃ ॥ ೨೦ ॥

ವಾಹನಸ್ಥಾನ್ ಸಮಾವೃತ್ಯ ಶೂದ್ರಾನ್ ಶೂದ್ರೋಪಜೀವಿನಃ ।
ಸೇವಂತೇ ಬ್ರಾಹ್ಮಣಾಸ್ತಾಂಸ್ತು ಸ್ತುವಂತಿ ಸ್ತುತಿಭಿಃ ಕಲೌ ॥ ೨೧ ॥

ಅಧ್ಯಾಪಯಂತಿ ವೈ ವೇದಾನ್ ಶೂದ್ರಾನ್ ಶೂದ್ರೋಪಜೀವಿನಃ ।
ಏವಂ ನಿರ್ವೇದಕಾನರ್ಥಾನ್ನಾಸ್ತಿಕ್ಯಂ ಘೋರಮಾಶ್ರಿತಾಃ ॥ ೨೨ ॥

---

೧೯. ಆಗ ದ್ವಿಜರು ಅಲ್ಪವಾದ ವೇದ-ಶಾಸ್ತ್ರಾಭ್ಯಾಸ, ಭಾಗ್ಯ, ಬಲಗಳಿಂದ ಕೂಡಿದವರಾಗಿ ಪುಷ್ಪ ಭೂಷಣ ಮತ್ತು ಇತರ ಮಂಗಳ ದ್ರವ್ಯಗಳನ್ನು ಒಪ್ಪಿಸಿ ಶೂದ್ರರನ್ನು ಸೇವಿಸುತ್ತಾರೆ.

೨೦. ಅರ್ಜುನನೆ ! ಹಾಗೆ ಶೂದ್ರರು ದ್ವಿಜರಿಂದ ಅರ್ಚಿಸಲ್ಪಟ್ಟಿದ್ದರೂ ಅಂತಹ ದ್ವಿಜೋತ್ತಮರನ್ನು ಕಣ್ಣೆತ್ತಿ ನೋಡುವುದಿಲ್ಲ. ಆಗ ದ್ವಿಜರು ಶೂದ್ರರ ಸೇವಾಸಮಯವನ್ನು ಕಾಯುತ್ತ ಅವರ ಗೃಹದ್ವಾರದಲ್ಲಿ ನಿಲ್ಲುವರು.

೨೧. ಶೂದ್ರರನ್ನು ಉಪಜೀವಿಸಿಕೊಂಡಿರುವ ಬ್ರಾಹ್ಮಣರು ವಾಹನಾರೂಢರಾಗಿರುವ ಶೂದ್ರ ಪ್ರಭುಗಳನ್ನು ಸೇವಿಸುತ್ತಾರೆ. ಕಲಿಯುಗದಲ್ಲಿ ಅಂತಹ ಬ್ರಾಹ್ಮಣಾಧಮರನ್ನು ಸ್ತುತಿ ವಚನಗಳಿಂದ ಸ್ತುತಿ ಗೈಯ್ಯುತ್ತಾರೆ.

೨೨. ಮತ್ತು ಶೂದ್ರಾನುಗ್ರಹದಿಂದ ಜೀವಿಸುವ ದ್ವಿಜರು ಶೂದ್ರರಿಗೆ ವೇದಗಳನ್ನು ಕಲಿಸುತ್ತಾರೆ. ಹೀಗೆ ಸಮಸ್ತ ಪ್ರಜೆಗಳು ವೇದಬಾಹ್ಯತೆಯ ಅರ್ಥಗಳನ್ನೂ ಘೋರವಾದ ನಾಸ್ತಿಕ್ಯವನ್ನೂ ಅವಲಂಬಿಸುತ್ತಾರೆ.

ತಪೋಯಜ್ಞಕಲಾನಾಂ ತು ವಿಕ್ರೇತಾರೋ ದ್ವಿಜೋತ್ತಮಾಃ ।
ಯತಯಶ್ಚ ಭವಿಷ್ಯಂತಿ ಶತಶೋಽಥ ಸಹಸ್ರಶಃ ॥ ೨೩ ॥

ನಾಶಯಂತಃ ಸ್ವಕಾನ್ ಧರ್ಮಾನಧಿಗಚ್ಛಂತಿ ತತ್ಪರಮ್ ।
ಗಾಯಂತಿ ಲೌಕಿಕೈರ್ಗಾನೈರ್ದೈವತಾನಿ ನರಾಧಿಪ ॥ ೨೪ ॥

ವಾಮಪಾಶುಪತಾಚಾರಾಸ್ತಥಾ ವೈ ಪಾಂಚರಾತ್ರಿಕಾಃ ।
ಭವಿಷ್ಯಂತಿ ಕಲೌ ತಸ್ಮಿನ್ ಬ್ರಾಹ್ಮಣಾಃ ಕ್ಷತ್ರಿಯಾಸ್ತಥಾ ॥ ೨೫ ॥

ಜ್ಞಾನೇ ಕರ್ಮಣ್ಯುಪಗತೇ ಲೋಕೇ ನಿಷ್ಕ್ರಿಯತಾಂ ಗತೇ ।
ಕೀಟಮೂಷಿಕಸರ್ಪಾಶ್ಚ ಧರ್ಷಯಿಷ್ಯಂತಿ ಮಾನುಷಾನ್ ॥ ೨೬ ॥

---

೨೩. ದ್ವಿಜೋತ್ತಮರು ತಮ್ಮ ತಪಸ್ಸು, ಯಜ್ಞ ಮತ್ತು ಕಲಾವಿಶೇಷಗಳನ್ನು ಅನಧಿಕಾರಿಗಳಿಗೆ ವಿಕ್ರಯಿಸುವವರಾಗುವರು. ಹಾಗು ಶತ-ಸಹಸ್ರ ಸಂಖ್ಯೆಯಷ್ಟು ಅಧಿಕ ಮಂದಿ ಯತಿಗಳಾಗುವರು.

೨೪. ಮತ್ತು ಸರ್ವ ಮಾನವರು ಸ್ವಧರ್ಮಗಳನ್ನು ಬಿಟ್ಟು ಧರ್ಮಸ್ಥಾನದಲ್ಲಿ ಅಧರ್ಮವನ್ನು ಆಚರಿಸುತ್ತಾರೆ. ನರಪತಿಯೆ ! ಲೌಕಿಕವಾದ ಗಾನಗಳಿಂದ ದೇವತೆಗಳನ್ನು ಗಾನಮಾಡುತ್ತಾರೆ.

೨೫. ಕಲಿಯುಗದಲ್ಲಿ ಬ್ರಾಹ್ಮಣರೂ ಮತ್ತು ಕ್ಷತ್ರಿಯರೂ ವಾಮಾಚಾರ ಗಳಲ್ಲಿ ಸೇರಿದ ಪಾಶುಪತಾಗಮ, ಪಾಂಚಾರಾತ್ರಾಗಮಗಳ ಆಚಾರದಲ್ಲಿ ತತ್ಪರ ರಾಗಿರುವರು.

೨೬. ಆಗ ಲೋಕಗಳಲ್ಲಿ ಜ್ಞಾನ ಮತ್ತು ಕರ್ಮಮಾರ್ಗಗಳು ಖಿಲವಾಗಿ ಲೋಕವು ಕ್ರಿಯಾರಹಿತವಾಗಿರಲು ಕ್ರಿಮಿ, ಮೂಷಕ ಮತ್ತು ಸರ್ಪ ಮುಂತಾದ ಈತಿಬಾಧೆಗಳು ಜನರನ್ನು ಪೀಡಿಸುತ್ತವೆ.

ಕುರ್ವಂತಿ ಚಾವತಾರಾಣಿ ಬ್ರಾಹ್ಮಣಾನಾಂ ಕುಲೇಷು ವೈ ।
ದೇವೀಶಾಪವಿನಿರ್ದಗ್ಧಾಃ ಪುರಾ ದಕ್ಷಾಧ್ವರೇ ದ್ವಿಜಾಃ ॥ ೨೭ ॥

ನಿಂದಂತಿ ಚ ಮಹಾದೇವಂ ತಾಮಸಾವಿಷ್ಟಚೇತಸಃ ।
ವೃಥಾ ಧರ್ಮಂ ಚರಿಷ್ಯಂತಿ ಕಲೌ ತಸ್ಮಿನ್ ಯುಗಾಂತಿಕೇ ॥ ೨೮ ॥

ಸರ್ವೇ ವೀರಾ ಭವಿಷ್ಯಂತಿ ಬ್ರಾಹ್ಮಣಾದ್ಯಾಃ ಸ್ವಜಾತಿಷು ।
ಯೇ ಚಾನ್ಯೇ ಶಾಪನಿರ್ದಗ್ಧಾ ಗೌತಮಸ್ಯ ಮಹಾತ್ಮನಃ ॥ ೨೯ ॥

ಸರ್ವೇ ತೇಽವತರಿಷ್ಯಂತಿ ಬ್ರಾಹ್ಮಣಾಸ್ತಾಸು ಯೋನಿಷು ।
ವಿನಿಂದಂತಿ ಹೃಷೀಕೇಶಂ ಬ್ರಾಹ್ಮಣಾ ಬ್ರಹ್ಮವಾದಿನಃ ॥ ೩೦ ॥

---

೨೭. ಪೂರ್ವದಲ್ಲಿ ದಕ್ಷಬ್ರಹ್ಮನ ಯಜ್ಞಕರ್ಮದಲ್ಲಿ ದೇವೀಶಾಪದಿಂದ ದಗ್ಧರಾಗಿರುವ ದ್ವಿಜರು ಕಲಿಯುಗದಲ್ಲಿ ಪ್ರಶಸ್ತ ಬ್ರಾಹ್ಮಣರ ವಂಶಗಳಲ್ಲಿ ಜನ್ಮವನ್ನು ಎತ್ತುವರು.

೨೮. ತಮೋಗುಣದ ವಿಕಾರದಿಂದ ಆವಿಷ್ಟವಾದ ಚಿತ್ತವುಳ್ಳ ಮಾನವರು ಮಹಾದೇವನನ್ನು ನಿಂದಿಸುವರು. ಮತ್ತು ಕಲಿಯುಗದ ಅಂತಿಮಭಾಗವು ಪ್ರಾಪ್ತವಾಗಲು ವ್ಯರ್ಥಧರ್ಮಗಳನ್ನು ಮಾಡುವರು.

೨೯. ಬ್ರಾಹ್ಮಣ ಮುಂತಾದ ಸಮಸ್ತ ಜನರು ಸ್ವಸ್ವಜಾತಿಗಳಲ್ಲಿ ಬಲು ವೀರರಾಗಿ ಜನಿಸುವರು. ಮಹಾತ್ಮನಾದ ಗೌತಮಮುನಿಯ ಶಾಪದಿಂದ ದಗ್ಧರಾದ ಇತರ ಜನಗಳು ಕಲಿಯುಗದಲ್ಲಿ ತಪ್ಪದೇ ಅವತರಿಸುವರು.

೩೦. ಆ ಬ್ರಾಹ್ಮಣರು ಪಾಪಯೋನಿಗಳಲ್ಲಿ ಜನ್ಮವನ್ನು ಹೊಂದುತ್ತಾರೆ. ಮತ್ತು ಬ್ರಹ್ಮವಾದಿಗಳಾದ ಬ್ರಾಹ್ಮಣರೆನಿಸಿಕೊಂಡು ಸರ್ವೇಂದ್ರಿಯ ಪ್ರೇರಕನಾದ ಮಹಾವಿಷ್ಣುವನ್ನು ನಿಂದಿಸುತ್ತಾರೆ.

ವೇದಬಾಹ್ಯವ್ರತಾಚಾರಾ ದುರಾಚಾರಾ ವೃಥಾಶ್ರಮಾಃ ।
ಮೋಹಯಂತಿ ಜನಾನ್ ಸರ್ವಾನ್ ದರ್ಶಯಿತ್ವಾ ಫಲಾನಿ ಚ ॥ ೩೧ ॥

ತಮಸಾವಿಷ್ಟಮನಸೋ ಬೈಡಾಲವ್ರತಿಕಾಧಮಾಃ ।
ಕಲೌ ರುದ್ರೋ ಮಹಾದೇವೋ ಲೋಕಾನಾಮೀಶ್ವರಃ ಪರಃ ॥ ೩೨ ॥

ತದೇವ ಸಾಧಯೇನ್ನೄಣಾಂ ದೈವತಾನಾಂ ಚ ದೈವತಮ್ ।
ಕರಿಷ್ಯತ್ಯವತಾರಾಣಿ ಶಂಕರೋ ನೀಲಲೋಹಿತಃ ॥ ೩೩ ॥

ಶ್ರೌತಸ್ಮಾರ್ತಪ್ರತಿಷ್ಠಾರ್ಥಂ ಭಕ್ತಾನಾಂ ಹಿತಕಾಮ್ಯಯಾ ।
ಉಪದೇಕ್ಷ್ಯತಿ ತಜ್ಜ್ಞಾನಂ ಶಿಷ್ಯಾಣಾಂ ಬ್ರಹ್ಮಸಂಜ್ಞಿತಮ್ ॥ ೩೪ ॥

---

೩೧. ವೇದಕ್ಕೆ ಬಾಹ್ಯವಾದ ವ್ರತಾಚರಣೆಯುಳ್ಳವರೂ, ದುರಾಚಾರಿಗಳೂ, ವೃಥಾ ಶ್ರಮಪಡುವವರೂ ಆದ ಬ್ರಾಹ್ಮಣರು ಸ್ವಕರ್ಮಫಲಗಳನ್ನು ಮಹತ್ತಾಗಿ ಪ್ರದರ್ಶಿಸಿ ಮೋಹಗೊಳಿಸುತ್ತಾರೆ.

೩೨. ಮತ್ತು ತಮೋಗುಣದಿಂದ ಆವಿಷ್ಟವಾದ ಚಿತ್ತವುಳ್ಳವರಾಗಿ, ಬಿಡಾಲ ದಂತೆ ಸ್ವಾರ್ಥಸಾಧನ ವ್ರತವನ್ನು ಧರಿಸಿದ ಅಧಮರಾಗಿ ಬಾಳುವರು. ಅಂತಹ ದುಷ್ಕಾಲದಲ್ಲಿ ಮಹಾದೇವನೂ ಲೋಕೇಶ್ವರನೂ ಮತ್ತು ಪರಮಾತ್ಮನೂ ಆದ ಶಂಕರನು ಅವತರಿಸುವನು.

೩೩. ಸಮಸ್ತ ದೇವತೆಗಳಿಗೆ ದೇವತಾರೂಪಿಯಾದ ಪರಮೇಶ್ವರನು ಮಾನವರಿಗೆ ಅದರಿಂದಲೇ ಸಿದ್ಧಿಯನ್ನು ಕೊಡುವನು. ಮತ್ತು ನೀಲ ಲೋಹಿತ ವರ್ಣಗಳಿಂದ ಕೂಡಿದ ಶಂಕರನು ಕಲಿಯುಗದಲ್ಲಿ ಅವತಾರಮಾಡುವನು.

೩೪. ಮತ್ತು ಶಂಕರನು ಶ್ರೌತ-ಸ್ಮಾರ್ತ ಕರ್ಮಗಳ ಪ್ರತಿಷ್ಠೆಗೋಸ್ಕರವೂ, ಭಕ್ತರಿಗೆ ಹಿತವನ್ನು ಮಾಡುವುದಕ್ಕೋಸ್ಕರವೂ, ಶಿಷ್ಯಜನರಿಗೆ ಬ್ರಹ್ಮ ಎಂಬ ಸಂಜ್ಞೆ ಯುಳ್ಳ ಜ್ಞಾನಯೋಗವನ್ನು ಉಪದೇಶಿಸುವನು.

ಸರ್ವವೇದಾಂತಸಾರಂ ಹಿ ಧರ್ಮಾನ್ ವೇದನಿದರ್ಶಿತಾನ್ ।
ಸರ್ವವರ್ಣಾನ್ ಸಮುದ್ದಿಶ್ಯ ಸ್ವಧರ್ಮಾ ಯೇ ನಿದರ್ಶಿತಾಃ ॥ ೩೫ ॥

ಯೇ ತಂ ಪ್ರೀತಾ ನಿಷೇವಂತೇ ಯೇನ ಕೇನೋಪಚಾರತಃ ।
ವಿಜಿತ್ಯ ಕಲಿಜಾನ್ ದೋಷಾನ್ ಯಾಂತಿ ತೇ ಪರಮಂ ಪದಮ್ ॥೩೬॥

ಅನಾಯಾಸೇನ ಸುಮಹತ್ ಪುಣ್ಯಮಾಪ್ನೋತಿ ಮಾನವಃ ।
ಅನೇಕದೋಷದುಷ್ಟಸ್ಯ ಕಲೇರೇಕೋ ಮಹಾನ್ ಗುಣಃ ॥ ೩೭ ॥

ತಸ್ಮಾತ್ ಸರ್ವಪ್ರಯತ್ನೇನ ಪ್ರಾಪ್ಯ ಮಾಹೇಶ್ವರಂ ಯುಗಮ್ ।
ವಿಶೇಷಾದ್ಬ್ರಾಹ್ಮಣೋ ರುದ್ರಮೀಶಾನಂ ಶರಣಂ ವ್ರಜೇತ್ ॥ ೩೮ ॥

---

೩೫. ಮತ್ತು ಸಮಸ್ತ ವರ್ಣಗಳನ್ನು ಉದ್ದೇಶಿಸಿ ಸ್ವಧರ್ಮಾಚರಣೆಯ ನಿದರ್ಶನಗಳಿಂದ ಕೂಡಿದ ವೇದ ಪ್ರತಿಪಾದ್ಯವಾದ ಸನಾತನ ಧರ್ಮಗಳನ್ನೂ ಸಮಸ್ತ ವೇದಾಂತಗಳ ಸಾರವನ್ನೂ ಉಪದೇಶಿಸುವನು.

೩೬. ಯಾವ ಮಾನವರು ಶಂಕರನಲ್ಲಿ ಪ್ರೀತಿಗೊಂಡವರಾಗಿ ಯಾವುದಾದರೊಂದು ವಿಧದ ಉಪಚಾರದಿಂದ ಸೇವಿಸುವರೋ, ಅವರು ಕಲಿಯುಗದ ದೋಷಗಳನ್ನು ಕಳೆದುಕೊಂಡು ಪರಮಪದವನ್ನು ಹೊಂದುತ್ತಾರೆ.

೩೭. ಕಲಿಯುಗದಲ್ಲಿ ಮಾನವನು ಅನಾಯಾಸದಿಂದ ಮಹತ್ತಾದ ಪುಣ್ಯವನ್ನು ಗಳಿಸುತ್ತಾನೆ. ಅನೇಕವಾದ ದೋಷಗಳಿಂದ ದುಷ್ಟವಾದ ಕಲಿಯುಗದಲ್ಲಿ ಇದೊಂದು ಮಹತ್ತಾದ ಗುಣವು.

೩೮. ಆದುದರಿಂದ ಬ್ರಾಹ್ಮಣನು ಮಹೇಶ್ವರನ ಸಂಬಂಧಿಯಾದ ಈ ಕಲಿಯುಗವನ್ನು ಹೊಂದಿ ಸಮಸ್ತ ಪ್ರಯತ್ನಗಳಿಂದಲೂ ವಿಶೇಷವಾಗಿ ಸರ್ವೇಶ್ವರನಾದ ರುದ್ರನನ್ನು ಶರಣುಹೊಂದಬೇಕು.

ಯೇ ನಮಂತಿ ವಿರೂಪಾಕ್ಷಮೀಶಾನಂ ಕೃತ್ತಿವಾಸಸಮ್ ।
ಪ್ರಸನ್ನಚೇತಸೋ ರುದ್ರಂ ತೇ ಯಾಂತಿ ಪರಮಂ ಪದಮ್ ॥ ೩೯ ॥

ಯಥಾ ರುದ್ರನಮಸ್ಕಾರಾನ್ನ ತತ್ಫಲಮವಾಪ್ನುಯಾತ್ ॥ ೪೦ ॥

ಏವಂವಿಧೇ ಕಲಿಯುಗೇ ದೋಷಾಣಾಮೇವ ಶೋಧನಮ್ ।
ಮಹಾದೇವನಮಸ್ಕಾರೋ ಧ್ಯಾನಂ ದಾನಮಿತಿ ಶ್ರುತಿಃ ॥ ೪೧ ॥

ತಸ್ಮಾದನೀಶ್ವರಾನನ್ಯಾನ್ ತ್ಯಕ್ತ್ವಾ ದೇವಂ ಮಹೇಶ್ವರಮ್ ।
ಸಮಾಶ್ರಯೇದ್ವಿರೂಪಾಕ್ಷಂ ಯದೀಚ್ಛೇತ್ಪರಮಂ ಪದಮ್ ॥ ೪೨ ॥

---

೩೯. ವಿರೂಪವಾದ ನೇತ್ರಗಳಿಂದ ಕೂಡಿದವನೂ, ಸರ್ವೇಶ್ವರನೂ, ಗಜ ಚರ್ಮಾಂಬರವನ್ನು ಧರಿಸಿದವನೂ, ಆದ ರುದ್ರಮೂರ್ತಿಯನ್ನು ಪ್ರಸಾದ ಪೂರ್ಣವಾದ ಮಾನಸದಿಂದ ನಮಿಸಿದ ಮಾನವರು ಪರಮ ಪದವಿಯನ್ನು ಹೊಂದುತ್ತಾರೆ.

೪೦. ಈ ಯುಗದಲ್ಲಿ ರುದ್ರಮೂರ್ತಿಯ ನಮಸ್ಕಾರವು ನಿಯತವಾಗಿ ಹೇಗೆ ಸರ್ವಕಾಮಗಳನ್ನು ಫಲಿಸುವುದೋ ; ಹಾಗೆ ಬೇರೆ ದೇವತೆಗಳ ನಮಸ್ಕಾರದಿಂದ ಆ ಫಲಗಳನ್ನು ಹೊಂದಲಾಗುವುದಿಲ್ಲ.

೪೧. ಈ ವಿಧವಾದ ಕಲಿಯುಗದಲ್ಲಿ ಮಹಾದೇವನ ನಮಸ್ಕಾರವೂ, ಧ್ಯಾನವೂ, ದಾನವೂ, ಯುಗದೋಷಗಳನ್ನು ಶೋಧಿಸುವ ಪ್ರಾಯಶ್ಚಿತ್ತವೆಂದು ಶ್ರುತಿಯು ನುಡಿಯುವುದು.

೪೨. ಆದ್ದರಿಂದ ಸದ್ಗತಿರೂಪವಾದ ಪರಮಪದವನ್ನು ಅಪೇಕ್ಷಿಸುವ ಮಾನವನು ಈಶ್ವರನಲ್ಲದ ಬೇರೆ ದೇವತೆಗಳನ್ನು ಬಿಟ್ಟು ವಿರೂಪವಾದ ನೇತ್ರಗಳುಳ್ಳ ಮಹೇಶ್ವರಸ್ವಾಮಿಯನ್ನು ಸೇವಿಸಬೇಕು.

ನಾರ್ಚಯಂತೀಹ ಯೇ ರುದ್ರಂ ಶಿವಂ ತ್ರಿದಶವಂದಿತಮ್ ।
ತೇಷಾಂ ದಾನಂ ತಪೋ ಯಜ್ಞೋ ವೃಥಾ ಜೀವಿತಮೇವ ಚ ॥ ೪೩ ॥

ನಮೋ ರುದ್ರಾಯ ಮಹತೇ ದೇವದೇವಾಯ ಶೂಲಿನೇ ।
ತ್ರ್ಯಂಬಕಾಯ ತ್ರಿನೇತ್ರಾಯ ಯೋಗಿನಾಂ ಗುರವೇ ನಮಃ ॥ ೪೪ ॥

ನಮೋಽಸ್ತು ದೇವದೇವಾಯ ಮಹಾದೇವಾಯ ವೇಧಸೇ ।
ಶಂಭವೇ ಸ್ಥಾಣವೇ ನಿತ್ಯಂ ಶಿವಾಯ ಪರಮೇಷ್ಠಿನೇ ॥ ೪೫ ॥

ನಮಃ ಸೋಮಾಯ ರುದ್ರಾಯ ಮಹಾಗ್ರಾಸಾಯ ಹೇತವೇ ।
ಪ್ರಪದ್ಯೇಽಹಂ ವಿರೂಪಾಕ್ಷಂ ಶರಣ್ಯಂ ಬ್ರಹ್ಮಚಾರಿಣಮ್ ॥ ೪೬ ॥

---

೪೩. ಯಾವ ಮಾನವರು ದೇವತೆಗಳಿಗೆ ವಂದನಾರ್ಹನೂ, ಮಂಗಳಮಯನೂ, ಆದ ರುದ್ರನನ್ನು ಅರ್ಚಿಸುವುದಿಲ್ಲವೋ, ಅವರ ದಾನ-ತಪಸ್ಸು-ಯಜ್ಞಮುಂತಾದ ಸತ್ಕರ್ಮಗಳೂ ಕಡೆಗೆ ಜೀವಧಾರಣವೂ ವ್ಯರ್ಥವಾಗುವುವು.

೪೪. ರುದ್ರಮೂರ್ತಿಯೂ, ಮಹಾತ್ಮನೂ, ದೇವೋತ್ತಮನೂ, ಶೂಲಧಾರಿಯೂ, ತ್ರಿನೇತ್ರನೂ, ತ್ರಿಮೂರ್ತಿಗಳ ಪ್ರಭುವೂ ಮತ್ತು ಯೋಗಿಗಳ ಗುರುವೂ ಆದ ಮಹಾದೇವನಿಗೆ ನಮಸ್ಕಾರವು.

೪೫. ಮತ್ತು ದೇವೋತ್ತಮನೂ, ಮಹಾದೇವನೂ, ಸೃಷ್ಟಿಕರ್ತನೂ, ಸುಖಕರನೂ, ಶಾಶ್ವತನೂ, ಮಂಗಳಮಯನೂ ಮತ್ತು ಪರಮಸ್ಥಾನದಲ್ಲಿರುವವನೂ ಆದ ಶಿವನಿಗೆ ಯಾವಾಗಲೂ ನಮಸ್ಕಾರವು.

೪೬. ಪಾರ್ವತೀರಮಣನೂ, ರುದ್ರಮೂರ್ತಿಯೂ, ಮಹಾಸಂಹಾರಕನೂ, ಜಗತ್ಕಾರಣನೂ ಆದ ಶಿವನಿಗೆ ನಮಸ್ಕಾರವು. ನಾನು ವಿರೂಪವಾದ ನೇತ್ರಗಳುಳ್ಳವನೂ, ಶರಣಾಗತ ವತ್ಸಲನೂ, ಬ್ರಹ್ಮಚಾರಿಯೂ ಆದ ಶಿವನನ್ನು ಶರಣು ಹೊಂದುವೆನು.

ಮಹಾದೇವಂ ಮಹಾಯೋಗಮೀಶಾನಂ ಚಾಂಬಿಕಾಪತಿಮ್ ।
ಯೋಗಿನಾಂ ಯೋಗದಾತಾರಂ ಯೋಗಮಾಯಾಸಮಾವೃತಮ್ ॥೪೭॥

ಯೋಗಿನಾಂ ಗುರುಮಾಚಾರ್ಯಂ ಯೋಗಿಗಮ್ಯಂ ಪಿನಾಕಿನಮ್ ।
ಸಂಸಾರತರಣಂ ರುದ್ರಂ ಬ್ರಹ್ಮಾಣಂ ಬ್ರಹ್ಮಣೋಽಧಿಪಮ್ ॥ ೪೮ ॥

ಶಾಶ್ವತಂ ಸರ್ವಗಂ ಶಾಂತಂ ಬ್ರಹ್ಮಣ್ಯಂ ಬ್ರಾಹ್ಮಣಪ್ರಿಯಮ್ ।
ಕಪರ್ದಿನಂ ಕಾಲಮೂರ್ತಿಮಮೂರ್ತಿಂ ಪರಮೇಶ್ವರಮ್ ॥ ೪೯ ॥

ಏಕಮೂರ್ತಿಂ ಮಹಾಮೂರ್ತಿಂ ವೇದವೇದ್ಯಂ ದಿವಸ್ಪತಿಮ್ ।
ನೀಲಕಂಠಂ ವಿಶ್ವಮೂರ್ತಿಂ ವ್ಯಾಪಿನಂ ವಿಶ್ವರೇತಸಮ್ ॥ ೫೦ ॥

---

೪೭. ಮಹಾದೇವನೂ, ಮಹಾಯೋಗಿಯೂ, ಜಗದೀಶ್ವರನೂ, ಪಾರ್ವತಿಯ ರಮಣನೂ, ಯೋಗಿಗಳಿಗೆ ಯೋಗಸಿದ್ಧಿಯನ್ನು ಕೊಡುವವನೂ ಮತ್ತು ಯೋಗ ಮಾಯೆಯಿಂದ ಆವರಿಸಲ್ಪಟ್ಟವನೂ ಆದ ಶಿವನನ್ನು ಶರಣು ಹೊಂದುವೆನು.

೪೮. ಯೋಗಿಗಳ ಗುರುವೂ, ಆಚಾರ್ಯನೂ, ಯೋಗಿಗಳಿಗೆ ವೇದ್ಯನೂ, ಪಿನಾಕಧಾರಿಯೂ, ಸಂಸಾರದುಃಖವನ್ನು ನಿವಾರಿಸುವವನೂ, ಬ್ರಹ್ಮರೂಪಿಯೂ ಮತ್ತು ಬ್ರಹ್ಮನ ಅಧಿಪತಿಯೂ ಆದ ರುದ್ರನನ್ನು ಶರಣುಹೊಂದುವೆನು.

೪೯. ಶಾಶ್ವತನೂ, ಸರ್ವವ್ಯಾಪಿಯೂ, ಶಾಂತಾಕಾರನೂ, ಬ್ರಾಹ್ಮಣ ಪ್ರಿಯನೂ, ವೇದಯೋನಿಯೂ, ಜಟಾಮಂಡಲಧಾರಿಯೂ, ಕಾಲಸ್ವರೂಪನೂ ಆದ ಪರಮೇಶ್ವರನನ್ನು ಶರಣುಹೊಂದುವೆನು.

೫೦. ಒಂದೇ ಮೂರ್ತಿಯುಳ್ಳವನೂ, ಮಹತ್ತಾದ ಮೂರ್ತಿಯುಳ್ಳವನೂ, ವೇದಗಳಿಂದ ವೇದ್ಯನೂ, ದ್ಯುಲೋಕಕ್ಕೆ ಪತಿಯೂ, ನೀಲಕಂಠನೂ, ವಿಶ್ವರೂಪಿಯೂ, ವ್ಯಾಪಕನೂ ಮತ್ತು ವಿಶ್ವಸೃಷ್ಟಿವಿಧಾಯಕನೂ ಆದ ಶಿವನನ್ನು ಶರಣುಹೊಂದುವೆನು.

ಕಾಲಾಗ್ನಿಂ ಕಾಲದಹನಂ ಕಾಮದಂ ಕಾಮನಾಶನಮ್ ।
ನಮಸ್ಯೇ ಗಿರಿಶಂ ದೇವಂ ಚಂದ್ರಾವಯವಭೂಷಣಮ್ ॥ ೫೧ ॥

ವಿಲೋಹಿತಂ ಲೇಲಿಹಾನಮಾದಿತ್ಯಂ ಪರಮೇಷ್ಠಿನಮ್ ।
ಉಗ್ರಂ ಪಶುಪತಿಂ ಭೀಮಂ ಭಾಸ್ಕರಂ ಪರಮಂ ತಪಃ ॥ ೫೨ ॥

ಇತ್ಯೇತಲ್ಲಕ್ಷಣಂ ಪ್ರೋಕ್ತಂ ಯುಗಾನಾಂ ವೈ ಸಮಾಸತಃ ।
ಅತೀತಾನಾಗತಾನಾಂ ವೈ ಯಾವನ್ಮನ್ವಂತರಕ್ಷಯಃ ॥ ೫೩ ॥

ಮನ್ವಂತರೇಣ ಚೈಕೇನ ಸರ್ವಾಣ್ಯೇವಾಂತರಾಣಿ ವೈ ।
ವ್ಯಾಖ್ಯಾತಾನಿ ನ ಸಂದೇಹಃ ಕಲ್ಪಃ ಕಲ್ಪೇನ ಚೈವ ಹಿ ॥ ೫೪ ॥

---

೫೧. ಕಾಲಾಗ್ನಿ ಮತ್ತು ಕಾಲದಹನ ಎಂಬ ಪವಿತ್ರ ನಾಮಾಂಕಿತನೂ, ಪ್ರಳಯಾಗ್ನಿಸ್ವರೂಪನೂ, ಇಷ್ಟಾರ್ಥಗಳನ್ನು ಕೊಡುವವನೂ, ಕಾಮನನ್ನು ದಹಿಸಿದವನೂ, ಚಂದ್ರಕಲೆಯಿಂದ ಶಿರವನ್ನು ಭೂಷಿಸಿದವನೂ ಮತ್ತು ಕೈಲಾಸವಾಸಿಯೂ ಆದ ಶಿವನನ್ನು ನಮಸ್ಕರಿಸುವೆನು.

೫೨. ರಕ್ತವರ್ಣವುಳ್ಳವನೂ, ಜಗತ್ತನ್ನು ಆಸ್ವಾದಿಸುವವನೂ, ಆದಿತ್ಯರೂಪನೂ, ಬ್ರಹ್ಮಸ್ವರೂಪನೂ, ಉಗ್ರರೂಪಿಯೂ, ಬ್ರಹ್ಮಾದಿ ಪಶುಪಾಲಕನೂ, ಭೀಮಮೂರ್ತಿಯೂ, ತೇಜೋಮಯನೂ ಮತ್ತು ತಮೋಗುಣಾತೀತನೂ ಆದ ಶಿವನಿಗೆ ವಂದನೆಯು.

೫೩. ಈರೀತಿಯಾಗಿ ಮನ್ವಂತರಗಳು ಕ್ಷಯಿಸುವವರೆಗೂ, ನಡೆಯುವ ಅತೀತ ಅಥವಾ ಅನಾಗತವಾದ ಸಮಸ್ತಯುಗಗಳ ಲಕ್ಷಣವು ಸಂಗ್ರಹವಾಗಿ ಹೇಳಲ್ಪಟ್ಟಿದೆ.

೫೪. ಒಂದು ಮನ್ವಂತರದ ವರ್ಣನೆಯಿಂದ ಸಮಸ್ತಮನ್ವಂತರಗಳು ವ್ಯಾಖ್ಯಾನ ಮಾಡಲ್ಪಟ್ಟಂತೆಯೂ, ಒಂದು ಕಲ್ಪದ ವರ್ಣನೆಯಿಂದ ಸಮಸ್ತಕಲ್ಪಗಳು ವಿವರಿಸಲ್ಪಟ್ಟಂತೆಯೂ ಆಗುವುವು. ಇದರಲ್ಲಿ ಸಂದೇಹವಿಲ್ಲ.

ಮನ್ವಂತರೇಷು ಚೈತೇಷು ಅತೀತಾನಾಗತೇಷು ವೈ ।
ತುಲ್ಯಾಭಿಮಾನಿನಃ ಸರ್ವೇ ನಾಮರೂಪೈರ್ಭವಂತ್ಯುತ ॥ ೫೫ ॥

ಏವಮುಕ್ತೋ ಭಗವತಾ ಕಿರೀಟೀ ಶ್ವೇತವಾಹನಃ ।
ಬಭಾರ ಪರಮಾಂ ಭಕ್ತಿಮೀಶಾನೇಽವ್ಯಭಿಚಾರಿಣೀಮ್ ॥ ೫೬ ॥

ನಮಶ್ಚಕಾರ ತಮೃಷಿಂ ಕೃಷ್ಣದ್ವೈಪಾಯನಂ ಪ್ರಭುಮ್ ।
ಸರ್ವಜ್ಞಂ ಸರ್ವಕರ್ತಾರಂ ಸಾಕ್ಷಾದ್ವಿಷ್ಣುಂ ವ್ಯವಸ್ಥಿತಮ್ ॥ ೫೭ ॥

ತಮುವಾಚ ಪುನರ್ವ್ಯಾಸಃ ಪಾರ್ಥಂ ಪರಪುರಂಜಯಮ್ ।
ಕರಾಭ್ಯಾಂ ಸುಶುಭಾಭ್ಯಾಂ ಚ ಸಂಸ್ಪೃಶ್ಯ ಪ್ರಣತಂ ಮುನಿಃ ॥ ೫೮ ॥

---

೫೫. ಅತೀತ–ಅನಾಗತ ಮುಂತಾದ ಸಕಲಮನ್ವಂತರಗಳಲ್ಲಿ ತುಲ್ಯವಾದ ನಾಮ ಮತ್ತು ರೂಪಗಳಿಂದ ಕೂಡಿದ ಸಮಸ್ತ ಪ್ರಜೆಗಳೂ ತುಲ್ಯವಾದ ಅಭಿಮಾನ ದಿಂದ ಇರುವರು.

೫೬. ಹೀಗೆಂದು ಪೂಜ್ಯನಾದ ವ್ಯಾಸಮುನಿಯಿಂದ ಹೇಳಲ್ಪಟ್ಟ ಶ್ವೇತವಾದ ಅಶ್ವವಾಹನವುಳ್ಳ ಅರ್ಜುನನು ಈಶ್ವರನಲ್ಲಿ ಚಂಚಲವಾಗದ ಪರಮಭಕ್ತಿಯನ್ನು ಇಟ್ಟನು.

೫೭. ಮತ್ತು ಪ್ರಭುವೂ, ಸರ್ವಜ್ಞನೂ, ಸರ್ವಕರ್ತನೂ, ಸಾಕ್ಷಾತ್ ವಿಷ್ಣು ವಿನ ಅಂಶದಿಂದ ಅವತರಿಸಿದವನೂ ಆದ ಆ ಕೃಷ್ಣದ್ವೈಪಾಯನ ಮಹರ್ಷಿಯನ್ನು ನಮಸ್ಕರಿಸಿದನು.

೫೮. ಆಗ ವ್ಯಾಸಮುನಿಯು ಶತ್ರುನಗರಗಳನ್ನು ಜಯಿಸುವ ಶೀಲವುಳ್ಳ, ತನ್ನನ್ನು ನಮಸ್ಕರಿಸಿದ, ಆ ಪಾರ್ಥನನ್ನು ಮಂಗಳಕರವಾದ ತನ್ನ ಹಸ್ತಗಳಿಂದ ಸ್ಪರ್ಶಿಸಿ ಮತ್ತೆ ಹೀಗೆಂದು ಹೇಳಿದನು.

ಧನ್ಯೋಽಸ್ಯನುಗೃಹೀತೋಽಸಿ ತ್ವಾದೃಶೋಽನ್ಯೋ ನ ವಿದ್ಯತೇ ।
ತ್ರೈಲೋಕ್ಯೇ ಶಂಕರೇ ನೂನಂ ಭಕ್ತಃ ಪರಪುರಂಜಯಃ ॥ ೫೯ ॥

ದೃಷ್ಟವಾನಸಿ ತಂ ದೇವಂ ವಿಶ್ವಾಕ್ಷಂ ವಿಶ್ವತೋಮುಖಮ್ ।
ಪ್ರತ್ಯಕ್ಷಮೇವ ಸರ್ವೇಷಾಂ ರುದ್ರಂ ಸರ್ವಜಗನ್ಮಯಮ್ । ॥ ೬೦ ॥

ಜ್ಞಾನಂ ತದೈಶ್ವರಂ ದಿವ್ಯಂ ಯಥಾವದ್ವಿದಿತಂ ತ್ವಯಾ ।
ಸ್ವಯಮೇವ ಹೃಷೀಕೇಶಃ ಪ್ರೀತ್ಯೋವಾಚ ಸನಾತನಃ ॥ ೬೧ ॥

ಗಚ್ಛ ಗಚ್ಛ ಸ್ವಕಂ ಸ್ಥಾನಂ ನ ಶೋಕಂ ಕರ್ತುಮರ್ಹಸಿ ।
ಯಜಸ್ವ ಪರಯಾ ಭಕ್ತ್ಯಾ ಶರಣ್ಯಂ ಶರಣಂ ಶಿವಮ್ ॥ ೬೨ ॥

---

೫೯. ಅರ್ಜುನನೇ ! ಶತ್ರು ನಗರಗಳನ್ನು ಭಂಜಿಸುವ ನೀನು ಧನ್ಯನಾದೆ ; ಅನುಗ್ರಹಿಸಲ್ಪಟ್ಟವನಾದೆ ; ಮೂರುಲೋಕಗಳಲ್ಲಿ ನಿನ್ನಂತೆ ಶಂಕರನಲ್ಲಿ ಪರಮ ಭಕ್ತನು ಮತ್ತೊಬ್ಬನಿಲ್ಲ.

೬೦. ನೀನು ವಿಶ್ವರೂಪವಾದ ನೇತ್ರವುಳ್ಳವನೂ, ಸರ್ವತೋಮುಖವುಳ್ಳವನೂ, ಸರ್ವಜಗನ್ಮಯನೂ, ಸರ್ವಪ್ರಾಣಿಗಳಿಗೆ ಗೋಚರನೂ ಮತ್ತು ರುದ್ರಮೂರ್ತಿಯೂ ಆದ ಶಂಕರನನ್ನು ಸಾಕ್ಷಾತ್ಕರಿಸಿದವನಾದೆ.

೬೧. ದಿವ್ಯವೂ, ಈಶ್ವರಸ್ವರೂಪವೂ, ಆದ ಆ ಜ್ಞಾನ ಯೋಗವು ನಿನ್ನಿಂದ ತಾತ್ವಿಕವಾಗಿ ತಿಳಿಯಲ್ಪಟ್ಟಿತು. ಸರ್ವರಿಗೆ ಬುದ್ಧಿ ಪ್ರೇರಕನೂ, ಸನಾತನನೂ, ಆದ ವಿಷ್ಣುವು ತಾನೇ ಆ ಐಶ್ವರಜ್ಞಾನವನ್ನು ಪ್ರೀತಿಯಿಂದ ಹೇಳಿರುವನು.

೬೨. ನೀನು ಈಗ ನಿನ್ನ ಸ್ಥಾನಕ್ಕೆ ಹೊರಟುಹೋಗು. ನೀನು ಹೀಗೆ ಶೋಕಪಡುವುದು ಉಚಿತವಲ್ಲ. ಸರ್ವರಕ್ಷಕನಾದ ಶಿವನನ್ನು ಪರಮಭಕ್ತಿಯೋಗದಿಂದ ಶರಣುಹೊಂದು.

ಏವಮುಕ್ತ್ವಾ ಸ ಭಗವಾನನುಗೃಹ್ಯಾರ್ಜುನಂ ಪ್ರಭುಃ ।
ಜಗಾಮ ಶಂಕರಪುರೀಂ ಸಮಾರಾಧಯಿತುಂ ಭವಮ್ ॥ ೬೩ ॥

ಪಾಂಡವೇಯೋಽಪಿ ತದ್ವಾಕ್ಯಾತ್ಸಂಪ್ರಾಪ್ಯ ಶರಣಂ ಶಿವಮ್ ।
ಸಂತ್ಯಜ್ಯ ಸರ್ವಕರ್ಮಾಣಿ ಜ್ಞಾತ್ವಾ ತತ್ಪರಮೋಽಭವತ್ ॥ ೬೪ ॥

ನಾರ್ಚನೇನ ಸಮಃ ಶಂಭೋರ್ಭಕ್ತ್ಯಾ ಭೂತೋ ಭವಿಷ್ಯತಿ ।
ಮುಕ್ತ್ವಾ ಸತ್ಯವತೀಸೂನುಂ ಕೃಷ್ಣಂ ವಾ ದೇವಕೀಸುತಮ್ ॥ ೬೫ ॥

ತಸ್ಮೈ ಭಗವತೇ ನಿತ್ಯಂ ನಮಃ ಶಾಂತಾಯ ಧೀಮತೇ ।
ಪಾರಾಶರ್ಯಾಯ ಮುನಯೇ ವ್ಯಾಸಾಯಾಮಿತತೇಜಸೇ ॥ ೬೬ ॥

---

೬೩. ಪೂಜ್ಯನೂ, ಸರ್ವಪ್ರಭುವೂ ಆದ ಆ ವ್ಯಾಸಮುನಿಯು ಹೀಗೆಂದು ಹೇಳಿ ಅರ್ಜುನನನ್ನು ಅನುಗ್ರಹಿಸಿ ಮುಂದೆ ಈಶ್ವರನನ್ನು ಆರಾಧಿಸಲೋಸ್ಕರ ಶಂಕರನ ಪುರವಾದ ವಾರಾಣಶಿಗೆ ಹೊರಟನು.

೬೪. ಅರ್ಜುನನೂ ಕೂಡ ವ್ಯಾಸಮಹರ್ಷಿಯ ವಾಕ್ಯದಂತೆ ಶಿವನನ್ನು ಶರಣುಹೊಂದಿ ಸರ್ವ ಕರ್ಮಗಳನ್ನು ತ್ಯಜಿಸಿ ಪರಮೇಶ್ವರ ತತ್ತ್ವವನ್ನು ತಿಳಿದು ಜ್ಞಾನನಿಷ್ಠೆಯಲ್ಲಿ ತತ್ಪರನಾದನು.

೬೫. ಶಂಕರನ ಅರ್ಚನ ಮತ್ತು ಭಕ್ತಿಯೋಗಗಳಲ್ಲಿ ಸತ್ಯವತೀ ಪುತ್ರನಾದ ವ್ಯಾಸಮುನಿ ಅಥವಾ ದೇವಕೀ ಕುಮಾರನಾದ ಶ್ರೀ ಕೃಷ್ಣ ಇವರಿಬ್ಬರನ್ನು ಬಿಟ್ಟರೆ ಇವರಿಗೆ ಸಮಾನನಾದ ಮಾನವನು ಹಿಂದೆ ಹುಟ್ಟಲಿಲ್ಲ ; ಮುಂದೆ ಹುಟ್ಟುವುದೂ ಇಲ್ಲ.

೬೬. ಶಾಂತಿ ಸ್ವಭಾವನೂ, ಮಹಾಜ್ಞಾನಿಯೂ, ಅಪಾರ ಮಹಿಮೆಯುಳ್ಳವನೂ, ಪರಾಶರನಿಗೆ ಪುತ್ರನೂ ಮತ್ತು ಭಗವಂತನೂ ಆದ ವ್ಯಾಸ ಮಹರ್ಷಿಗೆ ಯಾವಾಗಲೂ ನಮಸ್ಕಾರವು.

ಕೃಷ್ಣದ್ವೈಪಾಯನಃ ಸಾಕ್ಷಾದ್ವಿಷ್ಣುರೇವ ಸನಾತನಃ।
ಕೋ ಹ್ಯನ್ಯಸ್ತತ್ತ್ವತೋ ರುದ್ರಂ ವೇತ್ತಿ ತಂ ಪರಮೇಶ್ವರಮ್ ॥ ೬೭ ॥

ನಮಃ ಕುರುಧ್ವಂ ತಮೃಷಿಂ ಕೃಷ್ಣಂ ಸತ್ಯವತೀಸುತಮ್ ।
ಪಾರಾಶರ್ಯಂ ಮಹಾತ್ಮಾನಂ ಯೋಗಿನಂ ವಿಷ್ಣುಮವ್ಯಯಮ್ ॥೬೮॥

ಏವಮುಕ್ತ್ವಾ ತು ಮುನಯಃ ಸರ್ವ ಏವ ಸಮಾಹಿತಾಃ ।
ಪ್ರಣೇಮುಸ್ತಂ ಮಹಾತ್ಮಾನಂ ವ್ಯಾಸಂ ಸತ್ಯವತೀಸುತಮ್ ॥ ೬೯ ॥

ಇತಿ ಶ್ರೀ ಕೂರ್ಮಪುರಾಣೇ ತ್ರಿಂಶೋಽಧ್ಯಾಯಃ.

---

೬೭. ಕೃಷ್ಣದ್ವೈಪಾಯನ ಮುನಿಯು ಅನಾದಿಯಾದ ಮಹಾವಿಷ್ಣುವಿನ ಪ್ರತ್ಯಕ್ಷಮೂರ್ತಿಯೇ ಆಗಿರುವನು. ಹಾಗಿಲ್ಲದಿದ್ದರೆ ಮತ್ತೊಬ್ಬನು ಯಾರು ತಾನೇ ಪರಮೇಶ್ವರನಾದ ರುದ್ರನನ್ನು ತಾತ್ವಿಕವಾಗಿ ತಿಳಿಯಬಲ್ಲನು.

೬೮. ಕೃಷ್ಣಾಂಶದಿಂದ ಹುಟ್ಟಿದವನೂ, ಸತ್ಯವತೀ ಕುಮಾರನೂ, ಪರಾಶರ ಪುತ್ರನೂ, ಮಹಾತ್ಮನೂ, ಮಹಾಯೋಗಿಯೂ, ವ್ಯಾಪಕನೂ ಮತ್ತು ಶಾಶ್ವತನೂ ಆದ ವ್ಯಾಸಮುನಿಯನ್ನು ನಮಸ್ಕರಿಸಿರಿ.

೬೯. ಹೀಗೆಂದು ಹೇಳಿ ಸಮಸ್ತ ಮುನಿಗಳೂ ಸಮಾಧಾನ ಹೊಂದಿದ ಚಿತ್ತವುಳ್ಳವರಾಗಿ - ಸತ್ಯವತೀ ಪುತ್ರನೂ, ಮಹಾತ್ಮನೂ, ಆದ ವ್ಯಾಸಮುನಿಯನ್ನು ನಮಸ್ಕರಿಸಿದರು.

( ಕೂರ್ಮಪುರಾಣದಲ್ಲಿ ಮೂವತ್ತನೆಯ ಅಧ್ಯಾಯವು ಮುಗಿದುದು. )



ಶ್ರೀಃ

# ಕೂರ್ಮಪುರಾಣಂ

---

## ಏಕತ್ರಿಂಶೋಽಧ್ಯಾಯಃ.

**ಋಷಯ ಊಚುಃ :—**

**ಪ್ರಾಪ್ಯ ವಾರಾಣಸೀಂ ದಿವ್ಯಾಂ ಕೃಷ್ಣದ್ವೈಪಾಯನೋ ಮುನಿಃ ।**
**ಕಿಮಕಾರ್ಷೀನ್ಮಹಾಬುದ್ಧಿಃ ಶ್ರೋತುಂ ಕೌತೂಹಲಂ ಹಿ ನಃ ॥ ೧ ॥**

**ಸೂತ ಉವಾಚ :—**

**ಪ್ರಾಪ್ಯ ವಾರಾಣಸೀಂ ದಿವ್ಯಾಮುಪಸ್ಪೃಶ್ಯ ಮಹಾಮುನಿಃ ।**
**ಪೂಜಯಾಮಾಸ ಜಾಹ್ನವ್ಯಾಂ ದೇವಂ ವಿಶ್ವೇಶ್ವರಂ ಶಿವಮ್ ॥ ೨ ॥**

---

## ಮೂವತ್ತೊಂದನೆಯ ಅಧ್ಯಾಯವು

೧. ಮಹರ್ಷಿಗಳು ಹೀಗೆಂದರು :— ಮಹಾಜ್ಞಾನಿಯಾದ ಕೃಷ್ಣದ್ವೈಪಾಯನ ಮುನಿಯು ದಿವ್ಯವಾದ ವಾರಾಣಸೀ ನಗರವನ್ನು ಹೊಂದಿ ಏನುಮಾಡಿದನು ? ಇದನ್ನು ಕೇಳಲು ನಮಗೆ ಹೆಚ್ಚಾದ ಕುತೂಹಲವು ಉಂಟಾಗಿರುವುದು.

೨. ಸೂತಮುನಿಯು ಹೀಗೆಂದನು :— ವ್ಯಾಸಮಹಾಮುನಿಯು ದಿವ್ಯವಾದ ವಾರಾಣಸೀ ನಗರವನ್ನು ಹೊಂದಿ ಗಂಗಾನದಿಯಲ್ಲಿ ಆಚಮನಮಾಡಿ ಮಂಗಳ ಕರನಾದ ವಿಶ್ವೇಶ್ವರಸ್ವಾಮಿಯನ್ನು ಪೂಜಿಸಿದನು.

ತಮಾಗತಂ ಮುನಿಂ ದೃಷ್ಟ್ವಾ ತತ್ರ ಯೇ ನಿವಸಂತಿ ವೈ ।
ಪೂಜಯಾಂಚಕ್ರಿರೇ ವ್ಯಾಸಂ ಮುನಯೋ ಮುನಿಪುಂಗವಮ್ ॥ ೩ ॥

ಪಪ್ರಚ್ಛುಃ ಪ್ರಣತಾಃ ಸರ್ವೇ ಕಥಾಂ ಪಾಪಪ್ರಣಾಶಿನೀಮ್ ।
ಮಹಾದೇವಾಶ್ರಯಾಂ ಪುಣ್ಯಾಂ ಮೋಕ್ಷಧರ್ಮಾನ್ ಸನಾತನಾನ್ ॥೪॥

ಸ ಚಾಪಿ ಕಥಯಾಮಾಸ ಸರ್ವಜ್ಞೋ ಭಗವಾನ್ನೃಷಿಃ ।
ಮಾಹಾತ್ಮ್ಯಂ ದೇವದೇವಸ್ಯ ಧರ್ಮ್ಯಂ ವೇದನಿದರ್ಶನಾತ್ ॥ ೫ ॥

ತೇಷಾಂ ಮಧ್ಯೇ ಮುನೀಂದ್ರಾಣಾಂ ವ್ಯಾಸಶಿಷ್ಯೋ ಮಹಾಮುನಿಃ ।
ಪೃಷ್ಟವಾನ್ ಜೈಮಿನಿರ್ವ್ಯಾಸಂ ಗೂಢಮರ್ಥಂ ಸನಾತನಮ್ ॥ ೬ ॥

---

೩. ಆಗ ವಾರಾಣಸಿಯಲ್ಲಿ ವಾಸಮಾಡುತ್ತಿದ್ದ ಮಹರ್ಷಿಗಳು ಮುನಿ ಶ್ರೇಷ್ಠನಾದ ವ್ಯಾಸಮುನಿಯು ಅಲ್ಲಿಗೆ ಬಂದಿರುವುದನ್ನು ನೋಡಿ ಅವನನ್ನು ಪೂಜಿಸಿದರು.

೪. ಮತ್ತು ಸಮಸ್ತ ಮಹರ್ಷಿಗಳೂ ವ್ಯಾಸಮುನಿಯನ್ನು ನಮಸ್ಕರಿಸಿ ಮಹಾದೇವನ ವಿಷಯವಾಗಿರುವುದೂ, ಪವಿತ್ರವೂ, ಪಾಪಶೋಧಕವೂ, ಆದ ಪುರಾಣ ಕಥೆಯನ್ನೂ ಸನಾತನವಾದ ಮೋಕ್ಷಧರ್ಮಗಳನ್ನೂ ಪ್ರಶ್ನಿಸಿದರು.

೫. ಆಗ ಸರ್ವಜ್ಞನೂ, ಪೂಜ್ಯನೂ ಆದ ಆ ವ್ಯಾಸಮುನಿಯು ಧರ್ಮಗಳಿಂದ ಕೂಡಿರುವ ದೇವೋತ್ತಮನಾದ ಮಹಾದೇವನ ಮಾಹಾತ್ಮ್ಯೆಯನ್ನು ವೇದಗಳಿಂದ ತೋರಿಸಲ್ಪಟ್ಟಂತೆ ಹೇಳಿದನು.

೬. ಆಗ ಆ ಮುನೀಂದ್ರರ ಮಧ್ಯದಲ್ಲಿ ಕುಳಿತಿರುವ, ವ್ಯಾಸಮುನಿಯ ಶಿಷ್ಯನಾದ ಜೈಮಿನಿ ಎಂಬ ಮಹಾಮುನಿಯು ಅನಾದಿಯಾಗಿ ಪ್ರಚಾರದಲ್ಲಿರುವ ಗೂಢಾರ್ಥವನ್ನು ವ್ಯಾಸಮುನಿಯ ಸನ್ನಿಧಿಯಲ್ಲಿ ಪ್ರಶ್ನಿಸಿದನು.

ಜೈಮಿನಿರುವಾಚ :—

ಭಗವನ್ ಸಂಶಯಂ ಚೈಕಂ ಛೇತ್ತುಮರ್ಹಸಿ ಸರ್ವವಿತ್ ।
ನ ವಿದ್ಯತೇ ಹ್ಯವಿದಿತಂ ಭವತಃ ಪರಮರ್ಷಿಣಃ ॥ ೭ ॥

ಕೇಚಿದ್ಧ್ಯಾನಂ ಪ್ರಶಂಸಂತಿ ಧರ್ಮಮೇವಾಪರೇ ಜನಾಃ ।
ಅನ್ಯೇ ಸಾಂಖ್ಯಂ ತಥಾ ಯೋಗಂ ತಪಶ್ಚಾನ್ಯೇ ಮಹರ್ಷಯಃ ॥೮ ॥

ಬ್ರಹ್ಮಚರ್ಯಮಥೋ ನೂನಮನ್ಯೇ ಪ್ರಾಹುರ್ಮಹರ್ಷಯಃ ।
ಅಹಿಂಸಾಂ ಸತ್ಯಮಪ್ಯನ್ಯೇ ಸನ್ಯಾಸಮಪರೇ ವಿದುಃ ॥ ೯ ॥

ಕೇಚಿದ್ದಯಾಂ ಪ್ರಶಂಸಂತಿ ದಾನಮಧ್ಯಯನಂ ತಥಾ ।
ತೀರ್ಥಯಾತ್ರಾಂ ತಥಾ ಕೇಚಿದನ್ಯೇ ಚೇಂದ್ರಿಯನಿಗ್ರಹಮ್ ॥ ೧೦ ॥

---

೭. ಜೈಮಿನಿ ಮುನಿಯು ಹೀಗೆಂದು ಕೇಳಿದನು :—ಪೂಜ್ಯನೇ ! ಸರ್ವಜ್ಞನಾದ ನೀನು ನನ್ನ ಒಂದು ಸಂಶಯವನ್ನು ಪರಿಹರಿಸಲು ಅರ್ಹನಾಗಿದ್ದೀಯೆ. ಮಹರ್ಷಿಯಾದ ನಿನಗೆ ತಿಳಿಯದಿರುವ ವಿಷಯವು ಒಂದೂ ಇಲ್ಲ.

೮. ಮಹರ್ಷಿಗಳಲ್ಲಿ ಕೆಲವರು ಧ್ಯಾನವು ಹೆಚ್ಚೆಂದು ಹೇಳುವರು ; ಮತ್ತೆ ಕೆಲವರು ಧರ್ಮವೇ ಮೇಲಾದುದೆಂದು ಹೇಳುವರು ; ಮತ್ತೆ ಕೆಲವರು ಸಾಂಖ್ಯ ಅಥವಾ ಯೋಗಗಳನ್ನು ಉತ್ತಮವೆಂದು ಶ್ಲಾಘಿಸುವರು ; ಮತ್ತೆ ಕೆಲವರಿಗೆ ತಪಸ್ಸು ಶ್ರೇಷ್ಠವೆಂದು ಅಭಿಮತವು.

೯. ಕೆಲವರು ಬ್ರಹ್ಮಚರ್ಯವು ಸತ್ಯವೂ ಪ್ರಶಸ್ತವೂ ಆದ ಮಾರ್ಗವೆಂದು ಹೇಳುತ್ತಲಿರುವರು. ಇನ್ನು ಕೆಲವರು ಅಹಿಂಸೆಯನ್ನೂ, ಸತ್ಯವನ್ನೂ, ಸನ್ಯಾಸವನ್ನೂ ಶ್ರೇಯಸ್ಕರವೆಂದು ಭಾವಿಸುವರು.

೧೦. ಕೆಲವರು ದಯೆ, ದಾನ ಅಥವಾ ಅಧ್ಯಯನಗಳನ್ನು ಮುಖ್ಯವಾದುವುಗಳೆಂದು ಪ್ರಶಂಸೆಮಾಡುವರು. ಮತ್ತೆ ಕೆಲವರು ತೀರ್ಥಯಾತ್ರೆಯು ಪ್ರಧಾನವೆಂದೂ ಇನ್ನು ಕೆಲವರು ಇಂದ್ರಿಯ ನಿಗ್ರಹವು ಶ್ಲಾಘ್ಯವೆಂದೂ ಶ್ಲಾಘಿಸುವರು.

ಕಿಮೇಷಾಂ ಚ ಭವೇಚ್ಛ್ರೇಯಃ ಪ್ರಬ್ರೂಹಿ ಮುನಿಪುಂಗವ ।
ಯದಿ ವಾ ವಿದ್ಯತೇಽಪ್ಯನ್ಯದ್ಗುಹ್ಯಂ ತದ್ವಕ್ತುಮರ್ಹಸಿ ॥ ೧೧ ॥

ಶ್ರುತ್ವಾ ಸ ಜೈಮಿನೇರ್ವಾಕ್ಯಂ ಕೃಷ್ಣದ್ವೈಪಾಯನೋ ಮುನಿಃ ।
ಪ್ರಾಹ ಗಂಭೀರಯಾ ವಾಚಾ ಪ್ರಣಮ್ಯ ವೃಷಕೇತನಮ್ ॥ ೧೨ ॥

ಶ್ರೀ ಭಗವಾನುವಾಚ ;—

ಸಾಧು ಸಾಧು ಮಹಾಭಾಗ ಯತ್ಪೃಷ್ಟಂ ಭವತಾ ಮುನೇ ।
ವಕ್ಷ್ಯೇ ಗುಹ್ಯತಮಾದ್ಗುಹ್ಯಂ ಶೃಣ್ವಂತ್ವನ್ಯೇ ಮಹರ್ಷಯಃ ॥ ೧೩

ಈಶ್ವರೇಣ ಪುರಾ ಪ್ರೋಕ್ತಂ ಜ್ಞಾನಮೇತತ್ಸನಾತನಮ್ ।
ಗೂಢಮಪ್ರಾಜ್ಞವಿದ್ವಿಷ್ಟಂ ಸೇವಿತಂ ಸೂಕ್ಷ್ಮದರ್ಶಿಭಿಃ ॥ ೧೪ ॥

---

೧೧. ಮುನಿಶ್ರೇಷ್ಠನೇ ! ಇವುಗಳಿಂದ ಆಗುವ ಶ್ರೇಯಸ್ಸು ಯಾವುದು ? ಎಂಬುದನ್ನು ಹೇಳುವವನಾಗು. ಅಥವಾ ಇದಕ್ಕಿಂತ ಅತಿರಿಕ್ತವಾಗಿ ರಹಸ್ಯ ವಿಷಯವು ಇರುವುದಾದರೆ ಅದನ್ನೂ ಹೇಳುವವನಾಗು.

೧೨. ಹೀಗೆಂಬ ಜೈಮಿನಿಮುನಿಯ ವಚನವನ್ನು ಕೇಳಿ ಆ ಕೃಷ್ಣದ್ವೈಪಾಯನ ಮನಿಯು ವೃಷಭಧ್ವಜನಾದ ಈಶ್ವರನನ್ನು ನಮಸ್ಕರಿಸಿ ಗಂಭೀರವಾದ ವಾಣಿಯಿಂದ ಹೇಳಲಾರಂಭಿಸಿದನು.

೧೩. ವ್ಯಾಸಮುನಿಯು ಹೀಗೆಂದು ಹೇಳಿದನು :— ಭಾಗ್ಯಶಾಲಿಯಾದ ಮುನಿಯೇ ! ಸಾಧು, ಸಾಧು. ನೀನು ಉತ್ತಮವಾದ ಪ್ರಶ್ನೆಯನ್ನು ಮಾಡಿದ್ದೀಯೆ ; ರಹಸ್ಯವಸ್ತುಗಳಿಗಿಂತಲೂ ಅತ್ಯಂತ ರಹಸ್ಯವಾದ ವಿಷಯವನ್ನು ಹೇಳುತ್ತೇನೆ. ಇತರ ಸಮಸ್ತ ಮಹರ್ಷಿಗಳು ಶ್ರವಣಮಾಡಲಿ.

೧೪. ಪೂರ್ವದಲ್ಲಿ ಗೂಢವೂ. ಅಜ್ಞಾನಿಗಳಿಗೆ ದ್ವೇಷಾಸ್ಪದವೂ ಸೂಕ್ಷ್ಮ ಮತಿಯುಳ್ಳವರಿಂದ ಸೇವಿಸಲ್ಪಟ್ಟಿರುವುದೂ ಮತ್ತು ಸನಾತನವೂ ಆದ ಈ ಜ್ಞಾನವು ಈಶ್ವರನಿಂದ ಉಪದೇಶಿಸಲ್ಪಟ್ಟಿದೆ.

ನಾಶ್ರದ್ದಧಾನೇ ದಾತವ್ಯಂ ನಾಭಕ್ತೇ ಪರಮೇಷ್ಠಿನಃ ।
ನಾವೇದವಿದುಷೇ ದೇಯಂ ಜ್ಞಾನಾನಾಂ ಜ್ಞಾನಮುತ್ತಮಮ್ ॥ ೧೫ ॥

ಮೇರುಶೃಂಗೇ ಮಹಾದೇವಮೀಶಾನಂ ತ್ರಿಪುರದ್ವಿಷಮ್ ।
ದೇವಾಸನಗತಾ ದೇವೀ ಮಹಾದೇವಮಪೃಚ್ಛತ ॥ ೧೬ ॥

ಶ್ರೀ ದೇವ್ಯುವಾಚ :—

ದೇವದೇವ ಮಹಾದೇವ ಭಕ್ತಾನಾಮಾರ್ತಿನಾಶನ ।
ಕಥಂ ತ್ವಾಂ ಪುರುಷೋ ದೇವಮಚಿರಾದೇವ ಪಶ್ಯತಿ ॥ ೧೭ ॥

ಸಾಂಖ್ಯಯೋಗಂ ತಪೋ ಧ್ಯಾನಂ ಕರ್ಮಯೋಗಶ್ಚ ವೈದಿಕಃ ।
ಆಯಾಸಬಹುಲಾನ್ಯಾಹುರ್ಯಾನಿ ಚಾನ್ಯಾನಿ ಶಂಕರ ॥ ೧೮ ॥

---

೧೫. ಜ್ಞಾನಮಾರ್ಗಗಳಲ್ಲಿ ಉತ್ತಮವಾದ ಈ ಐಶ್ವರಜ್ಞಾನವನ್ನು ಶ್ರದ್ಧೆಯಿಲ್ಲದ ಈಶ್ವರ ಭಕ್ತಿಯಿಲ್ಲದ ಅಥವಾ ವೇದಾಧ್ಯಯನವಿಲ್ಲದ ಅಸತ್ಪಾತ್ರದಲ್ಲಿ ದಾನಮಾಡಬಾರದು.

೧೬. ಮೇರುಪರ್ವತದ ಶಿಖರದಲ್ಲಿ ಈಶ್ವರನೊಡನೆ ಏಕಾಸನದಲ್ಲಿ ಕುಳಿತಿರುವ ಪಾರ್ವತೀದೇವಿಯು ದೇವೋತ್ತಮನೂ, ಸರ್ವೇಶ್ವರನೂ ಮತ್ತು ತ್ರಿಪುರಾರಸು ಸಂಹಾರಿಯೂ ಆದ ಪತಿದೇವನನ್ನು ಕುರಿತು ಪ್ರಶ್ನಿಸಿದಳು.

೧೭. ಪಾರ್ವತೀದೇವಿಯು ಹೀಗೆ ಪ್ರಶ್ನಿಸಿದಳು :— ದೇವೋತ್ತಮನೇ ! ಮಹಾದೇವನೇ ! ಭಕ್ತರ ಸಂಕಟಗಳನ್ನು ನಿವಾರಿಸುವವನೇ ! ಮಾನವನು ನಿನ್ನನ್ನು ಕ್ಷಿಪ್ರದಲ್ಲಿಯೇ ಹೇಗೆ ಸಾಕ್ಷಾತ್ಕರಿಸುವನು ?

೧೮. ಶಂಕರನೇ ! ಸಾಂಖ್ಯ-ಯೋಗ-ತಪಶ್ಚರ್ಯೆ-ಧ್ಯಾನಯೋಗ ಮತ್ತು ವೇದ ಪ್ರತಿಪಾದ್ಯವಾದ ಕರ್ಮಯೋಗಗಳೂ ಮತ್ತು ಇತರ ಅನುಷ್ಠಾನ ವಿಶೇಷಗಳೂ ಹೆಚ್ಚು ಆಯಾಸವನ್ನು ಕೊಡುವ ಸಾಧನಗಳಾಗಿವೆ.

ಯೇನ ವಿಭ್ರಾಂತಚಿತ್ತಾನಾಂ ವಿಜ್ಞಾನಾಂ ಯೋಗಿನಾಮಪಿ ।
ದೃಶ್ಯೋ ಹಿ ಭಗವಾನ್ ಸೂಕ್ಷ್ಮಃ ಸರ್ವೇಷಾಮಪಿ ದೇಹಿನಾಮ್॥೧೯॥

ಏತದ್ಗುಹ್ಯತಮಂ ಜ್ಞಾನಂ ಗೂಢಂ ಬ್ರಹ್ಮಾದಿಸೇವಿತಮ್ ।
ಹಿತಾಯ ಸರ್ವಭಕ್ತಾನಾಂ ಬ್ರೂಹಿ ಕಾಮಾಂಗನಾಶನ ॥ ೨೦ ॥

ಈಶ್ವರ ಉವಾಚ :—

ಅವಾಚ್ಯಮೇತದ್ಗೂಢಾರ್ಥಂ ಜ್ಞಾನಮಜ್ಞೈರ್ಬಹಿಷ್ಕೃತಮ್ ।
ವಕ್ಷ್ಯೇ ತವ ಯಥಾತತ್ತ್ವಂ ಯದುಕ್ತಂ ಪರಮರ್ಷಿಭಿಃ ॥ ೨೧ ॥

ಪರಂ ಗುಹ್ಯತಮಂ ಕ್ಷೇತ್ರಂ ಮಮ ವಾರಾಣಸೀ ಪುರೀ ।
ಸರ್ವೇಷಾಮೇವ ಭೂತಾನಾಂ ಸಂಸಾರಾರ್ಣವತಾರಿಣೀ ॥ ೨೨ ॥

---

೧೯. ಭ್ರಾಂತಿಗೆ ವಶವಾದ ಚಿತ್ತವುಳ್ಳ ಜ್ಞಾನಿಗಳಿಗೂ, ಯೋಗಿಗಳಿಗೂ ಮತ್ತು ಸಮಸ್ತ ಪ್ರಾಣಿಗಳಿಗೂ ಸೂಕ್ಷ್ಮರೂಪನೂ ಷಡ್ಗುಣೈಶ್ವರ್ಯ ಸಂಪನ್ನನೂ ಆದ ಸ್ವಾಮಿಯು ಯಾವ ಸಾಧನದಿಂದ ದೃಷ್ಟಿಗೋಚರನಾಗುವನು ?

೨೦. ಕಾಮದೇವನನ್ನು ದಹಿಸಿದ ಪತಿದೇವನೇ ! ಅತ್ಯಂತ ರಹಸ್ಯವೂ, ಬ್ರಹ್ಮಾದಿ ದೇವತೆಗಳಿಂದ ಸೇವಿತವೂ, ಮತ್ತು ನಿಗೂಢವೂ ಆದ ಈ ಜ್ಞಾನಯೋಗವನ್ನು ಸಮಸ್ತ ಭಕ್ತರ ಹಿತಕ್ಕೋಸ್ಕರ ಉಪದೇಶಿಸುವನು.

೨೧. ಈಶ್ವರನು ಹೀಗೆ ಉಪದೇಶಿಸಿದನು :— ಅಜ್ಞಾನಿಗಳಿಂದ ಬಹಿಷ್ಕರಿಸಲ್ಪಟ್ಟ ಗೂಢಾರ್ಥದಿಂದ ಕೂಡಿದ, ಜ್ಞಾನಯೋಗವು ಸಾಮಾನ್ಯವಾಗಿ ಕೇಳತಕ್ಕುದಲ್ಲ. ಮಹರ್ಷಿಗಳಿಂದ ಹೇಳಲ್ಪಟ್ಟ ಈ ಸಾಧನವನ್ನು ನಿನಗೆ ತಾತ್ತ್ವಿಕವಾಗಿ ವರ್ಣಿಸುತ್ತೇನೆ.

೨೨. ವಾರಾಣಸೀ ಎಂಬ ನಗರವು ಸರ್ವೋತ್ತಮವೂ, ಅತಿ ಗೋಪ್ಯವೂ ಆದ ನನ್ನ ಕ್ಷೇತ್ರವಾಗಿರುವುದು. ಆ ವಾರಾಣಸೀ ನಗರಿಯು ಸರ್ವಭೂತಗಳ ಸಂಸಾರ ಸಮುದ್ರ ಯಾತನೆಯನ್ನು ನಿವಾರಿಸುವುದು.

ತಸ್ಮಿನ್ ಭಕ್ತಾ ಮಹಾದೇವಿ ಮದೀಯಂ ವ್ರತಮಾಸ್ಥಿತಾಃ ।
ನಿವಸಂತಿ ಮಹಾತ್ಮಾನಃ ಪರಂ ನಿಯಮಮಾಸ್ಥಿತಾಃ ॥ ೨೩ ॥

ಉತ್ತಮಂ ಸರ್ವತೀರ್ಥಾನಾಂ ಸ್ಥಾನಾನಾಮುತ್ತಮಂ ಚ ಯತ್ ।
ಜ್ಞಾನಾನಾಮುತ್ತಮಂ ಜ್ಞಾನಮವಿಮುಕ್ತಂ ಪರಂ ಮಮ ॥ ೨೪ ॥

ಸ್ಥಾನಾಂತರೇ ಪವಿತ್ರಾಣಿ ತೀರ್ಥಾನ್ಯಾಯತನಾನಿ ಚ ।
ಶ್ಮಶಾನೇ ಸಂಸ್ಥಿತಾನ್ಯೇವ ದಿವಿ ಭೂಮಿಗತಾನಿ ಚ ॥ ೨೫ ॥

ಭೂರ್ಲೋಕೇ ನೈವ ಸಂಲಗ್ನಮಂತರಿಕ್ಷೇ ಮಮಾಲಯಮ್ ।
ಅವಿಮುಕ್ತಾ ನ ಪಶ್ಯಂತಿ ಮುಕ್ತಾಃ ಪಶ್ಯಂತಿ ಚೇತಸಾ ॥ ೨೬ ॥

---

೨೩. ಮಹಾದೇವಿಯೇ! ಆ ಕ್ಷೇತ್ರದಲ್ಲಿ ಮಹಾತ್ಮರಾದ ಅನೇಕ ಭಕ್ತರು ನನಗೆ ಪ್ರಿಯವಾದ ವ್ರತವನ್ನೂ ಕಠಿಣವಾದ ನಿಯಮಗಳನ್ನೂ ಅವಲಂಬಿಸಿ ವಾಸಮಾಡುತ್ತಾರೆ.

೨೪. ಆ ನಗರಿಯಲ್ಲಿ ಇರುವ ಅವಿಮುಕ್ತ ಎಂಬ ನನ್ನ ಉತ್ತಮ ಕ್ಷೇತ್ರವು ಸಮಸ್ತ ತೀರ್ಥಗಳಲ್ಲಿ ಉತ್ತಮವೂ, ಸರ್ವಸ್ಥಾನಗಳಲ್ಲಿ ಶ್ರೇಷ್ಠವೂ ಮತ್ತು ಜ್ಞಾನ ಸಾಧನಗಳಲ್ಲಿ ಪರಮಸಾಧನವೂ ಆಗಿರುವುದು.

೨೫. ಆ ಕ್ಷೇತ್ರವನ್ನು ಬಿಟ್ಟು ಬೇರೆ ಪ್ರದೇಶದ ಆಕಾಶ ಅಥವಾ ಭೂಮಿಯಲ್ಲಿ ನೆಲೆಸಿರುವ ಪವಿತ್ರವಾದ ಇತರ ತೀರ್ಥಗಳೂ, ದೇವಾಲಯಗಳೂ ಶ್ಮಶಾನದಲ್ಲಿ ಇರುವ ತೀರ್ಥಾದಿಗಳಂತೆ ಅಮುಖ್ಯವಾಗಿರುವುವು.

೨೬. ಆ ಅವಿಮುಕ್ತವು ಭೂಲೋಕವನ್ನು ಅಂಟಿಕೊಂಡಿಲ್ಲ. ಆ ನನ್ನ ಆಲಯವು ಅಂತರಿಕ್ಷದಲ್ಲಿ ಇರುವುದು. ಮುಕ್ತರಲ್ಲದ ಜನರು ಆ ಕ್ಷೇತ್ರವನ್ನು ನೋಡಲಾರರು; ಮುಕ್ತಜನರು ಚಿತ್ತದಿಂದ ಅದನ್ನು ನೋಡುವರು.

ಶ್ಮಶಾನಮೇತದ್ವಿಖ್ಯಾತಮವಿಮುಕ್ತಮಿತಿ ಸ್ಮೃತಮ್ ।
ಕಾಲೋ ಭೂತ್ವಾ ಜಗದಿದಂ ಸಂಹರಾಮ್ಯತ್ರ ಸುಂದರಿ ॥ ೨೭ ॥

ದೇವೀದಂ ಸರ್ವಗುಹ್ಯಾನಾಂ ಸ್ಥಾನಂ ಪ್ರಿಯತಮಂ ಮಮ ।
ಮದ್ಭಕ್ತಾ ಯತ್ರ ಗಚ್ಛಂತಿ ಮಾಮೇವ ಪ್ರವಿಶಂತಿ ತೇ ॥ ೨೮ ॥

ದತ್ತಂ ಜಪ್ತಂ ಹುತಂ ಚೇಷ್ಟಂ ತಪಸ್ತಪ್ತಂ ಕೃತಂ ಚ ಯತ್ ।
ಧ್ಯಾನಮಧ್ಯಯನಂ ಜ್ಞಾನಂ ಸರ್ವಂ ತತ್ರಾಕ್ಷಯಂ ಭವೇತ್ ॥ ೨೯ ॥

ಜನ್ಮಾಂತರಸಹಸ್ರೇಷು ಯತ್ಪಾಪಂ ಪೂರ್ವಸಂಚಿತಮ್ ।
ಅವಿಮುಕ್ತೇ ಪ್ರವಿಷ್ಟಸ್ಯ ತತ್ಸರ್ವಂ ವ್ರಜತಿ ಕ್ಷಯಮ್ ॥ ೩೦ ॥

---

೨೭. ಶ್ಮಶಾನರೂಪವಾದ ಈ ನನ್ನ ಕ್ಷೇತವು ಅವಿಮುಕ್ತ ಎಂದು ಸ್ಮರಿಸಲ್ಪಟ್ಟಿರುವುದಾಗಿ ಪ್ರಸಿದ್ಧಿ ಹೊಂದಿದೆ. ಸುಂದರಿಯೇ ! ಈ ಕ್ಷೇತ್ರದಲ್ಲಿ ನಾನು ಕಾಲರೂಪಿಯಾಗಿ ಸಮಸ್ತ ಜಗತ್ತನ್ನು ಸಂಹರಿಸುತ್ತೇನೆ.

೨೮. ದೇವಿಯೇ ! ಸಮಸ್ತ ರಹಸ್ಯ ಸ್ಥಾನಗಳಿಗಿಂತ ಉತ್ತಮವಾದ ಆ ಸ್ಥಾನವು ನನಗೆ ಬಹಳ ಪ್ರಿಯವಾದುದು. ಅಲ್ಲಿಗೆ ಹೋಗುವ ನನ್ನ ಭಕ್ತರು ನನ್ನಲ್ಲಿಯೇ ಐಕ್ಯವನ್ನು ಹೊಂದುತ್ತಾರೆ.

೨೯. ಆ ಕ್ಷೇತ್ರದಲ್ಲಿ ಸುಕೃತಿಗಳಿಂದ ಆಚರಿಸಲ್ಪಡುವ ದಾನ-ಹೋಮ-ಜಪ-ಯಾಗ-ತಪಸ್ಸು-ಧ್ಯಾನ-ಅಧ್ಯಯನ ಮತ್ತು ಜ್ಞಾನ ಈ ಎಲ್ಲಾ ಸತ್ಕರ್ಮಗಳೂ ಅಕ್ಷಯವಾಗುವುವು.

೩೦. ಹಿಂದಿನ ಸಾವಿರಾರು ಜನ್ಮಗಳಿಂದ ಆಚರಿಸಲ್ಪಟ್ಟ ಯಾವ ಪಾಪವು ಇರುವುದೋ ; ಅವಿಮುಕ್ತಕ್ಷೇತ್ರದಲ್ಲಿ ಪ್ರವೇಶಮಾಡಿದ ಮಾನವನ ಆ ಸಮಸ್ತ ಪಾತಕವು ಶೀಘ್ರದಲ್ಲಿ ಕ್ಷಯಹೊಂದುವುದು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾ ಯೇ ವರ್ಣಸಂಕರಾಃ ।
ಸ್ತ್ರಿಯೋ ಮ್ಲೇಚ್ಛಾಶ್ಚ ಯೇ ಚಾನ್ಯೇ ಸಂಕೀರ್ಣಾಃ ಪಾಪಯೋನಯಃ

ಕೀಟಾಃ ಪಿಪೀಲಿಕಾಶ್ಚೈವ ಯೇ ಚಾನ್ಯೇ ಮೃಗಪಕ್ಷಿಣಃ ।
ಕಾಲೇನ ನಿಧನಂ ಪ್ರಾಪ್ತಾ ಅವಿಮುಕ್ತೇ ವರಾನನೇ ॥ ೩೨ ॥

ಚಂದ್ರಾರ್ಧಮೌಲಯಸ್ತ್ರ್ಯಕ್ಷಾ ಮಹಾವೃಷಭವಾಹನಾಃ ।
ಶಿವೇ ಮಮ ಪುರೇ ದೇವಿ ಜಾಯಂತೇ ತತ್ರ ಮಾನವಾಃ ॥ ೩೩ ॥

ನಾವಿಮುಕ್ತೇ ಮೃತಃ ಕಶ್ಚಿನ್ನರಕಂ ಯಾತಿ ಕಿಲ್ಬಿಷೀ ।
ಈಶ್ವರಾನುಗೃಹೀತಾ ಹಿ ಸರ್ವೇ ಯಾಂತಿ ಪರಾಂ ಗತಿಮ್ ॥ ೩೪ ॥

---

೩೧. ಆ ಕ್ಷೇತ್ರದಲ್ಲಿ ಮರಣಹೊಂದುವ ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ ಸಂಕರವರ್ಣ-ಸ್ತ್ರೀ-ಮ್ಲೇಚ್ಛ ಮುಂತಾದವರೂ ಇತರ ಪಾಪಯೋನಿಯಾದ ಸಂಕರ ಜಾತಿಯವರೂ ಸುಕೃತಿಗಳಾಗುವರು.

೩೨. ಸುಂದರವಾದ ಮುಖವುಳ್ಳ ಪಾರ್ವತಿಯೇ! ಕೀಟ-ಪಿಪೀಲಿಕ ಅಥವಾ ಇತರ ಮೃಗ–ಪಕ್ಷಿಗಳು ಕಾಲಪರಿಪಾಕದಿಂದ ಆ ಕ್ಷೇತ್ರದಲ್ಲಿ ನಿಧನಹೊಂದಿ ಸುಕೃತಿಗಳಾಗುವರು.

೩೩. ಪಾರ್ವತಿಯೇ! ಅವಿಮುಕ್ತ ಕ್ಷೇತ್ರದಲ್ಲಿ ಮರಣ ಹೊಂದಿದ ಮಾನವರು ಶಿರದಲ್ಲಿ ಚಂದ್ರಕಲೆಯನ್ನು ಧರಿಸಿದವರೂ ಮಹತ್ತಾದ ವೃಷಭವಾಹನ ವನ್ನು ಏರಿದವರೂ ಆಗಿ ನನ್ನ ಶಿವಪುರದಲ್ಲಿ ಹೋಗಿ ಜನ್ಮವೆತ್ತುವರು.

೩೪. ಅವಿಮುಕ್ತ ಕ್ಷೇತ್ರದಲ್ಲಿ ಮರಣವನ್ನು ಹೊಂದಿದ ಯಾವ ಪಾತಕಿಯೂ ನರಕ ಯಾತನೆಯನ್ನು ಹೊಂದುವುದಿಲ್ಲ. ಸಮಸ್ತ ಮಾನವರೂ ಈಶ್ವರಾನುಗ್ರಹಕ್ಕೆ ಪಾತ್ರರಾಗಿ ಪರಮಸದ್ಗತಿಯನ್ನು ಹೊಂದುತ್ತಾರೆ.

ಮೋಕ್ಷಂ ಸುದುರ್ಲಭಂ ಜ್ಞಾತ್ವಾ ಸಂಸಾರಂ ಚಾತಿಭೀಷಣಮ್ ।
ಅಶ್ಮನಾ ಚರಣೌ ಹತ್ವಾ ವಾರಾಣಸ್ಯಾಂ ವಸೇನ್ನರಃ ॥ ೩೫ ॥

ದುರ್ಲಭಾ ತಪಸೋಽವಾಪ್ತಿರ್ಭೂತಸ್ಯ ಪರಮೇಶ್ವರಿ ।
ಯತ್ರ ತತ್ರ ವಿಪನ್ನಸ್ಯ ಗತಿಃ ಸಂಸಾರಮೋಕ್ಷಣೀ ॥ ೩೬ ॥

ಪ್ರಸಾದಾದ್ದಗ್ಯತೇ ಹ್ಯೇನೋ ಮಮ ಶೈಲೇಂದ್ರನಂದಿನಿ ।
ಅತ್ರಾಬುಧಾ ನ ಪಶ್ಯಂತಿ ಮಮ ಮಾಯಾವಿಮೋಹಿತಾಃ ॥ ೩೭ ॥

ಅವಿಮುಕ್ತಂ ನ ಪಶ್ಯಂತಿ ಮೂಢಾ ಯೇ ತಮಸಾವೃತಾಃ ।
ವಿಣ್ಮೂತ್ರರೇತಸಾಂ ಮಧ್ಯೇ ಸಂವಿಶಂತಿ ಪುನಃ ಪುನಃ ॥ ೩೮ ॥

---

೩೫. ಮೋಕ್ಷವನ್ನು ಬಹುದುರ್ಲಭವೆಂದೂ ಸಂಸಾರವು ಅತ್ಯಂತ ಭಯಂಕರವೆಂದೂ ತಿಳಿದು ಮಾನವನು ಕಲ್ಲಿನಿಂದ ಕಾಲುಗಳನ್ನು ಪೀಡಿಸುತ್ತಾ ವಾರಣಸಿಯಲ್ಲಿ ವಾಸಮಾಡಬೇಕು.

೩೬. ಪರಮೇಶ್ವರಿಯಾದ ಪಾರ್ವತಿಯೇ ! ಹುಟ್ಟಿದ ಸಾಮಾನ್ಯ ಜಂತುವಿಗೆ ತಪಸ್ಸಿನ ಪ್ರಾಪ್ತಿಯು ದುರ್ಲಭವಾದುದು. ಈ ಕ್ಷೇತ್ರದಲ್ಲಿ ಎಲ್ಲಾದರಲ್ಲಿ ಮರಣ ಹೊಂದಿದರೂ ಸಂಸಾರ ಮೋಚಕವಾದ ಸದ್ಗತಿಯು ಲಭಿಸುವುದು.

೩೭. ಪರ್ವತರಾಜನಾದ ಹಿಮವಂತನ ಪುತ್ರಿಯೇ ! ಇಲ್ಲಿ ನನ್ನ ಅನುಗ್ರಹ ವಿಶೇಷದಿಂದ ಮೂಢರಾದ ಅಜ್ಞಾನಿ ಜನಗಳು ಈ ಕ್ಷೇತ್ರ ಮಹಿಮೆಯನ್ನು ತಿಳಿಯುವುದಿಲ್ಲ.

೩೮. ತಮೋಗುಣದಿಂದ ಆವರಿಸಲ್ಪಟ್ಟ ಮೂಢರಾದ ಮಾನವರು ಪವಿತ್ರವಾದ ಅವಿಮುಕ್ತ ಕ್ಷೇತ್ರವನ್ನು ನೋಡಲಾರರು. ಆದುದರಿಂದ ಅವರು ಅಮೇಧ್ಯ-ಮೂತ್ರ-ರೇತಸ್ಸುಗಳ ಮಧ್ಯದಲ್ಲಿ ಮತ್ತೆ ಮತ್ತೆ ಜನ್ಮಭೋಗಗಳನ್ನು ಹೊಂದುವರು.

ಹನ್ಯಮಾನೋಽಪಿ ಯೋ ದೇವಿ ವಿಶೇದ್ವಿಘ್ನಶತೈರಪಿ ।
ಸ ಯಾತಿ ಪರಮಂ ಸ್ಥಾನಂ ಯತ್ರ ಗತ್ವಾ ನ ಶೋಚತಿ ॥ ೩೯ ॥

ಜನ್ಮಮೃತ್ಯುಜರಾಮುಕ್ತಂ ಪರಂ ಯಾತಿ ಶಿವಾಲಯಮ್ ।
ಅಪುನರ್ಮರಣಾನಾಂ ಹಿ ಸಾ ಗತಿರ್ಮೋಕ್ಷಕಾಂಕ್ಷಿಣಾಮ್ ॥ ೪೦ ॥

ಯಾಂ ಪ್ರಾಪ್ಯ ಕೃತಕೃತ್ಯಃ ಸ್ಯಾದಿತಿ ಮನ್ಯೇತ ಪಂಡಿತಃ ।
ನ ದಾನೈರ್ನತಪೋಭಿಶ್ಚ ನ ಯಜ್ಞೈರ್ನಾಪಿ ವಿದ್ಯಯಾ ॥ ೪೧ ॥

ಪ್ರಾಪ್ಯತೇ ಗತಿ ರುತ್ಕೃಷ್ಟಾ ಯಾ ವಿಮುಕ್ತೇ ತು ಲಭ್ಯತೇ ।
ನಾನಾವರ್ಣಾ ವಿವರ್ಣಾಶ್ಚ ಚಂಡಾಲಾದ್ಯಾ ಜುಗುಪ್ಸಿತಾಃ ॥ ೪೨ ॥

---

೩೯. ದೇವಿಯೇ ! ನೂರಾರು ವಿಘ್ನಗಳಿಂದ ಪ್ರತಿಬಂಧಿಸಲ್ಪಟ್ಟ ಮಹಾತ್ಮನಾದ ಮಾನವನು ದುಃಖ-ಶೋಕಾದಿಗಳಿಗೆ ಆಸ್ಪದವಲ್ಲದ ಪರಮ ಸ್ಥಾನವನ್ನು ಅವಿಮುಕ್ತ ಕ್ಷೇತ್ರವಾಸ ಮಹಿಮೆಯಿಂದ ಹೊಂದುತ್ತಾನೆ.

೪೦. ಮತ್ತು ಜನ್ಮ-ಮೃತ್ಯು-ಜರೆಗಳೆಂಬ ಸಾಮಾನ್ಯ ದೋಷಗಳಿಂದ ಮುಕ್ತವಾದ ಶಿವಾಲಯಕ್ಕೆ ಹೋಗುವನು. ಪುನರ್ಜನ್ಮ ಮರಣರಹಿತವಾದ ಮೋಕ್ಷದಲ್ಲಿ ಆಕಾಂಕ್ಷೆಯುಳ್ಳವರಿಗೆ ಅದು ಪರಮ ಸದ್ಗತಿ ಪ್ರದವಾಗಿರುವುದು.

೪೧. ಜ್ಞಾನಿಯು ಅಂತಹ ಸದ್ಗತಿ ಪ್ರಾಪ್ತಿಯಿಂದ ಕೃತಕೃತ್ಯನಾಗುವನು. ಇದು ಹೊರತು ದಾನ-ತಪಸ್ಸು-ಯಜ್ಞ ಅಥವಾ ಉಪಾಸನೆ ಮುಂತಾದ ಮತ್ತಾವ ಸಾಧನದಿಂದಲೂ ಕೃತಕೃತ್ಯನಾಗುವುದಿಲ್ಲ.

೪೨. ಅವಿಮುಕ್ತಸ್ಥಾನದಲ್ಲಿ ಲಭಿಸುವ ಪರಮಗತಿಯು ಇನ್ನೆಲ್ಲಿಯೂ ಲಭಿಸುವುದಿಲ್ಲ. ಪ್ರಜೆಗಳಲ್ಲಿ ಅನೇಕ ವರ್ಣಗಳಿಂದಲೂ, ಅಧರ್ಮಗಳಿಂದಲೂ, ಕೂಡಿದ ಚಂಡಾಲ ಮುಂತಾದ ಜುಗಪ್ಸಿತ ವ್ಯಕ್ತಿಗಳು ಇರಬಹುದು.

ಕಿಲ್ಬಿಷೈಃ ಪೂರ್ಣದೇಹಾ ಯೇ ಪ್ರಕೃಷ್ಟೈಸ್ತಾಪಕೈಸ್ತಥಾ ।
ಭೇಷಜಂ ಪರಮಂ ತೇಷಾಮವಿಮುಕ್ತಂ ವಿದುರ್ಬುಧಾಃ ॥ ೪೩ ॥

ಅವಿಮುಕ್ತಂ ಪರಂ ಜ್ಞಾನಮವಿಮುಕ್ತಂ ಪರಂ ಪದಮ್ ।
ಅವಿಮುಕ್ತಂ ಪರಂ ತತ್ತ್ವಮವಿಮುಕ್ತಂ ಪರಂ ಶಿವಮ್ ॥ ೪೪ ॥

ಕೃತ್ವಾ ವೈ ನೈಷ್ಠಿಕೀಂ ದೀಕ್ಷಾಮವಿಮುಕ್ತೇ ವಸಂತಿ ಯೇ ।
ತೇಷಾಂ ತತ್ಪರಮಂ ಜ್ಞಾನಂ ದದಾಮ್ಯಂತೇ ಪರಂ ಪದಮ್ ॥ ೪೫ ॥

ಪ್ರಯಾಗಂ ನೈಮಿಷಂ ಪುಣ್ಯಂ ಶ್ರೀಶೈಲೋಽಥ ಹಿಮಾಲಯಃ ।
ಕೇದಾರಂ ಭದ್ರಕರ್ಣಂ ಚ ಗಯಾ ಪುಷ್ಕರಮೇವ ಚ ॥ ೪೬ ॥

---

೪೩. ಹಾಗು ಅತಿಶಯ ತಾಪದಾಯಕವಾದ ಪಾತಕಗಳಿಂದಲೂ ಕಿಲ್ಬಿಷಗಳಿಂದಲೂ ಪೂರ್ಣವಾದ ದೇಹವುಳ್ಳ, ವಿವಿಧ ಜನರಿಗೆ ಅವಿಮುಕ್ತಸ್ಥಾನವು ಉತ್ತಮಭೇಷಜವೆಂದು ಬುಧಜನರು ತಿಳಿದಿರುತ್ತಾರೆ.

೪೪. ಅವಿಮುಕ್ತವೇ ಪರಮ ಜ್ಞಾನವು. ಅವಿಮುಕ್ತವೇ ಪರಮಪದವಿಯು. ಅವಿಮುಕ್ತವೇ ಪರಮ ತತ್ವವು ಮತ್ತು ಅವಿಮುಕ್ತ ಸ್ಥಾನವೇ ಪರಮ ಮಂಗಳಪ್ರದವು.

೪೫. ಯಾವ ಮಾನವರು ಅವಿಮುಕ್ತ ಕ್ಷೇತ್ರದಲ್ಲಿ ನೈಷ್ಠಿಕ ದೀಕ್ಷೆಯನ್ನು ಅಂಗೀಕರಿಸಿ ವಾಸಮಾಡುವರೋ ; ಅಂತಹವರಿಗೆ ಅವಸಾನ ಸಮಯದಲ್ಲಿ ಪರಮ ಜ್ಞಾನವನ್ನೂ ತನ್ಮೂಲಕ ಪರಮಪದವನ್ನೂ ಕೊಡುತ್ತೇನೆ.

೪೬. ತ್ರಿಲೋಕಗಳಲ್ಲಿ ವಿಖ್ಯಾತವಾದ ಪುಣ್ಯಸ್ಥಾನಗಳಲ್ಲಿ ಪ್ರಯಾಗ, ಪುಣ್ಯವಾದ ನೈಮಿಷಾರಣ್ಯ, ಶ್ರೀಶೈಲ, ಹಿಮಾಲಯ ಪರ್ವತ, ಕೇದಾರಕ್ಷೇತ್ರ, ಭದ್ರಕರ್ಣ, ಗಯಾಕ್ಷೇತ್ರ ಮತ್ತು ಪುಷ್ಕರ ಎಂಬ ಸ್ಥಾನಗಳು ಸೇರಿಕೊಂಡಿವೆ.

ಕುರುಕ್ಷೇತ್ರಂ ರುದ್ರಕೋಟಿರ್ನರ್ಮದಾ ಹಾಟಕೇಶ್ವರಮ್ ।
ಶಾಲಿಗ್ರಾಮಂ ಚ ಪುಷ್ಕಾಗ್ರಂ ವಂಶಂ ಕೋಕಾಮುಖಂ ತಥಾ ॥ ೪೭ ॥

ಪ್ರಭಾಸಂ ವಿಜಯೇಶಾನಂ ಗೋಕರ್ಣಂ ಶಂಕುಕರ್ಣಕಮ್ ।
ಏತಾನಿ ಪುಣ್ಯಸ್ಥಾನಾನಿ ತ್ರೈಲೋಕ್ಯೇ ವಿಶ್ರುತಾನಿ ಚ ॥ ೪೮ ॥

ಯಾಸ್ಯಂತಿ ಪರಮಂ ಮೋಕ್ಷಂ ವಾರಾಣಸ್ಯಾಂ ಯಥಾ ಮೃತಾಃ ।
ವಾರಾಣಸ್ಯಾಂ ವಿಶೇಷೇಣ ಗಂಗಾ ತ್ರಿಪಥಗಾಮಿನೀ ॥ ೪೯ ॥

ಪ್ರವಿಷ್ಟಾ ನಾಶಯೇತ್ಪಾಪಂ ಜನ್ಮಾಂತರಶತೈಃ ಕೃತಮ್ ।
ಅನ್ಯತ್ರ ಸುಲಭಾ ಗಂಗಾ ಶ್ರಾದ್ಧಂ ದಾನಂ ತಥಾ ಜಪಃ ॥ ೫೦ ॥

---

೪೭. ಹಾಗು ಕುರುಕ್ಷೇತ್ರ, ರುದ್ರಕೋಟಿ, ನರ್ಮದಾ, ಹಾಟಕೇಶ್ವರಕ್ಷೇತ್ರ, ಶಾಲಿಗ್ರಾಮ, ಪುಷ್ಕಾಗ್ರಕ್ಷೇತ್ರ ವಂಶ ಮತ್ತು ಕೋಕಾಮುಖವೆಂದು ವಿಖ್ಯಾತ ಸ್ಥಾನಗಳು ಪುಣ್ಯಸ್ಥಾನಗಳಲ್ಲಿ ಗಣ್ಯವಾಗಿವೆ.

೪೮. ಪ್ರಭಾಸ, ವಿಜಯೇಶಾನ, ಗೋಕರ್ಣ ಮತ್ತು ಶಂಕುಕರ್ಣವೆಂಬ ಸ್ಥಾನವಿಶೇಷಗಳು ಸೇರಿ ಹಿಂದೆ ಹೇಳಿದ ಕ್ಷೇತ್ರಗಳೆಲ್ಲವೂ ಪವಿತ್ರಸ್ಥಾನಗಳೆಂದು ತ್ರಿಲೋಕಗಳಲ್ಲಿ ಖ್ಯಾತಿಯನ್ನು ಪಡೆದಿವೆ.

೪೯. ಆದರೆ ವಾರಾಣಸಿಯಲ್ಲಿ ಮರಣಹೊಂದಿದ ಮಾನವರು ಪರಮ ಮೋಕ್ಷವನ್ನು ಹೊಂದುವರು. ಲೋಕತ್ರಯದ ಮಾರ್ಗವನ್ನು ಹಿಡಿದಿರುವ ಗಂಗಾ ನದಿಯು ವಾರಾಣಸಿಯಲ್ಲಿ ವಿಶೇಷವಾದ ಪವಿತ್ರತೆಯನ್ನು ಕೊಡುವುದು.

೫೦. ಅಂತಹ ಗಂಗಾನದಿಯನ್ನು ಪ್ರವೇಶಿಸಿದರೆ ಆ ಗಂಗೆಯು ನೂರಾರು ಜನ್ಮಾಂತರಗಳಲ್ಲಿ ಸಂಪಾದಿಸಿದ ಪಾಪಗಳನ್ನು ಕಳೆಯುವುದು. ಗಂಗೆ, ಶ್ರಾದ್ಧ, ದಾನ ಮತ್ತು ತಪಸ್ಸು ಮುಂತಾದ ಉತ್ತಮ ಸಾಧನಗಳು ಬೇರೆ ಸ್ಥಳದಲ್ಲಿ ಸುಲಭವಾಗಿವೆ.

ವ್ರತಾನಿ ಸರ್ವಮೇವೈತದ್ವಾರಾಣಸ್ಯಾಂ ಸುದುರ್ಲಭಮ್ ।
ಯಜೇತ್ತು ಜುಹುಯಾನ್ನಿತ್ಯಂ ದದಾತ್ಯರ್ಚಯತೇಽಪರಾನ್ ॥ ೫೧ ॥

ವಾಯುಭಕ್ಷಶ್ಚ ಸತತಂ ವಾರಾಣಸ್ಯಾಂ ಸ್ಥಿತೋ ನರಃ ।
ಯದಿ ಪಾಪೋ ಯದಿ ಶಠೋ ಯದಿ ಚಾಧಾರ್ಮಿಕೋ ನರಃ ॥ ೫೨ ॥

ವಾರಾಣಸೀಂ ಸಮಾಸಾದ್ಯ ಪುನಾತಿ ಸ ಕುಲತ್ರಯಮ್ ।
ವಾರಾಣಸ್ಯಾಂ ಮಹಾದೇವಂ ಯೇ ಸ್ತುವಂತ್ಯರ್ಚಯಂತಿ ಚ ॥ ೫೩ ॥

ಸರ್ವಪಾಪವಿನಿರ್ಮುಕ್ತಾಸ್ತೇ ವಿಜ್ಞೇಯಾ ಗಣೇಶ್ವರಾಃ ।
ಅನ್ಯತ್ರ ಯೋಗಾಜ್ಞಾನಾದ್ವಾ ಸನ್ಯಾಸಾದಥವಾನ್ಯತಃ ॥ ೫೪ ॥

---

೫೧. ಮತ್ತು ವ್ರತರೂಪವಾದ ಪುಣ್ಯಸಾಧನಗಳು ಬೇರೊಂದುಕಡೆ ಸುಲಭವಾದರೂ ವಾರಾಣಸಿಯಲ್ಲಿ ದುರ್ಲಭವಾಗಿವೆ. ವಾರಾಣಸಿಯಲ್ಲಿ ವಾಸಿಸುವ ನರನು ಯಾಗ, ಹೋಮ, ನಿತ್ಯದಾನ ಮತ್ತು ದೇವತಾರ್ಚನಗಳನ್ನು ಮಾಡಬೇಕು.

೫೨. ಮತ್ತು ವಾರಾಣಸಿಯಲ್ಲಿ ವಾಸಮಾಡುತ್ತಿರುವ ಮಾನವನು ವಾಯುಭಕ್ಷನಾಗಿ ಜಪಾದಿಪರನಾಗಿರಬೇಕು. ಅವನು ಪಾಪಿ, ವಂಚಕ ಅಥವಾ ಅಧಾರ್ಮಿಕನಾಗಿದ್ದರೂ ಪವಿತ್ರನಾಗುವನು.

೫೩. ಅಂತಹ ಮಾನವನು ವಾರಾಣಸೀ ಕ್ಷೇತ್ರವನ್ನು ಹೊಂದಿ ಮೂರು ಕುಲಗಳನ್ನು ಪವಿತ್ರವನ್ನಾಗಿ ಮಾಡುವ ಪುಣ್ಯಾತ್ಮನಾಗುವನು. ನರರು ವಾರಾಣಸಿಯಲ್ಲಿ ಮಹಾದೇವನನ್ನು ಸ್ತುತಿ-ಅರ್ಚನಗಳಿಂದ ಸತ್ಕರಿಸಬೇಕು.

೫೪. ಆ ಮಾನವರು ಸಮಸ್ತ ಪಾತಕಗಳಿಂದ ನಿರ್ಮುಕ್ತರಾಗಿ ಗಣಾಧಿಪತಿಗಳಾಗುವರು. ಬೇರೊಂದು ಕಡೆಯಲ್ಲಿ ಆಚರಿಸಿದ ಯೋಗ, ಜ್ಞಾನ, ಸನ್ನ್ಯಾಸ ಅಥವಾ ಇತರ ಸಾಧನಗಳು ಶೀಘ್ರವಾಗಿ ಫಲದಾಯಕಗಳಾಗುವುದಿಲ್ಲ.

ಪ್ರಾಪ್ಯತೇ ತತ್ಪರಂ ಸ್ಥಾನಂ ಸಹಸ್ರೇಣೈವ ಜನ್ಮನಾ ।
ಯೇ ಭಕ್ತಾ ದೇವದೇವೇಶೇ ವಾರಾಣಸ್ಯಾಂ ವಸಂತಿ ವೈ ॥ ೫೫ ॥

ತೇ ವಿಂದಂತಿ ಪರಂ ಮೋಕ್ಷಮೇಕೇನೈವ ತು ಜನ್ಮನಾ ।
ಯತ್ರ ಯೋಗಸ್ತಥಾ ಜ್ಞಾನಂ ಮುಕ್ತಿರೇಕೇನ ಜನ್ಮನಾ ॥ ೫೬ ॥

ಅವಿಮುಕ್ತಂ ಸಮಾಸಾದ್ಯ ನಾನ್ಯದ್ಗಚ್ಛೇತ್ತಪೋವನಮ್ ।
ಯತೋ ಮಯಾ ನ ಮುಕ್ತಂ ತದವಿಮುಕ್ತಮಿತಿ ಸ್ಮೃತಮ್ ॥ ೫೭ ॥

ತದೇವ ಗುಹ್ಯಂ ಗುಹ್ಯಾನಾಮೇತದ್ವಿಜ್ಞಾಯ ಮುಚ್ಯತೇ ।
ಜ್ಞಾನಧ್ಯಾನನಿವಿಷ್ಟಾನಾಂ ಪರಮಾನಂದಮಿಚ್ಛತಾಮ್ ॥ ೫೮ ॥

---

೫೫. ಅವುಗಳಿಂದ ಸಹಸ್ರಾರು ಜನ್ಮವ್ಯವಧಾನದಿಂದ ಪರಮಸ್ಥಾನರೂಪವಾದ ಫಲಪ್ರಾಪ್ತಿಯಾಗುವುದು. ದೇವದೇವೋತ್ತಮನಾದ ಮಹಾದೇವನಲ್ಲಿ ಭಕ್ತಿಯನ್ನು ಇಟ್ಟು ವಾರಾಣಸಿಯಲ್ಲಿ ವಾಸಮಾಡುವುದು ಶೀಘ್ರವಾಗಿ ಶ್ರೇಯಸ್ಕರವಾಗುವುದು.

೫೬. ಅವರು ಪರಮರೂಪವಾದ ಮೋಕ್ಷವನ್ನು ಒಂದೇ ಜನ್ಮದಿಂದಲೆ ಅನುಭವಿಸುತ್ತಾರೆ. ಆ ಕ್ಷೇತ್ರದಲ್ಲಿ ಯೋಗ-ಜ್ಞಾನ ಮತ್ತು ಮುಕ್ತಿಗಳು ಒಂದು ಜನ್ಮದಲ್ಲಿಯೇ ಸಿದ್ಧಿಸುವುವು.

೫೭. ಅಂತಹ ಅವಿಮುಕ್ತ ಕ್ಷೇತ್ರವನ್ನು ಹೊಂದಿದ ಬಳಿಕ ಮತ್ತೊಂದು ತಪೋವನಕ್ಕೆ ಹೋಗಬೇಕೆಂಬುದು ಇರುವುದಿಲ್ಲ. ಆ ಕ್ಷೇತ್ರವು ಯಾವಾಗಲೂ ನನ್ನಿಂದ ಬಿಡಲ್ಪಡದಿರುವುದರಿಂದ ಅವಿಮುಕ್ತವೆಂಬ ಯಥಾರ್ಥ ನಾಮದಿಂದ ಕರೆಯಲ್ಪಟ್ಟಿದೆ.

೫೮. ಗೋಪ್ಯ ವಸ್ತುಗಳಲ್ಲಿ ಗೋಪ್ಯವಾದ ವಸ್ತುವು ಅವಿಮುಕ್ತವೇ ಆಗಿದೆ. ಅದನ್ನು ತಿಳಿದ ನರನು ಮುಕ್ತನಾಗುವನು. ಪರಮಾನಂದವನ್ನು ಫಲವಾಗಿ ಅಪೇಕ್ಷಿಸಿ ಜ್ಞಾನ-ಧ್ಯಾನಮಾರ್ಗಗಳಲ್ಲಿ ಜನರು ತತ್ಪರರಾಗುವರು.

ಯಾ ಗತಿರ್ವಿಹಿತಾ ಸುಭ್ರು ಸಾವಿಮುಕ್ತೇ ಮೃತಸ್ಯ ತು ।
ಯಾನಿ ಕಾನ್ಯವಿಮುಕ್ತಾನಿ ದೇವೈರುಕ್ತಾನಿ ನಿತ್ಯಶಃ ॥ ೫೯ ॥

ಪುರೀ ವಾರಾಣಸೀ ತೇಭ್ಯಃ ಸ್ಥಾನೇಭ್ಯೋಽಪ್ಯಧಿಕಾ ಶುಭಾ ।
ಯತ್ರ ಸಾಕ್ಷಾನ್ಮಹಾದೇವೋ ದೇಹಾಂತೇಽಕ್ಷಯ್ಯಮೀಶ್ವರಃ ॥ ೬೦ ॥

ವ್ಯಾಚಷ್ಟೇ ತಾರಕಂ ಬ್ರಹ್ಮ ತಥೈವ ಹ್ಯವಿಮುಕ್ತಕಮ್ ।
ಯತ್ತತ್ಪರತರಂ ತತ್ತ್ವಮವಿಮುಕ್ತಮಿತಿ ಸ್ಮೃತಮ್ ॥ ೬೧ ॥

ಏಕೇನ ಜನ್ಮನಾ ದೇವಿ ವಾರಾಣಸ್ಯಾಂ ತದಾಪ್ಯತೇ ।
ಭ್ರೂಮಧ್ಯೇ ನಾಭಿಮಧ್ಯೇ ಚ ಹೃದಯೇಽಪಿ ಚ ಮೂರ್ಧನಿ ॥ ೬೨ ॥

---

೫೯. ಸುಂದರಿಯೆ ! ಜ್ಞಾನಾದಿ ತತ್ಪರರಿಗೆ ಯಾವ ಸದ್ಗತಿಯು ಪ್ರಾಪ್ಯವಾಗಿರುವುದೊ, ಅವಿಮುಕ್ತದಲ್ಲಿ ಮೃತನಾದ ಮಾನವನಿಗೆ ಆ ಗತಿಯು ಲಭಿಸುವುದು. ದೇವತೆಗಳಿಂದ ನಿತ್ಯದಲ್ಲಿಯೂ ಅನೇಕಾನೇಕ ಅವಿಮುಕ್ತಗಳು ವರ್ಣಿಸಲ್ಪಟ್ಟಿವೆ.

೬೦. ಆ ಸಮಸ್ತ ಸ್ಥಾನಗಳಿಗಿಂತಲೂ ವಾರಾಣಸೀ ನಗರಿಯು ಅಧಿಕವೂ, ಮಂಗಳಕರವೂ ಆಗಿದೆ. ಆ ಸ್ಥಾನದಲ್ಲಿ ಮಹಾದೇವನಾದ ಈಶ್ವರನು ಜಂತುವಿನ ದೇಹಾಂತ ಸಮಯದಲ್ಲಿ ಅಕ್ಷಯವಾದ ತಾರಕ ಮಂತ್ರವನ್ನು ಉಪದೇಶಿಸುವನು.

೬೧. ಅವಿಮುಕ್ತಕವೆಂಬ ಪರ್ಯಾಯನಾಮವುಳ್ಳ ತಾರಕ ಬ್ರಹ್ಮವನ್ನು ಮಹಾದೇವನು ಉಪದೇಶಿಸುತ್ತಾನೆ. ತತ್ತ್ವಗಳಲ್ಲಿ ಪರಮವೆಂದೆನಿಸಿದ ತತ್ತ್ವವು ಅವಿಮುಕ್ತವೆಂದು ಸ್ಮರಿಸಲ್ಪಟ್ಟಿದೆ.

೬೨. ದೇವಿಯೇ ! ಅಂತಹ ಪರಮತತ್ತ್ವವು ವಾರಾಣಸೀ ಕ್ಷೇತ್ರದಲ್ಲಿ ಒಂದೇ ಜನ್ಮದಿಂದ ಲಭ್ಯವಾಗುವುದು. ಹುಬ್ಬುಗಳ ಮತ್ತು ನಾಭಿಯ ಮಧ್ಯದಲ್ಲಿಯೂ ಹೃದಯದಲ್ಲಿಯೂ ಶಿರೋದೇಶದಲ್ಲಿಯೂ ಅವಿಮುಕ್ತ ಸ್ಥಾನವು ಇರುವುದು.

ಯಥಾವಿಮುಕ್ತಮಾದಿತ್ಯೇ ವಾರಾಣಸ್ಯಾಂ ವ್ಯವಸ್ಥಿತಮ್ ।
ವರಣಾಯಾಸ್ತಥಾ ಹ್ಯಸ್ಯಾ ಮಧ್ಯೇ ವಾರಾಣಸೀ ಪುರೀ ॥ ೬೩ ॥

ತತ್ರೈವ ಸಂಸ್ಥಿತಂ ತತ್ತ್ವಂ ನಿತ್ಯಮೇವಾವಿಮುಕ್ತಕಮ್ ।
ವಾರಾಣಸ್ಯಾಃ ಪರಂ ಸ್ಥಾನಂ ನ ಭೂತಂ ನ ಭವಿಷ್ಯತಿ ॥ ೬೪ ॥

ಯಥಾ ನಾರಾಯಣೋ ದೇವೋ ಮಹಾದೇವಾದಿವೇಶ್ವರಾತ್ ।
ತತ್ರ ದೇವಾಃ ಸಗಂಧರ್ವಾಃ ಸಯಕ್ಷೋರಗರಾಕ್ಷಸಾಃ ॥ ೬೫ ॥

ಉಪಾಸತೇ ಮಾಂ ಸತತಂ ದೇವದೇವಃ ಪಿತಾಮಹಃ ।
ಮಹಾಪಾತಕಿನೋ ಯೇ ಚ ಯೇ ತೇಭ್ಯಃ ಪಾಪಕೃತ್ತಮಾಃ ॥ ೬೬ ॥

---

೬೩. ಮತ್ತು ಆದಿತ್ಯ ಮಂಡಲದಲ್ಲಿಯೂ ಅವಿಮುಕ್ತ ಪದವು ಇರುವಂತೆ ವಾರಾಣಸೀ ನಗರದಲ್ಲಿಯೂ ಅವಿಮುಕ್ತಪದವು ವ್ಯವಸ್ಥಿತವಾಗಿರುವುದು. ವರಣಾ ಮತ್ತು ನಾಸೀ ಎಂದು ಕರೆಯಲ್ಪಡುವ ಭ್ರೂ ಮತ್ತು ನಾಸಿಕೆಗಳ ಮಧ್ಯದಲ್ಲಿ ವಾರಾಣಸಿಯು ಇರುವುದು.

೬೪. ಅವಿಮುಕ್ತವೆಂಬ ತತ್ತ್ವವು ಯಾವಾಗಲೂ ಅಂತಹ ವಾರಾಣಸಿ ಯಲ್ಲಿಯೇ ಇರುವುದು. ವಾರಾಣಸಿಗಿಂತ ಉತ್ತಮವಾದ ಮತ್ತೊಂದು ಸ್ಥಾನವು ಹಿಂದೆ ಎಲ್ಲಿಯೂ ಹುಟ್ಟಲಿಲ್ಲ. ಮುಂದೆ ಹುಟ್ಟುವುದೂ ಇಲ್ಲ.

೬೫ ಸರ್ವೇಶ್ವರನಾದ ಮಹಾದೇವನಿಗಿಂತಲೂ ನಾರಾಯಣನು ಹೇಗೆ ಅಧಿಕ ನಾಗಲಾರನೋ ; ಹಾಗೆ ವಾರಾಣಸಿಗಿಂತ ಅಧಿಕಸ್ಥಾನವು ಮತ್ತೊಂದು ಸಂಭವಿಸು ವುದಿಲ್ಲ. ಆ ವಾರಾಣಸಿಯಲ್ಲಿ ಗಂಧರ್ವ, ಯಕ್ಷ, ಸರ್ಪ, ರಾಕ್ಷಸರ ಸಂಗಡ ಸಕಲ ದೇವತೆಗಳು ವಿಶ್ವೇಶ್ವರನನ್ನು ಉಪಾಸನೆಮಾಡುವರು.

೬೬. ಮತ್ತು ದೇವೋತ್ತಮನಾದ ಪಿತಾಮಹನೂ ಸಂತತವಾಗಿ ನನ್ನನ್ನು ಸೇವಿಸುತ್ತಾನೆ. ಮಹಾ ಪಾತಕಗಳನ್ನು ಮಾಡಿದವರೂ ಅವರಿಗಿಂತ ಅಧಿಕರೆನಿಸಿದ ಪಾಪಿಗಳೂ ಈ ಕ್ಷೇತ್ರದಲ್ಲಿ ಪವಿತ್ರರಾಗುವರು.

ವಾರಾಣಸೀಂ ಸಮಾಸಾದ್ಯ ತೇ ಯಾಂತಿ ಪರಮಾಂ ಗತಿಮ್ ।
ತಸ್ಮಾನ್ಮುಮುಕ್ಷುರ್ನಿಯತೋ ವಸೇಚ್ಛಾಮರಣಾಂತಕಮ್ ॥ ೬೭ ॥

ವಾರಾಣಸ್ಯಾಂ ಮಹಾದೇವಿ ಜ್ಞಾನಂ ಲಬ್ಧ್ವಾ ವಿಮುಚ್ಯತೇ ।
ಕಿಂ ತು ವಿಘ್ನಾ ಭವಿಷ್ಯಂತಿ ಪಾಪೋಪಹತಚೇತಸಾಮ್ ॥ ೬೮ ॥

ತತೋ ನೈವ ಚರೇತ್ಪಾಪಂ ಕಾಯೇನ ಮನಸಾ ಗಿರಾ ।
ಏತದ್ರಹಸ್ಯಂ ಪಾಪಾನಾಂ ಪುರಾಣಾನಾಂ ದ್ವಿಜೋತ್ತಮಾಃ ॥ ೬೯ ॥

ಅವಿಮುಕ್ತಾಶ್ರಯಂ ಜ್ಞಾನಂ ನ ಕಿಂಚಿದ್ವೇದ್ಮಿ ತತ್ಪರಮ್ ।
ದೇವತಾನಾಮೃಷೀಣಾಂ ಚ ಶೃಣ್ವತಾಂ ಪರಮೇಷ್ಠಿನಾಮ್ ॥ ೭೦ ॥

---

೬೭. ಅಂತಹ ಮಹಾಪಾತಕಿಗಳು ವಾರಾಣಸಿಯನ್ನು ಹೊಂದಿ ಅದರ ಮಹಿಮೆಯಿಂದ ಸದ್ಗತಿಯನ್ನು ಹೊಂದುವರು. ಆದುದರಿಂದ ಮೋಕ್ಷವನ್ನು ಇಚ್ಛಿಸುವ ನರನು ನಿಯಮಗಳಿಂದ ಮರಣಪರ್ಯಂತವಾಗಿ ವಾರಾಣಸಿಯಲ್ಲಿ ವಾಸ ಮಾಡಬೇಕು.

೬೮. ಮಹಾದೇವಿಯೆ ! ವಾರಾಣಸಿಯಲ್ಲಿ ಮರಣಹೊಂದುವುದರಿಂದ ಮಾನವನು ಜ್ಞಾನವನ್ನು ಹೊಂದಿ ವಿಮುಕ್ತನಾಗುವನು. ಆದರೆ ಪಾಪಗಳಿಂದ ಹತವಾದ ಚಿತ್ತವುಳ್ಳವರಿಗೆ ವಾರಾಣಸೀ ವಾಸದಲ್ಲಿ ಅನೇಕ ವಿಘ್ನಗಳು ಸಂಭವಿಸುತ್ತವೆ.

೬೯. ದ್ವಿಜೋತ್ತಮರೆ ! ಆದುದರಿಂದ ಶರೀರ, ವಾಕ್, ಮಾನಸಗಳಿಂದ ಪಾಪವನ್ನು ಯಾವಾಗಲೂ ಆಚರಿಸಬಾರದು. ಇದು ವೇದ ಮತ್ತು ಪುರಾಣಗಳಲ್ಲಿ ಪ್ರತಿಪಾದ್ಯವಾದ ರಹಸ್ಯವಾಗಿರುವುದು.

೭೦. ಅವಿಮುಕ್ತ ಸ್ಥಾನದಲ್ಲಿ ಜನಿಸುವ ಜ್ಞಾನಕ್ಕಿಂತ ಉತ್ತಮವಾದುದನ್ನು ನಾನು ಕಂಡಿಲ್ಲ ; ಹೀಗೆ ದೇವತೆ, ಋಷಿ, ಮುಂತಾದ ಪರಮಸ್ಥಾನದಲ್ಲಿ ಇರುವ ಮಹಾತ್ಮರೆದುರಿಗೆ ಅವಿಮುಕ್ತ ಮಹಿಮೆಯು ಹೇಳಲ್ಪಟ್ಟಿದೆ.

ದೇವ್ಯೈ ದೇವೇನ ಕಥಿತಂ ಸರ್ವಪಾಪವಿನಾಶನಮ್ ।
ಯಥಾ ನಾರಾಯಣಃ ಶ್ರೇಷ್ಠೋ ದೇವಾನಾಂ ಪುರುಷೋತ್ತಮಃ॥೭೧॥

ಯಥೇಶ್ವರಾಣಾಂ ಗಿರಿಶಃ ಸ್ಥಾನಾನಾಂ ಚೈತದುತ್ತಮಮ್ ।
ಯೈಃ ಸಮಾರಾಧಿತೋ ರುದ್ರಃ ಪೂರ್ವಸ್ಮಿನ್ನೇವ ಜನ್ಮನಿ ॥ ೭೨ ॥

ತೇ ವಿಂದಂತಿ ಪರಂ ಕ್ಷೇತ್ರಮವಿಮುಕ್ತಂ ಶಿವಾಲಯಮ್ ।
ಕಲಿಕಲ್ಮಷಸಂಭೂತಾ ಯೇಷಾಮುಪಹತಾ ಮತಿಃ ॥ ೭೩ ॥

ನ ತೇಷಾಂ ವೀಕ್ಷಿತುಂ ಶಕ್ಯಂ ಸ್ಥಾನಂ ತತ್ಪರಮೇಷ್ಠಿನಃ ।
ಯೇ ಸ್ಮರಂತಿ ಸದಾ ಕಾಲಂ ವಿಂದಂತಿ ಚ ಪುರೀಮಿಮಾಮ್ ॥ ೭೪ ॥

---

೭೧. ಮಹಾದೇವನಿಂದ ಪಾರ್ವತೀದೇವಿಗೆ ಸಕಲ ಪಾಪಗಳನ್ನು ಭಂಗ ಪಡಿಸುವ ಈ ಮಹಿಮೆಯು ಹೇಳಲ್ಪಟ್ಟಿದೆ. ಸಮಸ್ತ ದೇವತೆಗಳಲ್ಲಿ ಪುರುಷೋತ್ತಮನಾದ ನಾರಾಯಣನು ಶ್ರೇಷ್ಠನಾಗಿರುವನು.

೭೨. ಈಶ್ವರಪುರುಷರಲ್ಲಿ ಕೈಲಾಸಾದ್ರಿವಾಸಿಯಾದ ಶಂಕರನು ಉತ್ತಮನು. ಅದರಂತೆ ಸಮಸ್ತ ಸ್ಥಾನಗಳಲ್ಲಿ ಅವಿಮುಕ್ತವು ಪರಮವಾದುದು. ಕೆಲವರು ಪೂರ್ವ ಜನ್ಮದಲ್ಲಿ ರುದ್ರನನ್ನು ಆರಾಧಿಸಿರುವರು.

೭೩. ಅವರು ಅವಿಮುಕ್ತ ಕ್ಷೇತ್ರವೆಂಬ ಉತ್ತಮವಾದ ಶಿವಾಲಯವನ್ನು ಹೊಂದುತ್ತಾರೆ. ಕೆಲವು ಮಾನವರಿಗೆ ವಿವೇಕ ಬುದ್ಧಿಯು ಕಲಿಯುಗದ ಕಲ್ಮಷ ಸಂಪರ್ಕದಿಂದ ದುಷ್ಟವಾಗಿರುವುದು.

೭೪. ಅಂತಹವರಿಗೆ ಪರಮಸ್ಥಾನದಲ್ಲಿರುವ ಮಹಾದೇವನ ಸ್ಥಾನವು ದರ್ಶನ ಗೋಚರವಾಗುವ ಸಂಶಯವು ಕೂಡ ಇಲ್ಲ. ಇಂತಹ ಉತ್ತಮ ಕ್ಷೇತ್ರವನ್ನು ಯಾವಾಗಲೂ ಸ್ಮರಿಸಬೇಕು. ಮತ್ತು ಅದನ್ನು ಹೊಂದಲು ಯತ್ನಿಸಬೇಕು.

ತೇಷಾಂ ವಿನಶ್ಯತಿ ಕ್ಷಿಪ್ರಮಿಹಾಮುತ್ರ ಚ ಪಾತಕಮ್ ।
ಯಾನಿ ಚೇಹ ಪ್ರಕುರ್ವಂತಿ ಪಾತಕಾನಿ ಕೃತಾಲಯಾಃ ॥ ೭೫ ॥

ನಾಶಯೇತ್ತಾನಿ ಸರ್ವಾಣಿ ತೇನ ಕಾಲತನುಃ ಶಿವಃ ।
ಆಗಚ್ಛತಾಮಿದಂ ಸ್ಥಾನಂ ಸೇವಿತುಂ ಮೋಕ್ಷಕಾಂಕ್ಷಿಣಾಮ್ ॥ ೭೬ ॥

ಮೃತಾನಾಂ ವೈ ಪುನರ್ಜನ್ಮ ನ ಭೂಯೋ ಭವಸಾಗರೇ ।
ತಸ್ಮಾತ್ ಸರ್ವಪ್ರಯತ್ನೇನ ವಾರಾಣಸ್ಯಾಂ ವಸೇನ್ನರಃ ॥ ೭೭ ॥

ಯೋಗೀ ವಾಪ್ಯಥವಾಯೋಗೀ ಪಾಪೀ ವಾ ಪುಣ್ಯಕೃತ್ತಮಃ ।
ನ ಲೋಕವಚನಾತ್ಪಿತ್ರೋರ್ನ ಚೈವ ಗುರುವಾದತಃ ॥ ೭೮ ॥

---

೭೫. ಅವರ ಇಹ-ಪರ ಜನ್ಮಗಳ ಪಾತಕಗಳು ಕ್ಷಿಪ್ರದಲ್ಲಿ ನಾಶಹೊಂದುತ್ತವೆ. ಒಂದು ವೇಳೆ ಈ ಕ್ಷೇತ್ರದಲ್ಲಿ ವಾಸಮಾಡುತ್ತ ಪಾತಕಗಳನ್ನು ಆಚರಿಸಬಹುದು.

೭೬. ಆದರೆ ಆ ಸಮಸ್ತ ಪಾತಕಗಳನ್ನು ಕಾಲರೂಪಿಯಾದ ಶಂಕರನು ನಾಶ ಮಾಡುವನು. ಮೋಕ್ಷವನ್ನು ಆಕಾಂಕ್ಷಿಸಿ ಅನೇಕ ಮಹಾತ್ಮರು ಈ ಸ್ಥಾನವನ್ನು ಸೇವಿಸಲು ಬರುವರು.

೭೭. ಅಂತಹ ಜನರು ಈ ಕ್ಷೇತ್ರದಲ್ಲಿ ಮೃತರಾದರೆ ಅವರಿಗೆ ಭವಸಾಗರದಲ್ಲಿ ಮತ್ತೆ ಮತ್ತೆ ಜನ್ಮವುಂಟಾಗುವುದಿಲ್ಲ. ಆದುದರಿಂದ ಮಾನವನು ಸರ್ವಪ್ರಯತ್ನ ಗಳಿಂದ ವಾರಾಣಸಿಯಲ್ಲಿ ವಾಸಮಾಡಬೇಕು.

೭೮. ಯೋಗಿ ಅಥವಾ ಅಯೋಗಿಗಳಿಗೂ, ಪಾಪಿ ಅಥವಾ ಪುಣ್ಯವಂತರಿಗೂ ಅವಿಮುಕ್ತ ಕ್ಷೇತ್ರವಾಸವು ಶ್ರೇಯಸ್ಕರವಾದುದು. ಜನರ ವಚನದಿಂದಾಗಲಿ, ಮಾತಾ ಪಿತೃಗಳ ಆದೇಶದಿಂದಾಗಲಿ, ಗುರುನಿಯೋಗದಿಂದಾಗಲಿ ಅವಿಮುಕ್ತಸ್ಥಾನವಾಸದ ರುಚಿಯನ್ನು ತ್ಯಜಿಸಲಾಗದು.

ಮತಿರುತ್ಕರ್ಮಣೀಯಾ ಸ್ಯಾದವಿಮುಕ್ತಾಗತಿಂ ಪ್ರತಿ ॥ ೭೯ ॥

ಸೂತ ಉವಾಚ :—

ಏವಮುಕ್ತ್ವಾಥ ಭಗವಾನ್ ವ್ಯಾಸೋ ವೇದವಿದಾಂ ವರಃ ।
ಸಹೈವ ಶಿಷ್ಯಪ್ರವರೈರ್ವಾರಾಣಸ್ಯಾಂ ಚಚಾರ ಹ ॥ ೮೦ ॥

ಇತಿ ಶ್ರೀ ಕೂರ್ಮಪುರಾಣೇ ಏಕತ್ರಿಂಶೋಽಧ್ಯಾಯಃ.

---

೭೯. ಆದುದರಿಂದ ಅವಿಮುಕ್ತಸ್ಥಾನಕ್ಕೆ ಹೋಗಬೇಕೆಂಬ ಸಂಕಲ್ಪವು ಶ್ರೇಯಸ್ಕರವಾದುದರಿಂದ ಅಂತಹ ಮತಿಯು ಯಾವುದೊಂದು ಗುರುನಿಯೋಗದಿಂದಲೂ ತಡೆಯಲ್ಪಡುವುದು ಉಚಿತವಲ್ಲ.

೮೦. ಸೂತಮುನಿಯು ಹೀಗೆಂದು ಹೇಳಿದನು :—ವೇದಗಳನ್ನು ತಿಳಿದವರಲ್ಲಿ ಪ್ರವರನೂ ಭಗವಂತನೂ ಆದ ವ್ಯಾಸಮುನಿಯು ಹೀಗೆಂದು ಹೇಳಿ ತನ್ನ ಅನೇಕ ಮಂದಿ ಶಿಷ್ಯರೊಡನೆ ವಾರಾಣಸಿಯಲ್ಲಿ ಸಂಚರಿಸಿದನು.

( ಕೂರ್ಮಪುರಾಣದಲ್ಲಿ ಮೂವತ್ತೊಂದನೆಯ ಅಧ್ಯಾಯವು ಸಮಾಪ್ತವು. )



ಶ್ರೀಃ

# ಕೂರ್ಮಪುರಾಣಂ

---

## ದ್ವಾತ್ರಿಂಶೋಧ್ಯಾಯಃ.

**ಸೂತ ಉವಾಚ :—**

**ಸ ಶಿಷ್ಯೈಃ ಸಂವೃತೋ ಧೀಮಾನ್ ಗುರುರ್ದ್ವೈಪಾಯನೋ ಮುನಿಃ**
**ಜಗಾಮ ವಿಪುಲಂ ಲಿಂಗಮೋಂಕಾರಂ ಮುಕ್ತಿದಾಯಕಮ್ ॥ ೧ ॥**

**ತತ್ರಾಭ್ಯರ್ಚ್ಯ ಮಹಾದೇವಂ ಶಿಷ್ಯೈಃ ಸಹ ಮಹಾಮುನಿಃ ।**
**ಪ್ರೋವಾಚ ತಸ್ಯ ಮಾಹಾತ್ಮ್ಯಂ ಮುನೀನಾಂ ಭಾವಿತಾತ್ಮನಾಮ್॥ ೨ ॥**

---

## ಮೂವತ್ತೆರಡನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಶಿಷ್ಯಜನರಿಂದ ಕೂಡಿದವನೂ, ಮಹಾಜ್ಞಾನಿಯೂ, ಗುರುವೂ ಆದ ದ್ವೈಪಾಯನ ಮುನಿಯು ಮುಕ್ತಿಯನ್ನು ಕೊಡುವ ಓಂಕಾರರೂಪವಾದ ಮಹಾಲಿಂಗ ಸನ್ನಿಧಿಯನ್ನು ಹೊಂದಿದನು.

೨. ಆ ಲಿಂಗಸನ್ನಿಧಾನದಲ್ಲಿ ಮಹಾಮುನಿಯು ಶಿಷ್ಯಜನರೊಂದಿಗೆ ಮಹಾದೇವನನ್ನು ಅರ್ಚಿಸಿ ಸಂಸ್ಕೃತವಾದ ಅಂತಃಕರಣವುಳ್ಳ ಮುನಿಗಳಿಗೆ ಲಿಂಗದ ಮಾಹಾತ್ಮ್ಯವನ್ನು ವ್ಯಾಖ್ಯಾನಮಾಡಿದನು.

ಇದಂ ತದ್ವಿಮಲಂ ಲಿಂಗಮೋಂಕಾರಂ ನಾಮ ಶೋಭನಮ್ ।
ಅಸ್ಯ ಸ್ಮರಣಮಾತ್ರೇಣ ಮುಚ್ಯತೇ ಸರ್ವಪಾತಕೈಃ ॥ ೩ ॥

ಅತ್ರ ತತ್ಪರಮಂ ಜ್ಞಾನಂ ಪಂಚಾಯತನಮುತ್ತಮಮ್ ।
ಅರ್ಚಿತಂ ಮುನಿಭಿರ್ನಿತ್ಯಂ ವಾರಾಣಸ್ಯಾಂ ವಿಮೋಕ್ಷದಮ್ ॥ ೪ ॥

ಅತ್ರ ಸಾಕ್ಷಾನ್ಮಹಾದೇವಃ ಪಂಚಾಯತನವಿಗ್ರಹಃ ।
ರಮತೇ ಭಗವಾನ್ ರುದ್ರೋ ಜಂತೂನಾಮಪವರ್ಗದಃ ॥ ೫ ॥

ಯತ್ತತ್ಪಾಶುಪತಂ ಜ್ಞಾನಂ ಪಂಚಾರ್ಥಮಿತಿ ಕಥ್ಯತೇ ।
ತದೇವ ವಿಮಲಂ ಲಿಂಗಮೋಂಕಾರಂ ಸಮುವಸ್ಥಿತಮ್ ॥ ೬ ॥

---

೩. ಇದು ಮಂಗಳದಾಯಕವೂ ಓಂಕಾರಲಿಂಗವೆಂಬ ನಾಮಾಂಕಿತವೂ ಆದ ನಿರ್ಮಲವಾದ ಲಿಂಗವು. ಮಾನವನು ಇದನ್ನು ಸ್ಮರಣಮಾಡಿದ ಮಾತ್ರದಿಂದ ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ.

೪. ಈ ವಾರಾಣಸೀ ಕ್ಷೇತ್ರದಲ್ಲಿ ಪರಮಜ್ಞಾನದಾಯಕವೂ, ಉತ್ತಮವೂ, ಪಂಚಾಯತನಸ್ವರೂಪವೂ ಮತ್ತು ಮೋಕ್ಷಸಾಮ್ರಾಜ್ಯವನ್ನು ಉಂಟುಮಾಡುವುದೂ ಆದ ಮಹಾಲಿಂಗವು ಮುನಿಗಳಿಂದ ನಿತ್ಯದಲ್ಲಿ ಪೂಜಿಸಲ್ಪಟ್ಟಿದೆ.

೫. ಈ ಸ್ಥಳದಲ್ಲಿ ಷಡ್ಗುಣೈಶ್ವರ್ಯಸಂಪನ್ನನೂ, ರುದ್ರಮೂರ್ತಿಯೂ ಆದ ಮಹಾದೇವನು ಪಂಚಾಯತನ ವಿಗ್ರಹವನ್ನು ಧರಿಸಿದವನಾಗಿ ಜಂತುಗಳಿಗೆ ಮೋಕ್ಷವನ್ನು ನೀಡುತ್ತ ಪ್ರತ್ಯಕ್ಷವಾಗಿ ರಮಿಸುತ್ತಿರುವನು.

೬. ಪಂಚಾರ್ಥಗಳೆಂಬ ಅವಯವಗಳಿಂದ ಕೂಡಿರುವುದಾಗಿ ಹೇಳಲ್ಪಟ್ಟ ಪಾಶುಪತಜ್ಞಾನವೇ ನಿರ್ಮಲವಾದ ಓಂಕಾರಸ್ವರೂಪವಾದ ಲಿಂಗರೂಪದಿಂದ ಸನ್ನಿಹಿತವಾಗಿರುವುದು.

ಶಾಂತ್ಯತೀತಾ ಪರಾ ಶಾಂತಿರ್ವಿದ್ಯಾ ಚೈವ ಯಥಾಕ್ರಮಮ್ ।
ಪ್ರತಿಷ್ಠಾ ಚ ನಿವೃತ್ತಿಶ್ಚ ಪಂಚಾರ್ಥಂ ಲಿಂಗಮೈಶ್ವರಮ್ ॥ ೭ ॥

ಪಂಚಾನಾಮಪಿ ದೇವಾನಾಂ ಬ್ರಹ್ಮಾದೀನಾಂ ಯದಾಶ್ರಯಮ್ ।
ಓಙ್ಕಾರಬೋಧಿತಂ ಲಿಂಗಂ ಪಂಚಾಯತನಮುಚ್ಯತೇ ॥ ೮ ॥

ಸಂಸ್ಮರೇದೈಶ್ವರಂ ಲಿಂಗಂ ಪಂಚಾಯತನಮವ್ಯಯಮ್ ।
ದೇಹಾಂತೇ ತತ್ಪರಂ ಜ್ಯೋತಿರಾನಂದಂ ವಿಶತೇ ಪುನಃ ॥ ೯ ॥

ಅತ್ರ ದೇವರ್ಷಯಃ ಪೂರ್ವಂ ಸಿದ್ಧಾ ಬ್ರಹ್ಮರ್ಷಯಸ್ತಥಾ ।
ಉಪಾಸ್ಯ ದೇವಮೀಶಾನಂ ಪ್ರಾಪ್ತವಂತಃ ಪರಂ ಪದಮ್ ॥ ೧೦ ॥

---

೭. ಈ ಈಶ್ವರನ ಲಿಂಗವು ಶಾಂತ್ಯತೀತಾ, ಶಾಂತಿ, ವಿದ್ಯಾ, ಪ್ರತಿಷ್ಠಾ ಮತ್ತು ನಿವೃತ್ತಿ ಎಂದು ಕ್ರಮವಾಗಿ ಕರೆಯಲ್ಪಡುವ ಐದು ಕಲಾರೂಪವಾದ ಪಂಚಾರ್ಥಗಳಿಂದ ರಾಜಿಸುವುದು.

೮. ಬ್ರಹ್ಮ ಮೊದಲಾದ ಪಂಚದೇವತೆಗಳಿಗೆ ಆಶ್ರಯರೂಪವಾಗಿರುವ ಈಶ್ವಲಿಂಗವು ಓಂಕಾರಾರ್ಥವನ್ನು ಬೋಧಿಸುವುದಾಗಿ ಪಂಚಾಯತನವೆಂದು ಹೇಳಲ್ಪಡುತ್ತದೆ.

೯. ಪಂಚಾಯತನರೂಪವೂ, ಅವ್ಯಯಸ್ವರೂಪವೂ ಆದ ಈಶ್ವರಲಿಂಗವನ್ನು ಸರ್ವಕಾಲಗಳಲ್ಲಿಯೂ ಸ್ಮರಿಸಬೇಕು. ಅದರಿಂದ ದೇಹಾವಸಾನ ಸಮಯದಲ್ಲಿ ಜ್ಯೋತಿರೂಪವಾದ ಪರಮಾನಂದವನ್ನು ಹೊಂದುವನು.

೧೦. ಈ ಲಿಂಗದಲ್ಲಿ ಪೂರ್ವದಲ್ಲಿ ದೇವತೆಗಳು, ಋಷಿಗಳು, ಸಿದ್ಧರು, ಬ್ರಹ್ಮರ್ಷಿಗಳು ಮುಂತಾದವರು ಸರ್ವೇಶ್ವರನಾದ ಶಿವನನ್ನು ಸೇವಿಸಿ ಪರಮಪದವನ್ನು ಹೊಂದಿರುವರು.

ಮತ್ಸ್ಯೋದರ್ಯಾಸ್ತಟೇ ಪುಣ್ಯಂ ಸ್ಥಾನಂ ಗುಹ್ಯತಮಂ ಶುಭಮ್ ।
ಗೋಚರ್ಮಮಾತ್ರಂ ವಿಪ್ರೇಂದ್ರಾ ಓಙ್ಕಾರೇಶ್ವರಮುತ್ತಮಮ್॥ ೧೧ ॥

ಕೃತ್ತಿವಾಸೇಶ್ವರಂ ಲಿಂಗಂ ಮಧ್ಯಮೇಶ್ವರಮುತ್ತಮಮ್ ।
ವಿಶ್ವೇಶ್ವರಂ ತಥೋಙ್ಕಾರಂ ಕಪರ್ದೀಶ್ವರಮುತ್ತಮಮ್ ॥ ೧೨ ॥

ಏತಾನಿ ಗುಹ್ಯಲಿಂಗಾನಿ ವಾರಾಣಸ್ಯಾಂ ದ್ವಿಜೋತ್ತಮಾಃ ।
ನ ಕಶ್ಚಿದಿಹ ಜಾನಾತಿ ವಿನಾ ಶಂಭೋರನುಗ್ರಹಾತ್ ॥ ೧೩ ॥

ಏವಮುಕ್ತ್ವಾ ಯಯೌ ಕೃಷ್ಣಃ ಪಾರಾಶರ್ಯೋ ಮಹಾಮುನಿಃ ।
ಕೃತ್ತಿವಾಸೇಶ್ವರಂ ಲಿಂಗಂ ದ್ರಷ್ಟುಂ ದೇವಸ್ಯ ಶೂಲಿನಃ । ॥ ೧೪ ॥

---

೧೧. ಮತ್ಸ್ಯೋದರೀ ಎಂಬ ನದಿಯ ತೀರದಲ್ಲಿ ಮಂಗಳಕರವೂ ಪಾವನವೂ ಆದ ಒಂದು ಪಾವನಸ್ಥಾನವಿರುವುದು. ವಿಪ್ರೋತ್ತಮರೇ! ಗೋವಿನ ಚರ್ಮ ಮಾತ್ರ ಪರಿಮಾಣದ ಆ ಸ್ಥಾನವು ಉತ್ತಮವಾದ ಓಂಕಾರೇಶ್ವರವೆಂದು ಸಂಜ್ಞಾಂಕಿತ ವಾಗಿರುವುದು.

೧೨. ಮತ್ತು ಕೃತ್ತಿವಾಸೇಶ್ವರ, ಮಧ್ಯಮೇಶ್ವರ, ವಿಶ್ವೇಶ್ವರ, ಓಂಕಾರ ಹಾಗು ಕಪರ್ದೀಶ್ವರ ಎಂಬ ಸಂಜ್ಞಾಕಿತಗಳಾಗಿ ಉತ್ತಮವಾದ ವಿವಿಧ ಲಿಂಗಮೂರ್ತಿಗಳು ಇರುವುವು.

೧೩. ದ್ವಿಜಶ್ರೇಷ್ಠರೆ! ವಾರಾಣಸೀ ಕ್ಷೇತ್ರದಲ್ಲಿ ಈ ಲಿಂಗಗಳು ಅತಿ ಗೋಪ್ಯ ಗಳಾಗಿವೆ. ಶಂಭುವಿನ ಅನುಗ್ರಹಕ್ಕೆ ಪಾತ್ರನಾಗದೇ ಯಾವ ಮಾನವನೂ ಇವು ಗಳನ್ನು ತಿಳಿಯಲಾರನು.

೧೪. ಪರಾಶರ ಮುನಿಯ ಪುತ್ರನಾದ ಕೃಷ್ಣದ್ವೈಪಾಯನಮುನಿಯು ಹೀಗೆಂದು ಹೇಳಿ ತ್ರಿಶೂಲಧಾರಿಯಾದ ಪರಮೇಶ್ವರನ ಕೃತ್ತಿವಾಸೇಶ್ವರವೆಂಬ ಲಿಂಗವನ್ನು ಸಂದರ್ಶಿಸಲು ಹೊರಟುಹೋದನು.

ಸಮಭ್ಯರ್ಚ್ಯ ಸದಾ ಶಿಷ್ಯೈರ್ಮಾಹಾತ್ಮ್ಯಂ ಕೃತ್ತಿವಾಸಸಃ ।
ಕಥಯಾಮಾಸ ವಿಪ್ರೇಭ್ಯೋ ಭಗವಾನ್ ಬ್ರಹ್ಮವಿತ್ತಮಃ　　॥ ೧೫ ॥

ಅಸ್ಮಿನ್ ಸ್ಥಾನೇ ಪುರಾ ದೈತ್ಯೋ ಹಸ್ತೀ ಭೂತ್ವಾ ಭವಾಂತಿಕಮ್ ।
ಬ್ರಾಹ್ಮಣಾನ್ ಹಂತುಮಾಯಾತೋ ಯೇಽತ್ರ ನಿತ್ಯಮುಪಾಸತೇ ॥೧೬॥

ತೇಷಾಂ ಲಿಂಗಾನ್ಮಹಾದೇವಃ ಪ್ರಾದುರಾಸೀತ್ತ್ರಿಲೋಚನಃ ।
ರಕ್ಷಣಾರ್ಥಂ ದ್ವಿಜಶ್ರೇಷ್ಠಾ ಭಕ್ತಾನಾಂ ಭಕ್ತವತ್ಸಲಃ　　॥ ೧೭ ॥

ಹತ್ವಾ ಗಜಾಕೃತಿಂ ದೈತ್ಯಂ ಶೂಲೇನಾವಜ್ಞಯಾ ಹರಃ ।
ವಾಸಸ್ತಸ್ಯಾಕರೋತ್ಕೃತ್ತಿಂ ಕೃತ್ತಿವಾಸೇಶ್ವರಸ್ತತಃ　　॥ ೧೮ ॥

---

೧೫. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ಭಗವಂತನೂ ಆದ ವ್ಯಾಸಮುನಿಯು ಶಿಷ್ಯಜನರೊಂದಿಗೆ ಶಿವನನ್ನು ಸಂತತವಾಗಿ ಅರ್ಚಿಸುತ್ತ ಕೃತ್ತಿವಾಸೇಶ್ವರನ ಮಾಹಾತ್ಮ್ಯವನ್ನು ವಿಪ್ರರಿಗೆ ಹೇಳಿದನು.

೧೬. ಪೂರ್ವಕಾಲದಲ್ಲಿ ಈ ಸ್ಥಾನದಲ್ಲಿ ಒಬ್ಬ ದೈತ್ಯನು ಗಜರೂಪವನ್ನು ಧರಿಸಿ ನಿತ್ಯದಲ್ಲಿಯೂ ಶಿವನನ್ನು ಉಪಾಸನೆಮಾಡುತ್ತಿದ್ದ ಬ್ರಾಹ್ಮಣರನ್ನು ಬಾಧಿಸಲು ಈಶ್ವರನ ಸನ್ನಿಧಿಗೆ ಬಂದನು.

೧೭. ದ್ವಿಜೋತ್ತಮರೆ ! ಆಗ ಭಕ್ತರಾದ ಬ್ರಾಹ್ಮಣರ ರಕ್ಷಣೆಗೋಸ್ಕರ ಭಕ್ತವತ್ಸಲನೂ, ಮೂರು ನೇತ್ರಗಳಿಂದ ಶೋಭಿತನೂ ಆದ ಮಹಾದೇವನು ಲಿಂಗದಿಂದ ಪ್ರಾದುರ್ಭವಿಸಿದನು.

೧೮. ಶಂಕರನು ತ್ರಿಶೂಲದಿಂದ ಗಜಾಕಾರದಿಂದ ಬಂದ ದೈತ್ಯನನ್ನು ಲೀಲೆಯಿಂದ ಕೊಂದು ಆ ಆನೆಯ ಚರ್ಮವನ್ನು ವಸ್ತ್ರವನ್ನಾಗಿ ಧರಿಸಿದನು. ಆದುದರಿಂದ ಕೃತ್ತಿವಾಸೇಶ್ವರನೆಂಬ ಸಂಜ್ಞೆಯು ಉಂಟಾಯಿತು.

ಅತ್ರ ಸಿದ್ಧಿಂ ಪರಾಂ ಪ್ರಾಪ್ತಾ ಮುನಯೋ ಮುನಿಪುಂಗವಾಃ ।
ತೇನೈವ ಚ ಶರೀರೇಣ ಪ್ರಾಪ್ತಾಸ್ತತ್ಪರಮಂ ಪದಮ್ ॥ ೧೯ ॥

ವಿದ್ಯಾ ವಿದ್ಯೇಶ್ವರಾ ರುದ್ರಾಃ ಶಿವಾ ಯೇ ವಃ ಪ್ರಕೀರ್ತಿತಾಃ ।
ಕೃತ್ತಿವಾಸೇಶ್ವರಂ ಲಿಂಗಂ ನಿತ್ಯಮಾವೃತ್ಯ ಸಂಸ್ಥಿತಾಃ ॥ ೨೦ ॥

ಜ್ಞಾತ್ವಾ ಕಲಿಯುಗಂ ಘೋರಮಧರ್ಮಬಹುಲಂ ಜನಾಃ ।
ಕೃತ್ತಿವಾಸಂ ನ ಮುಂಚಂತಿ ಕೃತಾರ್ಥಾಸ್ತೇ ನ ಸಂಶಯಃ ॥ ೨೧ ॥

ಜನ್ಮಾಂತರಸಹಸ್ರೇಣ ಮೋಕ್ಷೋಽನ್ಯತ್ರಾಪ್ಯತೇ ನ ವಾ ।
ಏಕೇನ ಜನ್ಮಾ ಮೋಕ್ಷಃ ಕೃತ್ತಿವಾಸೇ ತು ಲಭ್ಯತೇ ॥ ೨೨ ॥

---

೧೯. ಈ ಕ್ಷೇತ್ರದಲ್ಲಿ ಪರಮಸಿದ್ಧಿಯನ್ನು ಹೊಂದಿದ ಮುನೀಶ್ವರರು ಶರೀರ ನಾಶವಿಲ್ಲದೇ ಅದೇ ಶರೀರದಿಂದ ಪ್ರಾಪ್ಯವಾದ ಉತ್ತಮ ಪದವನ್ನು ಹೊಂದಿರುವರು.

೨೦. ವಿದ್ಯಾಮಯರೂ ಶಿವಂಕರರೂ ಮತ್ತು ವಿದ್ಯೇಶ್ವರ ನಾಮಾಂಕಿತರೂ ಆಗಿ ಕೀರ್ತಿಸಲ್ಪಟ್ಟಿರುವ ರುದ್ರಮೂರ್ತಿಗಳು ಕೃತ್ತಿವಾಸೇಶ್ವರ ಲಿಂಗವನ್ನು ಸುತ್ತಿ ಕೊಂಡಿರುವರು.

೨೧. ಜನಗಳು ಘೋರವಾದ ಕಲಿಯುಗದಲ್ಲಿ ಅಧರ್ಮದ ಬಾಹುಲ್ಯವನ್ನು ತಿಳಿದರಾಗಿ ಕೃತ್ತಿವಾಸೇಶ್ವರನನ್ನು ಬಿಡದೆ ಸೇವಿಸಿ ನಿಸ್ಸಂಶಯವಾಗಿ ಕೃತಾರ್ಥರಾಗು ವರು.

೨೨. ಬೇರೊಂದು ಕ್ಷೇತ್ರದಲ್ಲಿ ಸಹಸ್ರಾರು ಜನ್ಮಗಳಲ್ಲಿಯೂ ಮೋಕ್ಷವು ಲಭಿಸುವುದೋ ಇಲ್ಲವೋ ಎಂಬ ಸಂಶಯವು ಉಂಟಾಗುವುದು. ಕೃತ್ತಿವಾಸೇಶ್ವರನ ಸನ್ನಿಧಿಯಲ್ಲಿ ಒಂದು ಜನ್ಮದಲ್ಲಿಯೇ ಮೋಕ್ಷವು ಲಭಿಸುವುದು.

ಆಲಯಃ ಸರ್ವಸಿದ್ಧಾನಾಮೇತತ್ ಸ್ಥಾನಂ ವದಂತಿ ಹಿ ।
ಗೋಪಿತಂ ದೇವದೇವೇನ ಮಹಾದೇವೇನ ಶಂಭುನಾ ॥ ೨೩ ॥

ಯುಗೇ ಯುಗೇ ಹ್ಯತ್ರ ದಾಂತಾ ಬ್ರಾಹ್ಮಣಾ ವೇದಪಾರಗಾಃ ।
ಉಪಾಸತೇ ಮಹಾದೇವಂ ಜಪಂತಿ ಶತರುದ್ರಿಯಮ್ ॥ ೨೪ ॥

ಸ್ತುವಂತಿ ಸತತಂ ದೇವಂ ಮಹಾದೇವಂ ತ್ರಿಯಂಬಕಮ್ ।
ಧ್ಯಾಯಂತೋ ಹೃದಯೇ ನಿತ್ಯಂ ಸ್ಥಾಣುಂ ಸರ್ವಾಂತರಂ ಶಿವಮ್ ॥

ಗಾಯಂತಿ ಸಿದ್ಧಾಃ ಕಿಲ ಗೀತಕಾನಿ
ಯೇ ವಾರಾಣಸ್ಯಾಂ ನಿವಸಂತಿ ವಿಪ್ರಾಃ ।
ತೇಷಾಮಥೈಕೇನ ಭವೇನ ಮುಕ್ತಿ-
ರ್ಯೇ ಕೃತ್ತಿವಾಸಂ ಶರಣಂ ಪ್ರಪನ್ನಾಃ ॥ ೨೬ ॥

---

೨೩. ಈ ಸ್ಥಾನವನ್ನು ಸಮಸ್ತ ಸಿದ್ಧರಿಗೆ ವಸತಿಸ್ಥಾನವೆಂದು ಪ್ರಾಜ್ಞರು ಹೇಳುವರು, ಈ ಸ್ಥಾನವು ದೇವಾಧಿದೇವನೂ ಮಹಾದೇವನೂ ಆದ ಶಂಕರನಿಂದ ಗೋಪ್ಯವಾಗಿ ಇರಿಸಲ್ಪಟ್ಟಿದೆ.

೨೪. ಈ ಸ್ಥಾನದಲ್ಲಿ ಪ್ರತಿಯೊಂದು ಯುಗದಲ್ಲಿಯೂ ವೇದಪಾರಂಗತರೂ, ಜಿತೇಂದ್ರಿಯರೂ ಆದ ಬ್ರಾಹ್ಮಣರು ಶತರುದ್ರಿಯಾಧ್ಯಾಯವನ್ನು ಜಪಿಸುತ್ತಾ ಮಹಾದೇವನನ್ನು ಸೇವಿಸುವರು.

೨೫. ಮತ್ತು ಮಹಾದೇವನೂ ತ್ರಿನೇತ್ರಧರನೂ ಶಾಶ್ವತನೂ ಸರ್ವಾಂತರ್ಯಾಮಿಯೂ ಆದ ಶಂಕರನನ್ನು ಪ್ರತಿನಿತ್ಯವೂ ಹೃದಯದಲ್ಲಿ ಧ್ಯಾನಿಸುತ್ತಾ ಸಂತತವಾಗಿ ಸ್ತೋತ್ರಮಾಡುವರು.

೨೬. ಮತ್ತು ಇಲ್ಲಿ ಸಿದ್ಧರು ಅನೇಕ ಗೀತೆಗಳನ್ನು ಗಾನಮಾಡುವರು, ಹಾಗೂ ವಾರಾಣಸೀ ಕ್ಷೇತ್ರದಲ್ಲಿ ವಾಸಮಾಡಿರುವ, ಕೃತ್ತಿ ವಾಸೇಶ್ವರನನ್ನು ಶರಣುಹೊಂದಿದ ವಿಪ್ರರಿಗೆ ಒಂದೇ ಜನ್ಮದಲ್ಲಿಯೇ ಮುಕ್ತಿಯು ಲಭ್ಯವಾಗುವುದು.

ಸಂಪ್ರಾಪ್ಯ ಲೋಕೇ ಜಗತಾಮಭೀಷ್ಟಂ
ಸುದುರ್ಲಭಂ ವಿಪ್ರಕುಲೇಷು ಜನ್ಮ ।
ಧ್ಯಾನಂ ಸಮಾದಾಯ ಜಪಂತಿ ರುದ್ರಂ
ಧ್ಯಾಯಂತಿ ಚಿತ್ತೇ ಯತಯೋ ಮಹೇಶಮ್ ॥ ೨೭ ॥

ಆರಾಧಯಂತಿ ಪ್ರಭುಮೀಶಿತಾರಂ
ವಾರಾಣಸೀಮಧ್ಯಗತಾ ಮುನೀಂದ್ರಾಃ ।
ಯಜಂತಿ ಯಜ್ಞೈರಭಿಸಂಧಿಹೀನಾಃ
ಸ್ತುವಂತಿ ರುದ್ರಂ ಪ್ರಣಮಂತಿ ಶಂಭುಮ್ ॥ ೨೮ ॥

ನಮೋ ಭವಾಯಾಮಲಭಾವಧಾಮ್ನೇ
ಸ್ಥಾಣುಂ ಪ್ರಪದ್ಯೇ ಗಿರಿಶಂ ಪುರಾಣಮ್ ।

---

೨೭. ಲೋಕದಲ್ಲಿ ಜಗತ್ತಿಗೆಲ್ಲ ಇಷ್ಟವಾಗಿಯೂ, ಬಹುದುರ್ಲಭವಾಗಿಯೂ ಇರುವ ಬ್ರಾಹ್ಮಣವಂಶ ಜನ್ಮವನ್ನು ಹೊಂದಿರುವ ಯತೀಶ್ವರರು ರುದ್ರನ ಧ್ಯಾನಪೂರ್ವಕವಾಗಿ ರುದ್ರಾಧ್ಯಾಯವನ್ನು ಜಪಿಸುತ್ತಾ ಚಿತ್ತದಲ್ಲಿ ಮಹೇಶ್ವರನನ್ನು ಧ್ಯಾನಿಸುತ್ತಿರುವರು.

೨೮. ವಾರಾಣಸೀ ಕ್ಷೇತ್ರಮಧ್ಯದಲ್ಲಿ ವಾಸಮಾಡುವ ಮುನೀಂದ್ರರು ಪ್ರಭುವೂ, ಸರ್ವೇಶ್ವರನೂ ಆದ ಮಹಾದೇವನನ್ನು ಆರಾಧಿಸುತ್ತಾರೆ. ಫಲಾಭಿಸಂಧಿವರ್ಜಿತರಾಗಿ ರುದ್ರನನ್ನು ಪೂಜಿಸುತ್ತಾರೆ. ರುದ್ರಮೂರ್ತಿಯನ್ನು ಸ್ತುತಿಸುತ್ತಾರೆ. ಮತ್ತು ಶಂಕರನನ್ನು ವಂದಿಸುತ್ತಾರೆ.

೨೯. ಅನೇಕ ಯೋಗಗಳಿಗೆ ಆಧಾರನಾದ ಮಹಾದೇವನಿಗೆ ನಮಸ್ಕಾರವು. ಶಾಶ್ವತನೂ ಪುರಾಣನೂ ಕೈಲಾಸಾದ್ರಿವಿಹಾರಿಯೂ ಆದ ಶಂಕರನನ್ನು ಶರಣು

ಸ್ಮರಾಮಿ ರುದ್ರಂ ಹೃದಯೇ ನಿವಿಷ್ಟಂ
ಜಾನೇ ಮಹಾದೇವಮನೇಕರೂಪಮ್ ॥ ೨೯ ॥

ಇತಿ ಶ್ರೀ ಕೂರ್ಮಪುರಾಣೇ ದ್ವಾತ್ರಿಂಶೋಽಧ್ಯಾಯಃ.

---

ಹೊಂದುವೆನು. ಹೃದಯದಲ್ಲಿ ಕುಳಿತಿರುವ ರುದ್ರನನ್ನು ಸ್ಮರಿಸುವೆನು. ಮತ್ತು ಶಂಕರನನ್ನು ವಿಶ್ವರೂಪನನ್ನಾಗಿ ತಿಳಿಯುವೆನು.

( ಕೂರ್ಮಪುರಾಣದಲ್ಲಿ ಮೂವತ್ತೆರಡನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ

## ತ್ರಯಸ್ತ್ರಿಂಶೋಽಧ್ಯಾಯಃ.

**ಸೂತ ಉವಾಚ :—**

**ಸಮಾಭಾಷ್ಯ ಮುನೀನ್ ಧೀಮಾನ್ ದೇವದೇವಸ್ಯ ಶೂಲಿನಃ ।**
**ಜಗಾಮ ಲಿಂಗಂ ತದ್ದ್ರಷ್ಟುಂ ಕಪರ್ದೀಶ್ವರಮವ್ಯಯಮ್ ॥ ೧ ॥**

**ಸ್ನಾತ್ವಾ ತತ್ರ ವಿಧಾನೇನ ತರ್ಪಯಿತ್ವಾ ಪಿತೄನ್ ದ್ವಿಜಾಃ ।**
**ಪಿಶಾಚಮೋಚನೇ ತೀರ್ಥೇ ಪೂಜಯಾಮಾಸ ಶೂಲಿನಮ್ ॥ ೨ ॥**

---

## ಮೂವತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಜ್ಞಾನಿಯಾದ ವ್ಯಾಸಮುನಿಯು ಮುನಿಗಳನ್ನು ಕುರಿತು ಹೀಗೆ ಹೇಳಿ ತ್ರಿಶೂಲಧಾರಿಯೂ ದೇವೋತ್ತಮನೂ ಆದ ಶಂಕರನ ಶಾಶ್ವತವಾದ ಕಪರ್ದೀಶ್ವರವೆಂಬ ಲಿಂಗವನ್ನು ನೋಡಲು ಪ್ರಯಾಣ ಮಾಡಿದನು.

೨. ದ್ವಿಜರೇ ! ಅಲ್ಲಿ ಯಥಾವಿಧಿಯಾಗಿ ಸ್ನಾನಮಾಡಿ ಪಿತೃಗಳಿಗೆ ತರ್ಪಣಾಂಜಲಿಯನ್ನು ಕೊಟ್ಟು ಪಿಶಾಚಗಳಿಗೆ ಮುಕ್ತಿಯನ್ನು ಕೊಡುವ ಆ ತೀರ್ಥದಲ್ಲಿ ಶೂಲಧರನಾದ ಈಶ್ವರನನ್ನು ಪೂಜಿಸಿದನು.

ತತ್ರಾಶ್ಚರ್ಯಮಪಶ್ಯಂಸ್ತೇ ಮುನಯೋ ಗುರುಣಾ ಸಹ ।
ಮೇನಿರೇ ಕ್ಷೇತ್ರಮಾಹಾತ್ಮ್ಯಂ ಪ್ರಣೇಮುರ್ಗಿರಿಶಂ ಹರಮ್ ॥ ೩ ॥

ಕಶ್ಚಿದಧ್ಯಾಜಗಾಮೇಮಂ ಶಾರ್ದೂಲೋ ಘೋರರೂಪಧೃಕ್ ।
ಮೃಗೀಮೇಕಾಂ ಭಕ್ಷಯಿತುಂ ಕಪರ್ದೀಶ್ವರಮುತ್ತಮಮ್ ॥ ೪ ॥

ತತ್ರ ಸಾ ಭೀತಹೃದಯಾ ಕೃತ್ವಾ ಕೃತ್ವಾ ಪ್ರದಕ್ಷಿಣಮ್ ।
ಧಾವಮಾನಾ ಸು ಸಂಭ್ರಾಂತಾ ವ್ಯಾಘ್ರಸ್ಯ ವಶಮಾಗತಾ ॥ ೫ ॥

ತಾಂ ವಿದಾರ್ಯ ನಖೈಸ್ತೀಕ್ಷ್ಣೈಃ ಶಾರ್ದೂಲಃ ಸ ಮಹಾಬಲಃ ।
ಜಗಾಮ ಚಾನ್ಯದ್ವಿಜನಂ ಸ ದೃಷ್ಟ್ವಾ ತಾನ್ ಮುನೀಶ್ವರಾನ್ ॥ ೬ ॥

---

೩. ಸಮಸ್ತ ಮಹರ್ಷಿಗಳು ಗುರುವಾದ ವ್ಯಾಸಮಹರ್ಷಿಯೊಂದಿಗೆ ಅಲ್ಲಿ ಬಂದು ಒಂದು ಆಶ್ಚರ್ಯವನ್ನು ವೀಕ್ಷಿಸಿದರು. ಮತ್ತು ಅದೊಂದು ಕ್ಷೇತ್ರದ ಮಾಹಾತ್ಮ್ಯೆಯೆಂದು ಅರಿತು ಕೈಲಾಸಾದ್ರಿಶಾಯಿಯಾದ ಹರನನ್ನು ನಮಸ್ಕರಿಸಿದರು.

೪. ಘೋರರೂಪವನ್ನು ಧರಿಸಿದ ಒಂದು ಶಾರ್ದೂಲವು ಒಂದು ಹೆಣ್ಣು ಜಿಂಕೆಯನ್ನು ಭಕ್ಷಿಸಲು ಹಿಂದಟ್ಟಿಕೊಂಡು ಉತ್ತಮವಾದ ಆ ಕಪರ್ದೀಶ್ವರ ಸ್ಥಾನವನ್ನು ಹೊಂದಿತು.

೫. ಅಲ್ಲಿ ಭಯಗೊಂಡ ಹೃದಯವುಳ್ಳ ಆ ಜಿಂಕೆಯು ಆ ಕಪರ್ದೀಶ್ವರನಿಗೆ ಪ್ರದಕ್ಷಿಣಾಕಾರವಾಗಿ ಸುತ್ತಿ ಸುತ್ತಿ ಬಹು ವೇಗದಿಂದ ಓಡುತ್ತಾ ಕಡೆಗೆ ಆ ವ್ಯಾಘ್ರದ ವಶವಾಯಿತು.

೬. ಆಗ ಮಹಾಬಲವುಳ್ಳ ಆ ವ್ಯಾಘ್ರವು ಕಠೋರವಾದ ತನ್ನ ನಖಗಳಿಂದ ಆ ಜಿಂಕೆಯನ್ನು ಸೀಳಿ ಅಲ್ಲಿದ್ದ ಅನೇಕ ಮುನೀಶ್ವರನನ್ನು ಕಂಡು ಅಲ್ಲಿಂದ ಮತ್ತೊಂದು ನಿರ್ಜನ ಪ್ರದೇಶವನ್ನು ಹೊಂದಿತು.

ಮೃತಮಾತ್ರಾ ಚ ಸಾ ಬಾಲಾ ಕಪರ್ದೀಶಾಗ್ರತೋ ಮೃಗೀ ।
ಅದೃಶ್ಯತ ಮಹಾಜ್ವಾಲಾ ವ್ಯೋಮ್ನಿ ಸೂರ್ಯಸಮಪ್ರಭಾ ॥ ೭ ॥

ತ್ರಿನೇತ್ರಾ ನೀಲಕಂಠಾ ಚ ಶಶಾಂಕಾಂಕಿತಶೇಖರಾ ।
ವೃಷಾಧಿರೂಢಾ ಪುರುಷೈಸ್ತಾದೃಶೈರೇವ ಸಂಯುತಾ ॥ ೮ ॥

ಪುಷ್ಪವೃಷ್ಟಿಂ ವಿಮುಂಚಂತಿ ಖೇಚರಾಸ್ತಸ್ಯ ಮೂರ್ಧನಿ ।
ಗಣೇಶ್ವರಃ ಸ್ವಯಂ ಭೂತ್ವಾ ನ ದೃಷ್ಟಸ್ತತ್ಕ್ಷಣಾತ್ತತಃ ॥ ೯ ॥

ದೃಷ್ಟ್ವೈತದಾಶ್ಚರ್ಯವರಂ ಜೈಮಿನಿಪ್ರಮುಖಾಸ್ತದಾ ।
ಕಪರ್ದೀಶ್ವರಮಾಹಾತ್ಮ್ಯಂ ಪಪ್ರಚ್ಛುರ್ಗುರುಮಚ್ಯುತಮ್ ॥ ೧೦ ॥

---

೭. ಆ ಸಣ್ಣ ಹೆಣ್ಣು ಜಿಂಕೆಯು ಮರಣವನ್ನೈದಿದಕೂಡಲೇ ಕಪರ್ದೀಶ್ವರನ ಮುಂಭಾಗದಲ್ಲಿ ಮಹಾಜ್ವಾಲಾಕಾರವೂ ಸೂರ್ಯಬಿಂಬಕ್ಕೆ ಸಮಾನವಾದ ಪ್ರಭೆಯುಳ್ಳದ್ದೂ ಆಗಿ ಆಕಾಶದಲ್ಲಿ ಕಾಣಿಸಿಕೊಂಡಿತು.

೮. ಮತ್ತು ಮೂರು ನೇತ್ರಗಳುಳ್ಳದ್ದೂ, ಕಪ್ಪಾದ ಕಂಠವುಳ್ಳದ್ದೂ, ಚಂದ್ರನ ಕಲೆಯಿಂದ ಅಂಕಿತವಾದ ಶಿರೋಭಾಗವುಳ್ಳದ್ದೂ, ವೃಷಭವಾಹನಾರೂಢವೂ ಮತ್ತು ಅಂತಹ ಪುರುಷರಿಂದಲೇ ಸೇವಿಸಲ್ಪಟ್ಟದ್ದೂ ಆಗಿ ಕಾಣಿಸಿಕೊಂಡಿತು.

೯. ಆಗ ಆಕಾಶಸಂಚಾರಿಗಳು ಅದರ ಮೇಲುಗಡೆಯಲ್ಲಿ ಪುಷ್ಪವೃಷ್ಟಿಯನ್ನು ಕರೆದರು. ಆ ಜಿಂಕೆಯು ಕ್ರಮವಾಗಿ ಗಣೇಶ್ವರನೇ ಆಗಿ ಒಂದು ಕ್ಷಣಮಾತ್ರದಲ್ಲಿ ಅಲ್ಲಿ ಕಾಣಿಸದಂತೆ ಅದೃಶ್ಯವಾಯಿತು.

೧೦. ಜೈಮಿನಿಯೇ ಮುಂತಾದ ಮಹರ್ಷಿಗಳು ಈ ಉತ್ತಮವಾದ ಆಶ್ಚರ್ಯವನ್ನು ಕಂಡು ಅಚ್ಯುತರೂಪಿಯಾದ ಗುರುವನ್ನು ಕುರಿತು ಕಪರ್ದೀಶ್ವರನ ಮಾಹಾತ್ಮ್ಯೆಯನ್ನು ಪ್ರಶ್ನಿಸಿದರು.

ತೇಷಾಂ ಪ್ರೋವಾಚ ಭಗವಾನ್ ದೇವಾಗ್ರೇ ಚೋಪವಿಶ್ಯ ಸಃ ।
ಕಪರ್ದೀಶಸ್ಯ ಮಾಹಾತ್ಮ್ಯಂ ಪ್ರಣಮ್ಯ ವೃಷಭಧ್ವಜಮ್ ॥ ೧೧ ॥

ಇದಂ ದೇವಸ್ಯ ತಲ್ಲಿಂಗಂ, ಕಪರ್ದೀಶ್ವರಮುತ್ತಮಮ್ ।
ಪೂಜಿತವ್ಯಂ ಪ್ರಯತ್ನೇನ ಸ್ತೋತವ್ಯಂ ವೈದಿಕೈಃ ಸ್ತವೈಃ ॥ ೧೨ ॥

ಧ್ಯಾಯತಾಮತ್ರ ನಿಯತಂ ಯೋಗಿನಾಂ ಶಾಂತಚೇತಸಾಮ್ ।
ಜಾಯತೇ ಯೋಗಸಿದ್ಧಿಶ್ಚ ಷಣ್ಮಾಸೇನ ನ ಸಂಶಯಃ ॥ ೧೩ ॥

ಬ್ರಹ್ಮಹತ್ಯಾದಿಪಾಪಾನಿ ವಿನಶ್ಯಂತ್ಯಸ್ಯ ಪೂಜನಾತ್ ।
ಪಿಶಾಚಮೋಚನೇ ಕುಂಡೇ ಸ್ನಾತಸ್ಯಾತ್ರ ಸಮೀಪತಃ ॥ ೧೪ ॥

---

೧೧. ಆಗ ಪೂಜ್ಯನಾದ ವ್ಯಾಸಮುನಿಯು ಸ್ವಾಮಿಯ ಮುಂಭಾಗದಲ್ಲಿ ಕುಳಿತುಕೊಂಡು ವೃಷಭಧ್ವಜನಾದ ಮಹಾದೇವನನ್ನು ನಮಸ್ಕರಿಸಿ ಅವರಿಗೆ ಕಪರ್ದೀಶ್ವರನ ಮಾಹಾತ್ಮ್ಯೆಯನ್ನು ಪ್ರವಚನಮಾಡಿದನು.

೧೨. ಸ್ವಾಮಿಯೇ ! ಕಪರ್ದೀಶ್ವರವೆಂಬ ಉತ್ತಮವಾದ ಈ ಲಿಂಗವು ಭಕ್ತರಿಂದ ಪ್ರಯತ್ನಪೂರ್ವಕವಾಗಿ ಪೂಜಿಸಲ್ಪಡಬೇಕು. ಮತ್ತು ವೈದಿಕವಾದ ಸ್ತುತಿಗಳಿಂದ ಸ್ತುತಿಸಲ್ಪಡಬೇಕು.

೧೩. ಈ ಸ್ಥಳದಲ್ಲಿ ನಿಯತವಾಗಿ ಧ್ಯಾನಮಾಡುತ್ತಿದ್ದ ಮತ್ತು ಶಾಂತವಾದ ಚಿತ್ತವುಳ್ಳ ಯೋಗಿಗಳಿಗೆ ಆರು ಮಾಸಗಳಲ್ಲಿಯೇ ಯೋಗಸಿದ್ಧಿಯು ಲಭಿಸುವುದು. ಇದರಲ್ಲಿ ಸಂಶಯವಿಲ್ಲ.

೧೪. ಮತ್ತು ಪಿಶಾಚಗಳಿಗೆ ಮುಕ್ತಿಯನ್ನು ಕೊಡುವ, ಸಮೀಪದಲ್ಲಿರುವ ಈ ತೀರ್ಥಕುಂಡದಲ್ಲಿ ಸ್ನಾನಮಾಡಿ ಕಪರ್ದೀಶ್ವರನನ್ನು ಪೂಜಿಸುವುದರಿಂದ ಬ್ರಹ್ಮಹತ್ಯಾ ಮುಂತಾದ ಮಹಾಪಾತಕಗಳು ನಶಿಸುವುವು.

ಅಸ್ಮಿನ್ ಕ್ಷೇತ್ರೇ ಪುರಾ ವಿಪ್ರಾಸ್ತಪಸ್ವೀ ಶಂಸಿತವ್ರತಃ ।
ಶಂಕುಕರ್ಣ ಇತಿ ಖ್ಯಾತಃ ಪೂಜಯಾಮಾಸ ಶೂಲಿನಮ್ ॥ ೧೫ ॥

ಜಜಾಪ ರುದ್ರಮನಿಶಂ ಪ್ರಣವಂ ರುದ್ರರೂಪಿಣಮ್ ।
ಪುಷ್ಪಧೂಪಾದಿಭಿಃ ಸ್ತೋತ್ರೈರ್ನಮಸ್ಕಾರೈಃ ಪ್ರದಕ್ಷಿಣೈಃ ॥ ೧೬ ॥

ಉವಾಸ ತತ್ರ ಯೋಗಾತ್ಮಾ ಕೃತ್ವಾ ದೀಕ್ಷಾಂ ತು ನೈಷ್ಠಿಕೀಮ್ ।
ಕದಾಚಿದಾಗತಂ ಪ್ರೇತಂ ಪಶ್ಯತಿ ಸ್ಮ ಕ್ಷುಧಾನ್ವಿತಮ್ ॥ ೧೭ ॥

ಅಸ್ಥಿಚರ್ಮಪಿನದ್ಧಾಂಗಂ ನಿಶ್ವಸಂತಂ ಮುಹುರ್ಮುಹುಃ ।
ತಂ ದೃಷ್ಟ್ವಾ ಸ ಮುನಿಶ್ರೇಷ್ಠಃ ಕೃಪಯಾ ಪರಯಾ ಯುತಃ ॥ ೧೮ ॥

---

೧೫. ವಿಪ್ರೋತ್ತಮರೇ ! ಪೂರ್ವಕಾಲದಲ್ಲಿ ಈ ಕ್ಷೇತ್ರದಲ್ಲಿ ಪ್ರಶಸ್ತ ನಿಯಮವಂತನಾದ, ಶಂಕುಕರ್ಣ ಎಂಬ ನಾಮದಿಂದ ಪ್ರಖ್ಯಾತನಾದ ಒಬ್ಬ ತಪಸ್ವಿಯು ಶೂಲಧರನಾದ ಶಂಕರನನ್ನು ಪೂಜಿಸಿದನು.

೧೬. ಮತ್ತು ಹಗಲು ರಾತ್ರಿ ಸರ್ವಕಾಲಗಳಲ್ಲಿಯೂ ಪುಷ್ಪ-ಧೂಪ-ಸ್ತೋತ್ರ-ಪ್ರದಕ್ಷಿಣಾ-ನಮಸ್ಕಾರ ಮುಂತಾದ ಸರ್ವೋಪಚಾರಗಳಿಂದ ರುದ್ರಮೂರ್ತಿಯನ್ನು ಪೂಜಿಸುತ್ತಾ ರುದ್ರರೂಪಿಯಾದ ಓಂಕಾರವನ್ನು ಜಪಿಸಿದನು.

೧೭. ಅಲ್ಲಿ ಆ ಶಂಕುಕರ್ಣನು ನೈಷ್ಠಿಕದೀಕ್ಷೆಯನ್ನು ಕೈಗೊಂಡು ಯೋಗಾಭ್ಯಾಸ ಪರನಾಗಿ ವಾಸಮಾಡಿದನು. ಹೀಗಿರಲು ಒಂದುವೇಳೆಯಲ್ಲಿ ಹಸಿವಿನಿಂದಕೂಡಿ ಒಂದು ಪ್ರೇತವು ಅಲ್ಲಿಗೆ ಬಂದಿರುವುದನ್ನು ಕಂಡನು.

೧೮. ಆ ಪ್ರೇತವು ಅಸ್ಥಿ-ಚರ್ಮಗಳಿಂದ ಮುಚ್ಚಿದ ದೇಹವುಳ್ಳದ್ದೂ ಮತ್ತೆ ಮತ್ತೆ ಶ್ವಾಸಬಿಡುತ್ತಿರುವುದೂ ಆಗಿತ್ತು. ಮಹರ್ಷಿಶ್ರೇಷ್ಠನಾದ ಶಂಕುಕರ್ಣನು ಆ ಪ್ರೇತವನ್ನು ನೋಡಿ ಹೆಚ್ಚಾದ ಕೃಪೆಯನ್ನು ಹೊಂದಿದನು.

ಪ್ರೋವಾಚ ಕೋ ಭವಾನ್ ಕಸ್ಮಾದ್ದೇಶಾದ್ದೇಶಮಿಮಂ ಗತಃ ।
ತಸ್ಮೈ ಪಿಶಾಚಃ ಕ್ಷುಧಯಾ ಪೀಡ್ಯಮಾನೋಽಬ್ರವೀದ್ವಚಃ ॥ ೧೯ ॥

ಪೂರ್ವಜನ್ಮನ್ಯಹಂ ವಿಪ್ರೋ ಧನಧಾನ್ಯಸಮನ್ವಿತಃ ।
ಪುತ್ರಪೌತ್ರಾದಿಭಿರ್ಯುಕ್ತಃ ಕುಟುಂಬಭರಣೋತ್ಸುಕಃ ॥ ೨೦ ॥

ನ ಪೂಜಿತಾ ಮಯಾ ದೇವಾ ಗಾವೋಽಪ್ಯತಿಥಯಸ್ತಥಾ ।
ನ ಕದಾಚಿತ್ಕೃತಂ ಪುಣ್ಯಮಲ್ಪಂ ವಾ ಸ್ವಲ್ಪಮೇವ ವಾ ॥ ೨೧ ॥

ಏಕದಾ ಭಗವಾನ್ ರುದ್ರೋ ಗೋವೃಷೇಶ್ವರವಾಹನಃ ।
ವಿಶ್ವೇಶ್ವರೋ ವಾರಾಣಸ್ಯಾಂ ದೃಷ್ಟಃ ಸ್ಪೃಷ್ಟೋ ನಮಸ್ಕೃತಃ ॥ ೨೨ ॥

---

೧೯. ಮತ್ತು ಪಿಶಾಚವನ್ನು ಕುರಿತು ಹೀಗೆಂದು ಪ್ರಶ್ನಿಸಿದನು. ನೀನು ಯಾರು? ಯಾವ ಸ್ಥಳದಿಂದ ಈ ಪ್ರದೇಶಕ್ಕೆ ಬಂದಿರುವೆ? ಆಗ ಹಸಿವಿನಿಂದ ಪೀಡಿಸಲ್ಪಟ್ಟ ಪಿಶಾಚವು ಮುನಿಗೆ ಈ ವಚನವನ್ನು ಹೇಳಿತು.

೨೦. ಪೂಜ್ಯನೇ! ಪೂರ್ವಜನ್ಮದಲ್ಲಿ ನಾನು ಧನ-ಧಾನ್ಯಗಳ ಸಮೃದ್ಧಿಯುಳ್ಳವನೂ, ಪುತ್ರಪೌತ್ರಾದಿಗಳಿಂದ ಕೂಡಿದವನೂ ಮತ್ತು ಕುಟುಂಬಪೋಷಣದಲ್ಲಿ ಆಸಕ್ತನೂ ಆದ ಒಬ್ಬ ವಿಪ್ರನಾಗಿದ್ದೆನು.

೨೧. ಹೀಗಿರಲು ನನ್ನಿಂದ ದೇವತೆಗಳೂ, ಗೋವುಗಳೂ, ಅಥವಾ ಅತಿಥಿಗಳೂ ಯಾರೂ ಪೂಜಿಸಲ್ಪಡಲಿಲ್ಲ, ಅಲ್ಪ ಅಥವಾ ಸ್ವಲ್ಪವಾದರೂ ಪುಣ್ಯಕರ್ಮವು ನನ್ನಿಂದ ಯಾವಾಗಲೂ ಮಾಡಲ್ಪಡಲಿಲ್ಲ.

೨೨. ಒಂದು ಸಮಯದಲ್ಲಿ ನಂದಿಕೇಶ್ವರವಾಹನವನ್ನು ಏರಿದ ವಿಶ್ವೇಶ್ವರ ರೂಪನಾದ ಮತ್ತು ಪೂಜ್ಯನಾದ ರುದ್ರಮೂರ್ತಿಯು ವಾರಾಣಸೀಕ್ಷೇತ್ರದಲ್ಲಿ ನನ್ನಿಂದ ದರ್ಶನ-ಸ್ಪರ್ಶನಾದಿಪೂರ್ವಕವಾಗಿ ನಮಸ್ಕರಿಸಲ್ಪಟ್ಟನು.

ತದಾಚಿರೇಣ ಕಾಲೇನ ಪಂಚತ್ವಮುಪಮಾಗತಃ ।
ನ ದೃಷ್ಟಂ ತನ್ಮಹಾಘೋರಂ ಯಮಸ್ಯ ವದನಂ ಮುನೇ ॥ ೨೩ ॥

ಈದೃಶೀಂ ಯೋನಿಮಾಪನ್ನಃ ಪೈಶಾಚೀಂ ಕ್ಷುಧಯಾರ್ದಿತಃ ।
ಪಿಪಾಸಯಾ ಪರಿಕ್ರಾಂತೋ ನ ಜಾನಾಮಿ ಹಿತಾಹಿತಮ್ ॥ ೨೪ ॥

ಯದಿ ಕಂಚಿತ್ಸಮುದ್ಧರ್ತುಮುಪಾಯಂ ಪಶ್ಯಸಿ ಪ್ರಭೋ ।
ಕುರುಷ್ವ ತಂ ನಮಸ್ತುಭ್ಯಂ ತ್ವಾಮಹಂ ಶರಣಂ ಗತಃ ॥ ೨೫ ॥

ಇತ್ಯುಕ್ತಃ ಶಂಕುಕರ್ಣೋಽಥ ಪಿಶಾಚಮಿದಮಬ್ರವೀತ್ ।
ತ್ವಾದೃಶೋ ನ ಹಿ ಲೋಕೇಽಸ್ಮಿನ್ ವಿದ್ಯತೇ ಪುಣ್ಯಕೃತ್ತಮಃ ॥ ೨೬ ॥

---

೨೩. ಆಗ ಬಹಳ ಬೇಗ ಮರಣವನ್ನು ಹೊಂದಿದೆನು. ಮಹರ್ಷಿಯೇ! ಆದರೆ ಆ ಮಹಾ ಘೋರವಾದ ಯಮಧರ್ಮರಾಜನ ಮುಖವು ನನ್ನಿಂದ ನೋಡಲ್ಪಡಲಿಲ್ಲ.

೨೪. ಮತ್ತು ಈ ವಿಧವಾದ ಪಿಶಾಚ ಜನ್ಮವನ್ನು ಹೊಂದಿದವನಾಗಿ ಹಸಿವಿನಿಂದ ಪೀಡಿತ ನಾಗಿದ್ದೇನೆ. ಅಧಿಕವಾದ ನೀರಡಿಕೆಯಿಂದ ಶ್ರಮಹೊಂದಿದವನಾಗಿರುವೆನು. ಈಗ ನನ್ನ ಹಿತ-ಅಹಿತಗಳನ್ನು ನಾನು ತಿಳಿಯಲಾರೆ.

೨೫. ಪ್ರಭುವೇ! ಹೀಗಿರುವ ನನ್ನನ್ನು ಉದ್ಧಾರಮಾಡಲು ಯಾವುದಾದರೊಂದು ಉಪಾಯವನ್ನು ನೀನು ತಿಳಿಯುವೆಯಾದರೆ ಅದನ್ನು ಮಾಡು. ನಾನು ನಿನ್ನನ್ನು ವಂದಿಸಿ ನಿನ್ನನ್ನು ಶರಣು ಹೊಂದಿರುವೆನು.

೨೬. ಹೀಗೆಂದು ಹೇಳಲ್ಪಟ್ಟ ಶಂಕುಕರ್ಣನು ಪಿಶಾಚವನ್ನು ಕುರಿತು ಈ ವಚನವನ್ನು ಹೇಳಿದನು. ಈ ಲೋಕದಲ್ಲಿ ನಿನ್ನಂತೆ ಅತಿಶಯವಾದ ಪುಣ್ಯವನ್ನು ಮಾಡಿದವನು ಮತ್ತೊಬ್ಬನು ಯಾರೂ ಇಲ್ಲ.

ಯತ್ತ್ವಯಾ ಭಗವಾನ್ ಪೂರ್ವಂ ದೃಷ್ಟೋ ವಿಶ್ವೇಶ್ವರಃ ಶಿವಃ ।
ಸಂಸ್ಪೃಷ್ಟೋ ವಂದಿತೋ ಭೂಯಃ ಕೋಽನ್ಯಸ್ತ್ವತ್ಸದೃಶೋ ಭುವಿ ॥

ತೇನ ಕರ್ಮವಿಪಾಕೇನ ದೇಶಮೇತಂ ಸಮಾಗತಃ ।
ಸ್ನಾನಂ ಕುರುಷ್ವ ಶೀಘ್ರಂ ತ್ವಮಸ್ಮಿನ್ ಕುಂಡೇ ಸಮಾಹಿತಃ ॥ ೨೮ ॥

ಯೇನೇಮಾಂ ಕುತ್ಸಿತಾಂ ಯೋನಿಂ ಕ್ಷಿಪ್ರಮೇವ ಪ್ರಹಾಸ್ಯಸಿ ॥ ೨೯ ॥

ಸ ಏವಮುಕ್ತೋ ಮುನಿನಾ ಪಿಶಾಚೋ
ದಯಾವತಾ ದೇವವರಂ ತ್ರಿನೇತ್ರಮ್ ।
ಸ್ಮೃತ್ವಾ ಕಪರ್ದೀಶ್ವರಮೀಶಿತಾರಂ
ಚಕ್ರೇ ಸಮಾಧಾಯ ಮನೋಽವಗಾಹಮ್ ॥ ೩೦ ॥

---

೨೭. ಪೂರ್ವದಲ್ಲಿ ನಿನ್ನಿಂದ ಪೂಜ್ಯನೂ, ಜಗದೀಶ್ವರನೂ ಆದ ಶಿವನು ದರ್ಶನ ಮತ್ತು ಸ್ಪರ್ಶನಗಳ ಮೂಲಕವಾಗಿ ಮತ್ತೆ ಮತ್ತೆ ನಮಸ್ಕರಿಸಲ್ಪಟ್ಟಿರುವನು. ಈ ಭೂಮಂಡಲದಲ್ಲಿ ನಿನಗೆ ಸಮನಾದ ಪುಣ್ಯವಂತರು ಮತ್ತಾರು ಇರುವನು ?

೨೮. ಆ ಪುಣ್ಯಕರ್ಮದ ಪರಿಣಾಮದಿಂದ ನೀನು ಈ ಪ್ರದೇಶಕ್ಕೆ ಬಂದಿರುವೆ. ನೀನು ಸಮಾಧಾನ ಚಿತ್ತವುಳ್ಳವನಾಗಿ ಈ ಕುಂಡದಲ್ಲಿ ಶೀಘ್ರವಾಗಿ ಸ್ನಾನವನ್ನು ಮಾಡು.

೨೯. ಹಾಗೆ ಈ ತೀರ್ಥಕುಂಡದಲ್ಲಿ ಸ್ನಾನಮಾಡುವ ಪುಣ್ಯಪ್ರಭಾವದಿಂದ ಕ್ಷಿಪ್ರದಲ್ಲಿಯೇ ನಿಂದ್ಯವಾದ ಈ ಪಿಶಾಚಯೋನಿಯಿಂದ ಮುಕ್ತಿಯನ್ನು ಹೊಂದುತ್ತೀಯೆ.

೩೦. ಹೀಗೆಂದು ದಯಾಳುವಾದ ಮಹರ್ಷಿಯಿಂದ ಬೋಧಿಸಲ್ಪಟ್ಟ ಆ ಪಿಶಾಚವು ದೇವೋತ್ತಮನೂ, ನೇತ್ರತ್ರಯಶಾಲಿಯೂ, ಸರ್ವೇಶ್ವರನೂ ಆದ ಕಪರ್ದೀಶ್ವರನನ್ನು ಸ್ಮರಿಸಿ ಅವನಲ್ಲಿ ಮನಸ್ಸನ್ನು ಏಕಾಗ್ರತೆಯಿಂದ ಇರಿಸಿ ಕುಂಡದಲ್ಲಿ ಸ್ನಾನಮಾಡಿತು.

ತದಾವಗಾಹಾನ್ಮುನಿಸನ್ನಿಧಾನೇ
ಮಮಾರ ದಿವ್ಯಾಭರಣೋಪಪನ್ನಃ ।
ಅದೃಶ್ಯತಾರ್ಕಪ್ರತಿಮೇ ವಿಮಾನೇ
ಶಶಾಂಕಚಿಹ್ನಾಂಕಿತಚಾರುಮೌಲಿಃ ॥ ೩೧ ॥

ವಿಭಾತಿ ರುದ್ರೈರುದಿತೋ ದಿವಿಸ್ಥೈಃ
ಸಮಾವೃತೋ ಯೋಗಿಭಿರಪ್ರಮೇಯೈಃ ।
ಸವಾಲಖಿಲ್ಯಾದಿಭಿರೇಷ ದೇವೋ
ಯಥೋದಯೇ ಭಾನುರಶೇಷದೇವಃ ॥ ೩೨ ॥

ಸ್ತುವಂತಿ ಸಿದ್ಧಾ ದಿವಿ ದೇವಸಂಘಾ
ನೃತ್ಯಂತಿ ದಿವ್ಯಾಪ್ಸರಸೋಽಭಿರಾಮಾಃ ।
ಮುಂಚಂತಿ ವೃಷ್ಟಿಂ ಕುಸುಮಾಲಿಮಿಶ್ರಾಂ
ಗಂಧರ್ವವಿದ್ಯಾಧರಕಿನ್ನರಾದ್ಯಾಃ ॥ ೩೩ ॥

---

೩೧. ಆಗ ಮಹರ್ಷಿಯ ಸನ್ನಿಧಾನದಲ್ಲಿ ಅವಗಾಹನ ಸ್ನಾನಮಾಡಿದ ಪಿಶಾಚವು ಕೂಡಲೇ ಮರಣವನ್ನು ಹೊಂದಿ ದಿವ್ಯವಾದ ಆಭರಣಗಳಿಂದ ಭೂಷಿಸಲ್ಪಟ್ಟವನೂ ಚಂದ್ರಕಲೆಯಿಂದ ಅಂಕಿತವಾಗಿ ಸುಂದರವಾದ ಶಿರವುಳ್ಳವನೂ ಆಗಿ ಸೂರ್ಯನಂತೊಪ್ಪುವ ವಿಮಾನದಲ್ಲಿ ಕಾಣಿಸಿಕೊಂಡನು.

೩೨. ಆ ಸುಕೃತಿಯು ಆಕಾಶದಲ್ಲಿರುವ ರುದ್ರಮೂರ್ತಿಗಳಿಂದ ಕೀರ್ತಿಸಲ್ಪಟ್ಟವನೂ, ಅಪರಿಮಿತರಾದ ಯೋಗಿಗಳಿಂದ ಸುತ್ತಲ್ಪಟ್ಟವನೂ ಆಗಿ ವಾಲಖಿಲ್ಯ ಮುಂತಾದ ಮಹರ್ಷಿಗಳಿಂದ ಕೂಡಿದ ಅಶೇಷದೇವತಾ ಮೂರ್ತಿಯಾದ, ಉದಯಿಸುತ್ತಿರುವ ಸೂರ್ಯನಂತೆ ಪ್ರಕಾಶಿಸುತ್ತಿದ್ದನು.

೩೩. ಆ ಮೂರ್ತಿಯನ್ನು ಸಿಧ್ಧರೂ, ದೇವತೆಗಳೂ ಆಕಾಶದಲ್ಲಿ ಸ್ತುತಿಸುತ್ತಾರೆ. ದಿವ್ಯರೂ, ಸುಂದರಿಯರೂ ಆದ ಅಪ್ಸರಾಂಗನೆಯರು ನರ್ತನ ಮಾಡುತ್ತಾರೆ. ಮತ್ತು ಗಂಧರ್ವ-ವಿದ್ಯಾಧರ-ಪನ್ನಗ ಮುಂತಾದವರು ಪುಷ್ಪ ಮತ್ತು ದುಂಬಿಗಳಿಂದ ಮಿಶ್ರಿತವಾದ ವೃಷ್ಟಿಯನ್ನು ಸುರಿಸುತ್ತಾರೆ.

ಸಂಸ್ತೂಯಮಾನೋಽಥ ಮುನೀಂದ್ರಸಂಘೈ
ರವಾಪ್ಯ ಬೋಧಂ ಭಗವತ್ಪ್ರಸಾದಾತ್ ।
ಸಮಾವಿಶನ್ಮಂಡಲಮೇವಮಗ್ರ್ಯಂ
ತ್ರಯೀಮಯಂ ಯತ್ರ ವಿಭಾತಿ ರುದ್ರಃ ॥ ೩೪ ॥

ದೃಷ್ಟ್ವಾ ವಿಮುಕ್ತಂ ಸ ಪಿಶಾಚಭೂತಂ
ಮುನಿಃ ಪ್ರಹೃಷ್ಟೋ ಮನಸಾ ಮಹೇಶಮ್ ।
ವಿಚಿಂತ್ಯ ರುದ್ರಂ ಕವಿಮೇವಮಗ್ರ್ಯಂ
ಪ್ರಣಮ್ಯ ತುಷ್ಟಾವ ಕಪರ್ದಿನಂ ತಮ್ ॥ ೩೫ ॥

ಶಂಕುಕರ್ಣ ಉವಾಚ :—

ನಮಾಮಿ ನಿತ್ಯಂ ಪರತಃ ಪರಸ್ತಾದ್
ಗೋಪ್ತಾರಮೇಕಂ ಪುರುಷಂ ಪುರಾಣಮ್ ।
ವ್ರಜಾಮಿ ಯೋಗೇಶ್ವರಮೀಶಿತಾರ-
ಮಾದಿತ್ಯಮಗ್ನಿಂ ಕಪಿಲಾಧಿರೂಢಮ್ ॥ ೩೬ ॥

---

೩೪. ಮತ್ತು ಮಹರ್ಷಿಗಳ ಸಂಘದಿಂದ ಸ್ತುತಿಸಲ್ಪಡುವವನಾಗಿ ಭಗವಂತನ ಪ್ರಸಾದದಿಂದ ತತ್ತ್ವಬೋಧವನ್ನು ಹೊಂದಿ ರುದ್ರದೇವನು ಪ್ರಕಾಶಿಸುತ್ತಿರುವ ವೇದ ತ್ರಯ ಮಯವಾದ ಮತ್ತು ಶ್ರೇಷ್ಠವಾದ ಸೂರ್ಯಮಂಡಲವನ್ನು ಪ್ರವೇಶಿಸಿದನು.

೩೫. ಆ ಮುನಿಯು ಪಿಶಾಚ ಜನ್ಮದಿಂದ ಮುಕ್ತಿ ಹೊಂದಿದ ಆ ಸುಕೃತಿ ಯನ್ನು ನೋಡಿ ಸಂತೋಷಗೊಂಡವನಾಗಿ ಮನಸ್ಸಿನಲ್ಲಿ ಮಹೇಶ್ವರನನ್ನು ಧ್ಯಾನಿಸಿ ರುದ್ರಮೂರ್ತಿಯೂ, ಸರ್ವಜ್ಞನೂ, ಅಗ್ರಗಣ್ಯನೂ ಆದ ಆ ಕಪರ್ದೀಶ್ವರನನ್ನು ವಂದಿಸಿ ಸ್ತೋತ್ರಮಾಡಿದನು.

೩೬. ಶಂಕುಕರ್ಣನು ಹೀಗೆ ಸ್ತುತಿಸಿದನು :— ಶಾಶ್ವತನೂ, ಪರವಸ್ತುಗಿಂತ ಪರತರನೂ, ರಕ್ಷಕನೂ, ಅದ್ವಿತೀಯನೂ, ಪುರಾಣಪುರುಷನೂ ಆದ ಶಿವನನ್ನು ವಂದಿಸುತ್ತೇನೆ. ಮತ್ತು ಯೋಗೇಶ್ವರನೂ, ಸರ್ವನಿಯಾಮಕನೂ, ಆದಿತ್ಯ-ಅಗ್ನಿ ರೂಪನೂ, ಕಪಿಲಾವಸ್ಥೆಯನ್ನು ಹೊಂದಿದವನೂ ಆದ ಶಿವನನ್ನು ವಂದಿಸುವೆನು.

ತ್ವಾಂ ಬ್ರಹ್ಮಪಾರಂ ಹೃದಿ ಸನ್ನಿವಿಷ್ಟಂ
ಹಿರಣ್ಮಯಂ ಯೋಗಿನಮಾದಿಹೀನಮ್ ।
ವ್ರಜಾಮಿ ರುದ್ರಂ ಶರಣಂ ದಿವಿಸ್ಥಂ
ಮಹಾಮುನಿಂ ಬ್ರಹ್ಮಪರಂ ಪವಿತ್ರಮ್ ॥ ೩೭ ॥

ಸಹಸ್ರಪಾದಾಕ್ಷಿಶಿರೋಽಭಿಯುಕ್ತಂ
ಸಹಸ್ರಬಾಹುಂ ತಮಸಃ ಪರಸ್ತಾತ್ ।
ತ್ವಾಂ ಬ್ರಹ್ಮಪಾರಂ ಪ್ರಣಮಾಮಿ ಶಂಭುಂ
ಹಿರಣ್ಯಗರ್ಭಾಧಿಪತಿಂ ತ್ರಿನೇತ್ರಮ್ ॥ ೩೮ ॥

ಯತಃ ಪ್ರಸೂತಿರ್ಜಗತೋ ವಿನಾಶೋ
ಯೇನಾಹೃತಂ ಸರ್ವಮಿದಂ ಶಿವೇನ ।
ತಂ ಬ್ರಹ್ಮಪಾರಂ ಭಗವಂತಮೀಶಂ
ಪ್ರಣಮ್ಯ ನಿತ್ಯಂ ಶರಣಂ ಪ್ರಪದ್ಯೇ ॥ ೩೯ ॥

---

೩೭. ಬ್ರಹ್ಮವಸ್ತುವಿನ ಸೀಮಾರೂಪನೂ, ಹೃದಯದಲ್ಲಿ ವಾಸಿಸುವವನೂ ಜ್ಯೋತಿರ್ಮಯನೂ, ಯೋಗಿಯೂ, ಜನ್ಮರಹಿತನೂ, ದ್ಯುಲೋಕವಾಸಿಯೂ, ಮಹಾಮುನಿಯೂ ಪರಬ್ರಹ್ಮರೂಪನೂ, ಪವಿತ್ರನೂ, ಆದ ರುದ್ರನನ್ನು ಶರಣು ಹೊಂದುವೆನು.

೩೮. ಮತ್ತು ಸಹಸ್ರಸಂಖ್ಯೆಯ ಪಾದ-ನೇತ್ರ-ಶಿರಸ್ಸು ಮತ್ತು ಬಾಹುಗಳಿಂದ ಕೂಡಿದವನೂ, ತಮೋಗುಣಾತೀತನೂ, ಹಿರಣ್ಯಗರ್ಭನಿಗೆ ಅಧಿಪತಿಯೂ, ನೇತ್ರ ತ್ರಯವುಳ್ಳವನೂ, ಶಂಕರನೂ, ಬ್ರಹ್ಮವಸ್ತುವಿನ ಪಾರರೂಪನೂ ಆದ ಶಿವನನ್ನು ನಮಸ್ಕರಿಸುವೆನು.

೩೯. ಯಾವ ಶಿವನಿಂದ ಜಗತ್ತಿನ ಉತ್ಪತ್ತಿ–ನಾಶಗಳು ನಡೆಯುವುವೋ, ಯಾವ ಶಿವನಿಂದ ಸಮಸ್ತ ಪ್ರಪಂಚವು ರಕ್ಷಿಸಲ್ಪಟ್ಟಿದೆಯೋ, ಬ್ರಹ್ಮವಸ್ತುವಿನ ಪಾರಸ್ವರೂಪನೂ, ಭಗವಂತನೂ ಆದ ಆ ಶಿವನನ್ನು ಪ್ರತಿನಿತ್ಯವೂ ವಂದಿಸಿ ಶರಣು ಹೊಂದುವೆನು.

ಅಲಿಂಗಮಾಲೋಕವಿಹೀನರೂಪಂ
ಸ್ವಯಂಪ್ರಭುಂ ಚಿತ್ಪ್ರತಿವ್ಯೈಕರುದ್ರಮ್ ।
ತಂ ಬ್ರಹ್ಮಪಾರಂ ಪರಮೇಶ್ವರಂ ತ್ವಾಂ
ನಮಸ್ಕರಿಷ್ಯೇ ನ ಯತೋಽನ್ಯದಸ್ತಿ ॥ ೪೦ ॥

ಯಂ ಯೋಗಿನಸ್ತ್ಯಕ್ತಸಬೀಜಯೋಗಾ
ಲ್ಲಬ್ಧ್ವಾ ಸಮಾಧಿಂ ಪರಮಾತ್ಮಭೂತಾಃ ।
ಪಶ್ಯಂತಿ ದೇವಂ ಪ್ರಣತೋಽಸ್ಮಿ ನಿತ್ಯಂ
ತದ್ಬ್ರಹ್ಮ ಪಾರಂ ಭವತಃ ಸ್ವರೂಪಮ್ ॥ ೪೧ ॥

ನ ಯತ್ರ ನಾಮಾನಿ ವಿಶೇಷತೃಪ್ತಿ
ರ್ನ ಸಂದೃಶೇ ತಿಷ್ಠತಿ ಯತ್ಸ್ವರೂಪಮ್ ।
ತಂ ಬ್ರಹ್ಮಪಾರಂ ಪ್ರಣತೋಽಸ್ಮಿ ನಿತ್ಯಂ
ಸ್ವಯಂಭುವಂ ತ್ವಾಂ ಶರಣಂ ಪ್ರಪದ್ಯೇ ॥ ೪೨ ॥

---

೪೦. ಲಿಂಗಶೂನ್ಯನೂ, ಪ್ರಕಾಶದಿಂದ ಹೀನವಾದ ರೂಪವುಳ್ಳವನೂ, ಪ್ರಭು ರೂಪನೂ, ಚಿದಾಕಾರವಾದ ರುದ್ರಮೂರ್ತಿಯುಳ್ಳವನೂ, ದ್ವಿತೀಯವಸ್ತುಶೂನ್ಯನೂ, ಬ್ರಹ್ಮವಸ್ತುವಿನ ತೀರಸ್ವರೂಪನೂ, ಪರಮೇಶ್ವರನೂ ಆದ ನಿನ್ನನ್ನು ನಮಸ್ಕರಿಸುವೆನು.

೪೧. ಯೋಗಿಗಳು ಸವಿಕಲ್ಪಸಮಾಧಿಯೋಗವನ್ನು ಬಿಟ್ಟು ನಿರ್ವಿಕಲ್ಪಕ ಸಮಾಧಿಯನ್ನು ಹೊಂದಿ ಪರಮಾತ್ಮಸ್ವರೂಪರಾಗಿ ಯಾವ ಸ್ವಾಮಿಯ ಸ್ವರೂಪವನ್ನು ಸಾಕ್ಷಾತ್ಕರಿಸುವರೋ, ಬ್ರಹ್ಮವಸ್ತುವಿನ ಪಾರದಂತಿರುವ ಆ ನಿನ್ನ ಸ್ವರೂಪವನ್ನು ನಿತ್ಯವೂ ವಂದಿಸುವೆನು.

೪೨. ಯಾವ ಪರಮಾತ್ಮನಲ್ಲಿ ನಾಮ ಮತ್ತು ವಿಶೇಷಾಕಾರದ ಕಲ್ಪನೆಯು ಇಲ್ಲವೋ, ಯಾವ ಪರಮಾತ್ಮನ ಸ್ವರೂಪವು ದೃಗ್ಗೋಚರವಲ್ಲವೋ ಬ್ರಹ್ಮನ ಪರ ಪಾರದಂತಿರುವವನೂ, ಶಾಶ್ವತನೂ, ಸ್ವಯಂಭುಸ್ವರೂಪನೂ, ಆದ ಅಂತಹ ನಿನ್ನನ್ನು ಶರಣು ಹೊಂದುವೆನು.

ಯದ್ವೇದವೇದಾಭಿರತಾ ವಿದೇಹಂ
ಸ ಬ್ರಹ್ಮವಿಜ್ಞಾನಮಭೇದಮೇಕಮ್ ।
ಪಶ್ಯಂತ್ಯನೇಕಂ ಭವತಃ ಸ್ವರೂಪಂ
ತದ್ಬ್ರಹ್ಮಸಾರಂ ಪ್ರಣಮಾಮಿ ನಿತ್ಯಮ್ ॥ ೪೩ ॥

ಯತಃ ಪ್ರಧಾನಂ ಪುರುಷಃ ಪುರಾಣೋ
ವಿವರ್ತತೇ ಯಂ ಪ್ರಣಮಂತಿ ದೇವಾಃ ।
ನಮಾಮಿ ತಂ ಜ್ಯೋತಿಷಿ ಸನ್ನಿವಿಷ್ಟಂ
ಕಾಲಂ ಬೃಹಂತಂ ಭವತಃ ಸ್ವರೂಪಮ್ ॥ ೪೪ ॥

ವ್ರಜಾಮಿ ನಿತ್ಯಂ ಶರಣಂ ಮಹೇಶಂ
ಸ್ಥಾಣುಂ ಪ್ರಪದ್ಯೇ ಗಿರಿಶಂ ಪುರಾಣಮ್ ।
ಶಿವಂ ಪ್ರಪದ್ಯೇ ಹರಿಮಿಂದುಮೌಲಿಂ
ಪಿನಾಕಿನಂ ತ್ವಾಂ ಶರಣಂ ವ್ರಜಾಮಿ ॥ ೪೫ ॥

---

೪೩. ವೇದದ ಜ್ಞಾನದಲ್ಲಿ ನಿಷ್ಠೆಯುಳ್ಳವರು ಭೇದಶೂನ್ಯವೂ, ಅದ್ವಿತೀಯವೂ, ದೇಹಾತೀತವೂ, ಬ್ರಹ್ಮವಿಜ್ಞಾನರೂಪವೂ, ಆದ ಯಾವ ನಿನ್ನ ಸ್ವರೂಪವನ್ನು ಸಾಕ್ಷಾತ್ಕರಿಸುವರೋ, ಅಂತಹ ಬ್ರಹ್ಮವಸ್ತುವಿನ ಸೀಮೆಯನ್ನು ಯಾವಾಗಲೂ ನಮಸ್ಕರಿಸುವೆನು.

೪೪. ಯಾವ ನಿನ್ನಿಂದ ಪ್ರಧಾನ ಅಥವಾ ಪುರಾಣಪುರುಷರು ಜನಿಸುವರೋ, ಯಾವ ನಿನ್ನನ್ನು ದೇವತೆಗಳು ವಂದಿಸುವರೋ, ಅಂತಹ ಜ್ಯೋತಿರ್ಮಂಡಲದಲ್ಲಿರುವವನೂ, ಕಾಲಸ್ವರೂಪನೂ, ಮಹಾತ್ಮನೂ ಆದ ನಿನ್ನ ರೂಪವನ್ನು ನಮಸ್ಕರಿಸುತ್ತೇನೆ.

೪೫. ನಾನು ಮಹೇಶ್ವರನನ್ನು ಯಾವಾಗಲೂ ಶರಣು ಹೊಂದುವೆನು. ನಾನು ಶಾಶ್ವತನೂ, ಪುರಾಣನೂ ಆದ ಕೈಲಾಸಾದ್ರಿನಾಥನನ್ನು ಶರಣು ಹೊಂದುವೆನು. ಶಿರದಲ್ಲಿ ಚಂದ್ರಕಲೆಯನ್ನು ಧರಿಸಿದ ಹರನನ್ನು ಶರಣು ಹೊಂದುವೆನು. ಮತ್ತು ನಾನು ಪಿನಾಕಧಾರಿಯಾದ ನಿನ್ನನ್ನು ಶರಣು ಹೊಂದುವೆನು.

ಸ್ತುತ್ವೈವಂ ಶಂಕುಕರ್ಣೋಽಸೌ ಭಗವಂತಂ ಕಪರ್ದಿನಮ್ ।
ಪಪಾತ ದಂಡವದ್ಭೂಮೌ ಪ್ರೋಚ್ಚರನ್ ಪ್ರಣವಂ ಶಿವಮ್ ॥ ೪೬ ॥

ತತ್ಕ್ಷಣಾತ್ಪರಮಂ ಲಿಂಗಂ ಪ್ರಾದುರ್ಭೂತಂ ಶಿವಾತ್ಮಕಮ್ ।
ಜ್ಞಾನಮಾನಂದಮದ್ವೈತಂ ಕೋಟಿಕಾಲಾಗ್ನಿಸನ್ನಿಭಮ್ ॥ ೪೭ ॥

ಶಂಕುಕರ್ಣೋಽಥ ಸ ತದಾ ಮುನಿಃ ಸರ್ವಾತ್ಮಕೋಽಮಲಃ ।
ನಿಲಿಂಪೇ ವಿಮಲೇ ಲಿಂಗೇ ತದದ್ಭುತಮಿವಾಭವತ್ ॥ ೪೮ ॥

ಏತದ್ರಹಸ್ಯಮಾಖ್ಯಾತಂ ಮಾಹಾತ್ಮ್ಯಂ ಚ ಕಪರ್ದಿನಃ ।
ನ ಕಶ್ಚಿದ್ವೇತ್ತಿ ತಮಸಾ ವಿದ್ವಾನಪ್ಯತ್ರ ಮುಹ್ಯತಿ ॥ ೪೯ ॥

---

೪೬. ಶಂಕುಕರ್ಣನು ಪೂಜ್ಯನೂ, ಜಟಾಧಾರಿಯೂ ಆದ ಶಿವನನ್ನು ಈರೀತಿಯಾಗಿ ಸ್ತುತಿಸಿ ಓಂಕಾರವನ್ನು ಉಚ್ಚರಿಸುತ್ತಾ ದಂಡಾಕಾರವಾಗಿ ಭೂಮಿಯಲ್ಲಿ ನಮಸ್ಕಾರಮಾಡಿದನು.

೪೭. ಆ ನಿಮಿಷದಲ್ಲಿ ಶಿವಸ್ವರೂಪವೂ, ಜ್ಞಾನಾತ್ಮಕವೂ, ಆನಂದರೂಪವೂ, ಅದ್ವಿತೀಯವೂ, ಕೋಟಿಸಂಖ್ಯೆಯ ಪ್ರಳಯಾಗ್ನಿ ಜ್ವಾಲೆಗೆ ಸಮಾನವೂ ಆದ ಲಿಂಗವು ಪ್ರಾದುರ್ಭವಿಸಿತು.

೪೮. ತರುವಾಯ ಆ ಶಂಕುಕರ್ಣನೆಂಬ ಮುನಿಯು ಸರ್ವಾತ್ಮಕನೂ, ನಿರ್ಮಲನೂ-ಆಗಿ ನಿರ್ಮಲವಾದ ಆ ಶಿವಲಿಂಗದಲ್ಲಿ ಐಕ್ಯಹೊಂದಿದನು. ಅದೊಂದು ಅದ್ಭುತವು ನಡೆದಂತಾಯಿತು.

೪೯. ಮುನಿಗಳೇ ! ಈರೀತಿಯಾಗಿ ಕಪರ್ದೀಶ್ವರನ ಮಹಿಮೆಯು ನನ್ನಿಂದ ವರ್ಣಿಸಲ್ಪಟ್ಟಿದೆ. ತಮೋಗುಣಕ್ಕೆ ವಶನಾದವನು ಯಾರೊಬ್ಬನೂ ಇದನ್ನು ತಿಳಿಯುವುದಿಲ್ಲ. ಈ ವಿಷಯದಲ್ಲಿ ವಿದ್ವಾಂಸನು ಕೂಡ ಮೋಹಗೊಳ್ಳುತ್ತಾನೆ.

ಯ ಇಮಾಂ ಶೃಣುಯಾನ್ನಿತ್ಯಂ ಕಥಾಂ ಪಾಪಪ್ರಣಾಶಿನೀಮ್ ।
ಭಕ್ತಃ ಪಾಪವಿಮುಕ್ತಾತ್ಮಾ ರುದ್ರಸಾಮೀಪ್ಯಮಾಪ್ನುಯಾತ್ ॥ ೫೦ ॥

ಪಠೇಚ್ಚ ಸತತಂ ಶುದ್ಧೋ ಬ್ರಹ್ಮಪಾರಂ ಮಹಾಸ್ತವಮ್ ।
ಪ್ರಾತರ್ಮಧ್ಯಾಹ್ನಸಮಯೇ ಸ ಯೋಗಂ ಪ್ರಾಪ್ನುಯಾನ್ನರಃ ॥ ೫೧ ॥

ಇಹೈವ ನಿತ್ಯಂ ವತ್ಸ್ಯಾಮೋ ದೇವದೇವಂ ಕಪರ್ದಿನಮ್ ।
ದ್ರಕ್ಷ್ಯಾಮಃ ಸತತಂ ದೇವಂ ಪೂಜಯಾಮಸ್ತ್ರಿಲೋಚನಮ್ ॥ ೫೨ ॥

ಇತ್ಯುಕ್ತ್ವಾ ಭಗವಾನ್ ವ್ಯಾಸಃ ಶಿಷ್ಯೈಃ ಸಹ ಮಹಾದ್ಯುತಿಃ ।
ಉವಾಸ ತತ್ರ ಯುಕ್ತಾತ್ಮಾ ಪೂಜಯನ್ ವೈ ಕಪರ್ದಿನಮ್ ॥ ೫೩ ॥

ಇತಿ ಶ್ರೀ ಕೂರ್ಮಪುರಾಣೇ ತ್ರಯಸ್ತ್ರಿಂಶೋಽಧ್ಯಾಯಃ.

---

೫೦. ಯಾವ ಮಾನವನು ಪಾಪವಾರಕವಾದ ಈ ಪುಣ್ಯಕಥೆಯನ್ನು ನಿತ್ಯವೂ ಶ್ರವಣಮಾಡುವನೋ; ಅಂತಹ ಭಕ್ತನು ಪಾಪನಿರ್ಮುಕ್ತನಾಗಿ ರುದ್ರನ ಸಾಮೀಪ್ಯ ಮುಕ್ತಿಯನ್ನು ಹೊಂದುವನು.

೫೧. ಶೂದ್ರನು ಬ್ರಹ್ಮಪಾರವೆಂಬ ಈ ಮಹಾಸ್ತೋತ್ರವನ್ನು ಪ್ರಾತಃಕಾಲ-ಮಧ್ಯಾಹ್ನ ಕಾಲಗಳ ಸಮಯದಲ್ಲಿ ಸಂತತವಾಗಿ ಪಠಿಸಿದರೆ ಅವನು ಮಹಾಯೋಗ ಸಿದ್ಧಿಯನ್ನು ಹೊಂದುವನು.

೫೨. ನಾವೆಲ್ಲರೂ ಇಲ್ಲಿಯೇ ಯಾವಾಗಲೂ ವಾಸಮಾಡೋಣ; ದೇವೋತ್ತಮನಾದ ಕಪರ್ದೀಶ್ವರನನ್ನು ದರ್ಶನಮಾಡೋಣ, ಮತ್ತು ತ್ರಿಣೇತ್ರನಾದ ಈಶ್ವರನನ್ನು ಸರ್ವದಾ ಪೂಜಿಸೋಣ.

೫೩. ಮಹಾತೇಜಸ್ವಿಯೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ವ್ಯಾಸ ಮಹಾಮುನಿಯು ಹೀಗೆಂದು ಹೇಳಿ ಶಿಷ್ಯಜನರೊಂದಿಗೆ ಯೋಗನಿರತವಾದ ಅಂತಃಕರಣವುಳ್ಳವನಾಗಿ ಕಪರ್ದೀಶ್ವರನನ್ನು ಪೂಜಿಸುತ್ತಾ ಅಲ್ಲಿಯೇ ವಾಸ ಮಾಡಿದನು.

( ಕೂರ್ಮಪುರಾಣದಲ್ಲಿ ಮೂವತ್ತಮೂರನೆಯ ಅಧ್ಯಾಯವು ಮುಗಿದುದು. )

ಶ್ರೀ

# ಕೂರ್ಮಪುರಾಣಂ

## ಚತುಸ್ತ್ರಿಂಶೋಽಧ್ಯಾಯಃ.

**ಸೂತ ಉವಾಚ :—**

**ಉಷಿತ್ವಾ ತತ್ರ ಭಗವಾನ್ ಕಪರ್ದೀಶಾಂತಿಕೇ ಪುನಃ ।**
**ಯಯೌ ದ್ರಷ್ಟುಂ ಮಧ್ಯಮೇಶಂ ಬಹುವರ್ಷಗಣಾನ್ ಪ್ರಭುಃ ॥ ೧ ॥**

**ತತ್ರ ಮಂದಾಕಿನೀಂ ಪುಣ್ಯಾಮೃಷಿಸಂಘನಿಷೇವಿತಾಮ್ ।**
**ನದೀಂ ವಿಮಲಪಾನೀಯಾಂ ದೃಷ್ಟ್ವಾ ಹೃಷ್ಟೋಽಭವನ್ಮುನಿಃ ॥ ೨ ॥**

---

## ಮೂವತ್ತನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :—ಪೂಜ್ಯನೂ, ಸರ್ವಪ್ರಭುವೂ ಆದ ವ್ಯಾಸಮುನಿಯು ಕಪರ್ದೀಶ್ವರನ ಸಮೀಪದಲ್ಲಿ ಅನೇಕವರ್ಷಗಳವರೆಗೆ ವಾಸ ಮಾಡಿ ಅಲ್ಲಿಂದ ಮತ್ತೆ ಮಧ್ಯಮೇಶ್ವರನನ್ನು ನೋಡಲು ಪ್ರಯಾಣಮಾಡಿದನು.

೨. ಅಲ್ಲಿ ಪವಿತ್ರವೂ, ಋಷಿಗಳ ಸಂಘದಿಂದ ಸೇವಿಸಲ್ಪಟ್ಟಿರುವುದೂ, ನಿರ್ಮಲವಾದ ಜಲವುಳ್ಳದ್ದೂ ಆದ ಮಂದಾಕಿನೀ ನದಿಯನ್ನು ನೋಡಿ ಮುನಿಯು ಸಂತುಷ್ಟನಾದನು.

ಸ ತಾಮನ್ವೀಕ್ಷ್ಯ ಮುನಿಭಿಃ ಸಹ ದ್ವೈಪಾಯನಃ ಪ್ರಭುಃ ।
ಚಕಾರ ಭಾವಪೂತಾತ್ಮಾ ಸ್ನಾನಂ ಸ್ನಾನವಿಧಾನವಿತ್ ॥ ೩ ॥

ಪೂಜಯಾಮಾಸ ಲೋಕಾದಿಂ ಪುಷ್ಪೈರ್ನಾನಾವಿಧೈರ್ಭವಮ್ ।
ಪ್ರವಿಶ್ಯ ಶಿಷ್ಯಪ್ರವರೈಃ ಸಾರ್ಧಂ ಸತ್ಯವತೀಸುತಃ ॥ ೪ ॥

ಸಂತರ್ಪ್ಯ ವಿಧಿವದ್ದೇವಾನೃಷೀನ್ ಪಿತೃಗಣಾಂಸ್ತಥಾ ।
ಮಧ್ಯಮೇಶ್ವರಮೀಶಾನಮರ್ಚಯಾಮಾಸ ಶೂಲಿನಮ್ ॥ ೫ ॥

ತತಃ ಪಾಶುಪತಾಃ ಶಾಂತಾ ಭಸ್ಮೋದ್ಧೂಲಿತವಿಗ್ರಹಾಃ ।
ದ್ರಷ್ಟುಂ ಸಮಾಗತಾ ರುದ್ರಂ ಮಧ್ಯಮೇಶ್ವರಮೀಶ್ವರಮ್ ॥ ೬ ॥

---

೩. ಅಲ್ಲಿ ಸರ್ವ ಸಮರ್ಥನೂ, ಸ್ನಾನದ ವಿಧಿಯನ್ನು ಅರಿತವನೂ, ಸಾಧು ಭಾವನೆಯಿಂದ ಪವಿತ್ರವಾದ ಆತ್ಮವುಳ್ಳವನೂ ಆದ ವ್ಯಾಸಮುನಿಯು ಮಂದಾಕಿನೀ ನದಿಯನ್ನು ನೋಡಿ ಮುನಿಜನರೊಂದಿಗೆ ಸ್ನಾನವನ್ನು ಮಾಡಿದನು.

೪. ಸತ್ಯವತೀದೇವಿಯ ಪುತ್ರನಾದ ವ್ಯಾಸಮುನಿಯು ಶಿಷ್ಯಜನರೊಡನೆ ಆ ಕ್ಷೇತ್ರವನ್ನು ಪ್ರವೇಶಿಸಿ ಲೋಕಗಳಿಗೆ ಮೂಲಕಾರಣನಾದ ಪರಮೇಶ್ವರನನ್ನು ನಾನಾವಿಧವಾದ ಪುಷ್ಪರಾಶಿಗಳಿಂದ ಪೂಜೆಮಾಡಿದನು.

೫. ಮತ್ತು ಯಥಾವಿಧಿಯಾಗಿ ದೇವತೆ-ಋಷಿ ಮತ್ತು ಪಿತೃದೇವತೆಗಳಿಗೆ ತರ್ಪಣಾಂಜಲಿಯನ್ನು ಕೊಟ್ಟು ತ್ರಿಶೂಲಧಾರಿಯಾದ, ಮಧ್ಯಮೇಶ್ವರನೆಂದು ಪ್ರಖ್ಯಾತನಾದ ಈಶ್ವರನನ್ನು ಪೂಜಿಸಿದನು.

೬. ತರುವಾಯ ಪಶುಪತಿವ್ರತಧಾರಿಗಳೂ, ಶಾಂತಸ್ವಭಾವವುಳ್ಳವರೂ, ಭಸ್ಮದಿಂದ ಲೇಪನಮಾಡಿದ ದೇಹವುಳ್ಳವರೂ ಆದ ಭಕ್ತರು ಮಧ್ಯಮೇಶ್ವರ ಸಂಜ್ಞಾಂಕಿತನೂ, ರುದ್ರಮೂರ್ತಿಯೂ ಆದ ಈಶ್ವರನನ್ನು ಸಂದರ್ಶಿಸಲು ಬಂದರು.

ಓಙ್ಕಾರಾಸಕ್ತಮನಸೋ ವೇದಾಧ್ಯಯನತತ್ಪರಾಃ ।
ಜಟಿಲಾ ಮುಂಡಿತಾಶ್ಚಾಪಿ ಶುದ್ಧಯಜ್ಞೋಪವೀತಿನಃ ॥ ೭ ॥

ಕೌಪೀನವಸನಾಃ ಕೇಚಿದಪರೇ ಚಾಪ್ಯವಾಸಸಃ ।
ಬ್ರಹ್ಮಚರ್ಯರತಾಃ ಶಾಂತಾ ದಾಂತಾ ಸ್ಟೈ ಜ್ಞಾನತತ್ಪರಾಃ ॥ ೮ ॥

ದೃಷ್ಟ್ವಾ ದ್ವೈಪಾಯನಂ ವಿಪ್ರಾಃ ಶಿಷ್ಯೈಃ ಪರಿವೃತಂ ಮುನಿಮ್ ।
ಪೂಜಯಿತ್ವಾ ಯಥಾನ್ಯಾಯಮಿದಂ ವಚನಮಬ್ರುವನ್ ॥ ೯ ॥

ಕೋ ಭವಾನ್ ಕುತ ಆಯಾತಃ ಸಹ ಶಿಷ್ಯೈರ್ಮಹಾಮುನೇ ।
ಪ್ರೋಚುಃ ಪೈಲಾದಯಃ ಶಿಷ್ಯಾಸ್ತಾನೃಷೀನ್ ಧರ್ಮಭಾವಿತಾನ್ ॥೧೦॥

---

೭. ಆ ಪಾಶುಪತರು ಶುದ್ಧವಾದ ಯಜ್ಞೋಪವೀತವನ್ನು ಧರಿಸಿದವರೂ, ಮುಂಡಿತರೂ, ಜಟಾಧಾರಿಗಳೂ, ವೇದಾಧ್ಯಯನಪರರೂ ಮತ್ತು ಓಂಕಾರ ಧ್ಯಾನದಲ್ಲಿ ತತ್ಪರವಾದ ಮಾನಸವುಳ್ಳವರೂ ಆಗಿದ್ದರು.

೮. ಮತ್ತು ಬ್ರಹ್ಮಚರ್ಯದಲ್ಲಿ ನಿರತರೂ, ಶಾಂತರೂ, ಜಿತೇಂದ್ರಿಯರೂ ಜ್ಞಾನನಿಷ್ಠಾ ತತ್ಪರರೂ ಆಗಿ ಕೆಲವರು ಕೌಪೀನವಸ್ತ್ರಧಾರಿಗಳೂ ಮತ್ತೆ ಕೆಲವರು ದಿಗಂಬರರೂ ಆಗಿದ್ದರು.

೯. ಆ ವಿಪ್ರರು ಶಿಷ್ಯಜನರಿಂದ ಸುತ್ತಲ್ಪಟ್ಟಿರುವ ಕೃಷ್ಣದ್ವೈಪಾಯನ ಮುನಿಯನ್ನು ನೋಡಿ ಉಚಿತವಾಗಿ ಸತ್ಕರಿಸಿ ಈ ವಚನವನ್ನು ಹೇಳಿದರು.

೧೦. ಮಹಾಮುನಿಯೇ ! ನೀನು ಯಾರು ? ಈ ಶಿಷ್ಯರೊಂದಿಗೆ ಎಲ್ಲಿಂದ ಬಂದೆ ? ಎಂದು ಪ್ರಶ್ನಿಸಲು ಪೈಲ ಮುಂತಾದ ಶಿಷ್ಯರು ಧರ್ಮಾನುಷ್ಠಾನದಿಂದ ಪುಣ್ಯಾತ್ಮರಾದ ಆ ಋಷಿಗಳನ್ನು ಕಂಡು ಹೀಗೆಂದು ಹೇಳಿದರು.

ಅಯಂ ಸತ್ಯವತೀಸೂನುಃ ಕೃಷ್ಣದ್ವೈಪಾಯನಃ ಪ್ರಭುಃ ।
ವ್ಯಾಸಃ ಸ್ವಯಂ ಹೃಷೀಕೇಶೋ ಯೇನ ವೇದಾಃ ಪೃಥಕ್ಕೃತಾಃ ॥೧೧॥

ಯಸ್ಯ ದೇವೋ ಮಹಾದೇವಃ ಸಾಕ್ಷಾದ್ದೇವಃ ಪಿನಾಕಧೃಕ್ ।
ಅಂಶಾಂಶೇನಾಭವತ್ಪುತ್ರೋ ನಾಮ್ನಾ ಶುಕ ಇತಿ ಪ್ರಭುಃ ॥ ೧೨ ॥

ಯೋ ವೈ ಸಾಕ್ಷಾನ್ಮಹಾದೇವಂ ಸರ್ವಭಾವೇನ ಶಂಕರಮ್ ।
ಪ್ರಸನ್ನಃ ಪರಯಾ ಭಕ್ತ್ಯಾ ಯಸ್ಯ ತಜ್ಜ್ಞಾನಮೈಶ್ವರಮ್ ॥ ೧೩ ॥

ತತಃ ಪಾಶುಪತಾಃ ಸರ್ವೇ ತೇ ಚ ಹೃಷ್ಟತನೂರುಹಾಃ ।
ಊಚುರವ್ಯಗ್ರಮನಸೋ ವ್ಯಾಸಂ ಸತ್ಯವತೀಸುತಮ್ ॥ ೧೪ ॥

---

೧೧. ಈ ಮಹಾತ್ಮನು ಸತ್ಯವತೀಪುತ್ರನೂ, ಕೃಷ್ಣದ್ವೈಪಾಯನನೆಂಬ ನಾಮಾಂಕಿತನೂ, ಪ್ರಭುವೂ, ವ್ಯಾಸನೆಂದು ಕರೆಯಲ್ಪಡುವವನೂ, ಸಾಕ್ಷಾತ್ ಶ್ರೀಮನ್ ನಾರಾಯಣಸ್ವರೂಪನೂ ಮತ್ತು ವೇದಗಳನ್ನು ವಿಂಗಡಿಸಿರುವ ಮುನಿಯೂ ಆಗಿದ್ದಾನೆ.

೧೨. ಈ ಮುನೀಶ್ವರನಿಗೆ ಪಿನಾಕಧಾರಿಯೂ, ದೇವೋತ್ತಮನೂ, ಸರ್ವ ಪ್ರಭುವೂ ಆದ ಈಶ್ವರನು ತನ್ನ ಅಂಶಾಂಶದಿಂದ ಶುಕ ಎಂಬ ನಾಮಾಂಕಿತನಾದ ಪುತ್ರನಾಗಿ ಜನಿಸಿರುವನು.

೧೩. ಈ ಮಹಾಮುನಿಯು ಮಹಾದೇವನಾದ ಶಂಕರನನ್ನು ಸಮಸ್ತ ಭಾವ ಗಳಿಂದಲೂ ಪರಮಭಕ್ತಿಯಿಂದಲೂ ಶರಣುಹೊಂದಿರುವನು. ಇಂತಹ ಮುನಿಗೆ ಈಶ್ವರ ತತ್ತ್ವಜ್ಞಾನವು ಉಂಟಾಗಿರುವುದು.

೧೪. ಅನಂತರದಲ್ಲಿ ಆ ಪಾಶುಪತರೆಲ್ಲರೂ ರೋಮಾಂಚಿತವಾದ ದೇಹವುಳ್ಳ ವರೂ ಅವ್ಯಾಕುಲವಾದ ಮಾನಸವುಳ್ಳವರೂ ಆಗಿ ಸತ್ಯವತೀಪುತ್ರನಾದ ವ್ಯಾಸ ಮುನಿಯನ್ನು ಕುರಿತು ಹೀಗೆಂದು ಹೇಳಿದರು.

ಭಗವನ್ ಭವತಾ ಜ್ಞಾತಂ ವಿಜ್ಞಾನಂ ಪರಮೇಷ್ಠಿನಃ ।
ಪ್ರಸಾದಾದ್ದೇವದೇವಸ್ಯ ಯತ್ತನ್ಮಾಹೇಶ್ವರಂ ಪರಮ್ ॥ ೧೫ ॥

ತದ್ವದಾಸ್ಮಾಕಮವ್ಯಗ್ರಂ ರಹಸ್ಯಂ ಜ್ಞಾನಮುತ್ತಮಮ್ ।
ಕ್ಷಿಪ್ರಂ ಪಶ್ಯೇಮ ತಂ ದೇವಂ ಶ್ರುತ್ವಾ ಭಗವತೋ ಮುಖಾತ್ ॥ ೧೬ ॥

ವಿಸರ್ಜಯಿತ್ವಾ ತಾನ್ ಶಿಷ್ಯಾನ್ ಸುಮಂತುಪ್ರಮುಖಾಂಸ್ತದಾ ।
ಪ್ರೋವಾಚ ತತ್ಪರಂ ಜ್ಞಾನಂ ಯೋಗಿಭ್ಯೋ ಯೋಗವಿತ್ತಮಃ॥ ೧೭ ॥

ತತ್ಕ್ಷಣಾದೇವ ವಿಮಲಂ ಸಂಭೂತಂ ಜ್ಯೋತಿರುತ್ತಮಮ್ ।
ಲೀನಾಸ್ತತ್ರೈವ ತೇ ವಿಪ್ರಾಃ ಕ್ಷಣಾದಂತರಧೀಯತ ॥ ೧೮ ॥

---

೧೫. ಪೂಜ್ಯನಾದ ವ್ಯಾಸಮುನಿಯೇ ! ಪರಮಪದದಲ್ಲಿರುವ, ದೇವೋತ್ತಮನಾದ ಈಶ್ವರನ ಪ್ರಸಾದದಿಂದ ನಿನಗೆ ಪರಮೇಶ್ವರ ತತ್ತ್ವಜ್ಞಾನವು ಉಂಟಾಗಿದೆ.

೧೬. ನಮಗೆ ಅತಿ ರಹಸ್ಯವೂ, ಬಹಳ ಗೋಪನೀಯವೂ ಮತ್ತು ಉತ್ತಮವೂ ಆದ ಆ ತತ್ತ್ವವನ್ನು ಸ್ಪಷ್ಟವಾಗಿ ಹೇಳು. ಸ್ವಾಮಿಯಾದ ನಿನ್ನ ಮುಖದಿಂದ ಅದನ್ನು ಕೇಳಿ ಭಗವಂತನನ್ನು ಕ್ಷಿಪ್ರದಲ್ಲಿ ಸಾಕ್ಷಾತ್ಕರಿಸುತ್ತೇವೆ.

೧೭. ಯೋಗಜ್ಞರಲ್ಲಿ ಶ್ರೇಷ್ಠನಾದ ವ್ಯಾಸಮುನಿಯು ಸುಮಂತು ಮುಂತಾದ ತನ್ನ ಶಿಷ್ಯರನ್ನು ಕಳುಹಿಸಿ ಯೋಗೀಶ್ವರರಿಗೆ ಆ ಪರಮಾರ್ಥ ಜ್ಞಾನವನ್ನು ಉಪದೇಶಿಸಿದನು.

೧೮. ಹೀಗೆ ಉಪದೇಶಮಾಡಿದ ಕ್ಷಣದಲ್ಲಿ ನಿರ್ಮಲವೂ, ಉತ್ತಮವೂ ಆದ ಒಂದು ಜ್ಯೋತಿಯು ಉದಯವಾಯಿತು. ಆ ವಿಪ್ರರು ಆ ಜ್ಯೋತಿಯ ಮಂಡಲದಲ್ಲಿ ನಿಲೀನರಾಗಿ ಕ್ಷಣಮಾತ್ರದಲ್ಲಿ ಅದೃಶ್ಯರಾದರು.

ತತಃ ಶಿಷ್ಯಾನ್ ಸಮಾಹೃತ್ಯ ಭಗವಾನ್ ಬ್ರಹ್ಮವಿತ್ತಮಃ ।
ಪ್ರೋವಾಚ ಮಧ್ಯಮೇಶಸ್ಯ ಮಾಹಾತ್ಮ್ಯಂ ಪೈಲಪೂರ್ವಕಾನ್ ॥ ೧೯ ॥

ಅಸ್ಮಿನ್ ಸ್ಥಾನೇ ಸ್ವಯಂ ದೇವೋ ದೇವ್ಯಾ ಸಹ ಮಹೇಶ್ವರಃ ।
ರಮತೇ ಭಗವಾನ್ನಿತ್ಯಂ ರುದ್ರೈಶ್ಚ ಪರಿವಾರಿತಃ ॥ ೨೦ ॥

ಅತ್ರ ಪೂರ್ವಂ ಹೃಷೀಕೇಶೋ ವಿಶ್ವಾತ್ಮಾ ದೇವಕೀಸುತಃ ।
ಉವಾಸ ವತ್ಸರಂ ಕೃಷ್ಣಃ ಸದಾ ಪಾಶುಪತೈರ್ವೃತಃ ॥ ೨೧ ॥

ಭಸ್ಮೋದ್ಧೂಲಿತಸರ್ವಾಂಗೋ ರುದ್ರಾರಾಧನತತ್ಪರಃ ।
ಆರಾಧಯನ್ ಹರಿಃ ಶಂಭುಂ ಕೃತ್ವಾ ಪಾಶುಪತಂ ವ್ರತಮ್ ॥ ೨೨ ॥

---

೧೯. ತರುವಾಯ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ಪೂಜ್ಯನೂ ಆದ ಆ ವ್ಯಾಸಮುನಿಯು ಪೈಲನೇ ಮುಂತಾದ ಶಿಷ್ಯರನ್ನು ಸಮೀಪಕ್ಕೆ ಕರೆದು ಮಧ್ಯಮೇಶ್ವರನ ಮಾಹಾತ್ಮ್ಯವನ್ನು ಪ್ರವಚನಮಾಡಿದನು.

೨೦. ಈ ಸ್ಥಾನದಲ್ಲಿ ಭಗವಂತನೂ, ಮಹೇಶ್ವರನೂ ಆದ ಶಂಕರನು ರುದ್ರಗಣಗಳಿಂದ ಸುತ್ತುವರಿಯಲ್ಪಟ್ಟವನಾಗಿ ಪಾರ್ವತೀದೇವಿಯೊಡನೆ ವಿಹರಿಸುತ್ತಿರುವನು.

೨೧. ಈ ಸ್ಥಳದಲ್ಲಿ ಸರ್ವೇಂದ್ರಿಯ ಪ್ರೇರಕನೂ, ವಿಶ್ವರೂಪಿಯೂ, ದೇವಕೀಪುತ್ರನೂ ಆದ ಶ್ರೀ ಕೃಷ್ಣನು ಪಾಶುಪತವ್ರತಧಾರಿಗಳಿಂದ ಕೂಡಿದವನಾಗಿ ಪೂರ್ವದಲ್ಲಿ ಒಂದು ವರ್ಷಕಾಲ ವಾಸಮಾಡಿರುವನು.

೨೨. ಶ್ರೀಹರಿಯು ಪಾಶುಪತವ್ರತವನ್ನು ಕೈಗೊಂಡು ಸರ್ವಾಂಗದಲ್ಲಿ ಭಸ್ಮವನ್ನು ಲೇಪಿಸುತ್ತಾ ರುದ್ರನ ಪೂಜೆಯಲ್ಲಿ ಆಸಕ್ತನಾಗಿ ಮಹಾದೇವನನ್ನು ಆರಾಧಿಸಿದನು.

ತಸ್ಯ ವೈ ಬಹವಃ ಶಿಷ್ಯಾ ಬ್ರಹ್ಮಚರ್ಯಪರಾಯಣಾಃ ।
ಲಬ್ಧ್ವಾ ತದ್ವಚನಾಜ್ಞಾನಂ ದೃಷ್ಟವಂತೋ ಮಹೇಶ್ವರಮ್ ॥ ೨೩ ॥

ತಸ್ಯ ದೇವೋ ಮಹಾದೇವಃ ಪ್ರತ್ಯಕ್ಷಂ ನೀಲಲೋಹಿತಃ ।
ದದೌ ಕೃಷ್ಣಸ್ಯ ಭಗವಾನ್ ವರದೋ ವರಮುತ್ತಮಮ್ ॥ ೨೪ ॥

ಯೇಽರ್ಚಯಿಷ್ಯಂತಿ ಗೋವಿಂದಂ ಮದ್ಭಕ್ತಾ ವಿಧಿಪೂರ್ವಕಮ್ ।
ತೇಷಾಂ ತದೈಶ್ವರಂ ಜ್ಞಾನಮುತ್ಪತ್ಸ್ಯತಿ ಜಗನ್ಮಯ ॥ ೨೫ ॥

ತ್ವಮೀಶಾನೋಽರ್ಚಿತವ್ಯಶ್ಚ ಧ್ಯಾತವ್ಯೋ ಮತ್ಪರೈರ್ಜನೈಃ ।
ಭವಿಷ್ಯಸಿ ನ ಸಂದೇಹೋ ಮತ್ಪ್ರಸಾದಾದ್ದ್ವಿಜಾತಿಭಿಃ ॥ ೨೬ ॥

---

೨೩. ಆ ಕೃಷ್ಣನ ಅನೇಕ ಮಂದಿ ಶಿಷ್ಯರು ಬ್ರಹ್ಮಚರ್ಯವ್ರತದಲ್ಲಿ ಪರಾಯಣರಾಗಿ ಅವನ ವಚನದಿಂದ ತತ್ತ್ವಜ್ಞಾನವನ್ನು ಹೊಂದಿ ಈಶ್ವರನನ್ನು ಸಾಕ್ಷಾತ್ಕರಿಸಿರುವರು.

೨೪. ನೀಲ ಮತ್ತು ಲೋಹಿತವರ್ಣಗಳಿಂದ ಕೂಡಿರುವವನೂ, ವರದಾನ ಶೀಲನೂ, ಮತ್ತು ಮಹಾದೇವನೂ ಆದ ಶಂಕರನು ಆ ಕೃಷ್ಣನಿಗೆ ಪ್ರತ್ಯಕ್ಷನಾಗಿ ಬಂದು ಉತ್ತಮವಾದ ವರವನ್ನು ಅನುಗ್ರಹಿಸಿದನು.

೨೫. ಜಗದ್ರೂಪಿಯೇ ! ಯಾವ ನನ್ನ ಭಕ್ತರು ವಿಧಿಪೂರ್ವಕವಾಗಿ ಗೋಪಾಲನಾದ ಕೃಷ್ಣನನ್ನು ಅರ್ಚಿಸುವರೊ ; ಅವರಿಗೆ ಈಶ್ವರ ತತ್ತ್ವಜ್ಞಾನವು ಹುಟ್ಟುವುದು.

೨೬. ನೀನು ಸರ್ವೇಶ್ವರನೂ, ನನ್ನಲ್ಲಿ ಭಕ್ತರಾದ ಜನರಿಂದ ಅರ್ಚಿಸಲ್ಪಡುವವನೂ, ಮತ್ತು ಧ್ಯಾನಿಸಲ್ಪಡುವವನೂ ಆಗುತ್ತೀಯೆ. ನನ್ನ ಪ್ರಸಾದದಿಂದ ದ್ವಿಜರಿಗೆ ನೀನು ಸೇವ್ಯನಾಗುವುದರಲ್ಲಿ ಸಂದೇಹವಿಲ್ಲ.

ಯೇ ಚ ದ್ರಕ್ಷ್ಯಂತಿ ದೇವೇಶಂ ಧ್ಯಾತ್ವಾ ದೇವಂ ಪಿನಾಕಿನಮ್ ।
ಬ್ರಹ್ಮಹತ್ಯಾದಿಕಂ ಪಾಪಂ ತೇಷಾಮಾಶು ವಿನಶ್ಯತಿ ॥ ೨೭ ॥

ಪ್ರಾಣಾಂಸ್ತ್ಯಜಂತಿ ಯೇ ವಿಪ್ರಾಃ ಪಾಪಕರ್ಮರತಾ ಅಪಿ ।
ತೇ ಯಾಂತಿ ಪರಮಂ ಸ್ಥಾನಂ ನಾತ್ರ ಕಾರ್ಯಾ ವಿಚಾರಣಾ ॥ ೨೮ ॥

ಧನ್ಯಾಸ್ತ್ರಥ್ಯಂ ತು ತೇ ವಿಪ್ರಾ ಮಂದಾಕಿನ್ಯಾಂ ಕೃತೋದಕಾಃ ।
ಅರ್ಚಯಂತಿ ಮಹಾದೇವಂ ಮಧ್ಯಮೇಶ್ವರಮುತ್ತಮಮ್ ॥ ೨೯ ॥

ಸ್ನಾನಂ ದಾನಂ ತಪಃ ಶ್ರಾದ್ಧಂ ಪಿಂಡನಿರ್ವಪಣಂ ತ್ವಿಹ ।
ಏಕೈಕಶಃ ಕೃತಂ ವಿಪ್ರಾಃ ಪುನಾತ್ಯಾಸಪ್ತಮಂ ಕುಲಮ್ ॥ ೩೦ ॥

---

೨೭. ಯಾವ ಮಾನವರು ಪಿನಾಕಧಾರಿಯಾದ ಮಹೇಶ್ವರನನ್ನು ಧ್ಯಾನಿಸಿ ಸಾಕ್ಷಾತ್ಕರಿಸುವರೋ, ಅವರ ಬ್ರಹ್ಮಹತ್ಯಾ ಮುಂತಾದ ಪಾಪವು ಶೀಘ್ರವಾಗಿ ನಾಶ ಹೊಂದುವುದು.

೨೮. ಯಾವ ವಿಪ್ರರು ಪಾಪಕರ್ಮಗಳಲ್ಲಿ ನಿರತರಾದರೂ ಈ ಪವಿತ್ರ ಕ್ಷೇತ್ರದಲ್ಲಿ ಪ್ರಾಣಗಳನ್ನು ತ್ಯಜಿಸುವರೋ; ಅವರು ಪರಮಸದ್ಗತಿಯನ್ನು ಹೊಂದುವರು. ಈ ವಿಷಯದಲ್ಲಿ ಸಂಶಯವನ್ನು ಹೊಂದಬಾರದು.

೨೯. ಆ ವಿಪ್ರರು ಗಂಗಾನದಿಯಲ್ಲಿ ಸ್ನಾನಾದಿಗಳನ್ನು ಮಾಡಿ ಮಹಾದೇವನೂ, ಸರ್ವೋತ್ತಮನೂ ಆದ ಮಧ್ಯಮೇಶ್ವರನನ್ನು ಪೂಜಿಸುತ್ತಾರೆ. ಅವರೇ ಸತ್ಯವಾಗಿ ಧನ್ಯರು.

೩೦. ವಿಪ್ರರೇ ! ಈ ತೀರ್ಥದಲ್ಲಿ ಸ್ನಾನ-ದಾನ-ತಪಸ್ಸು-ಶ್ರಾದ್ಧ ಮತ್ತು ಪಿಂಡನಿರ್ವಾಪ ಇವುಗಳಲ್ಲಿ ಒಂದೊಂದು ಕರ್ಮವೂ ಆಚರಿಸಲ್ಪಡುವುದಾಗಿ ಏಳು ಕುಲಗಳನ್ನು ಪವಿತ್ರಮಾಡುವುದು.

ಸನ್ನಿಹತ್ಯಾಮುಪಸ್ಪೃಶ್ಯ ರಾಹುಗ್ರಸ್ತೇ ದಿವಾಕರೇ ।
ಯತ್ಫಲಂ ಲಭತೇ ಮರ್ತ್ಯಸ್ತಸ್ಮಾದ್ದಶಗುಣಂ ತ್ವಿಹ　　॥ ೩೧ ॥

ಏವಮುಕ್ತ್ವಾ ಮಹಾಯೋಗೀ ಮಧ್ಯಮೇಶಾಂತಿಕೇ ಪ್ರಭುಃ ।
ಉವಾಸ ಸುಚಿರಂ ಕಾಲಂ ಪೂಜಯನ್ ವೈ ಮಹೇಶ್ವರಮ್　　॥ ೩೨ ॥

ಇತಿ ಶ್ರೀ ಕೂರ್ಮಪುರಾಣೇ ಚತುಸ್ತ್ರಿಂಶೋಽಧ್ಯಾಯಃ.

---

೩೧. ಸೂರ್ಯನು ರಾಹುಗ್ರಸ್ತನಾಗಿರಲು ಮಾನವನು ಯಾವುದಾದರೊಂದು ಪುಣ್ಯಕ್ಷೇತ್ರದಲ್ಲಿ ನದೀಸ್ನಾನಾದಿಗಳನ್ನು ಆಚರಿಸಿ ಯಾವ ಫಲಗಳನ್ನು ಹೊಂದುವನೋ, ಅದರ ದಶಗುಣಾಧಿಕ ಫಲವನ್ನು ಈ ಕ್ಷೇತ್ರದಲ್ಲಿ ಹೊಂದುವನು.

೩೨. ಮಹಾಯೋಗಿಯೂ, ಸ್ವತಂತ್ರನೂ ಆದ ವ್ಯಾಸಮುನಿಯು ಹೀಗೆಂದು ಹೇಳಿ ಮಧ್ಯಮೇಶ್ವರನ ಸಮೀಪದಲ್ಲಿ ಮಹೇಶ್ವರನನ್ನು ಪೂಜಿಸುತ್ತಾ ಹೆಚ್ಚುಕಾಲ ವಾಸಮಾಡಿದನು.

( ಕೂರ್ಮಪುರಾಣದಲ್ಲಿ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ

## ಪಂಚತ್ರಿಂಶೋऽಧ್ಯಾಯಃ.

**ಸೂತ ಉವಾಚ :—**

**ತತಃ ಸರ್ವಾಣಿ ಗುಹ್ಯಾನಿ ತೀರ್ಥಾನ್ಯಾಯತನಾನಿ ಚ ।**
**ಜಗಾಮ ಭಗವಾನ್ ವ್ಯಾಸೋ ಜೈಮಿನಿಪ್ರಮುಖೈರ್ವೃತಃ ॥ ೧ ॥**

**ಪ್ರಯಾಗಂ ಪರಮಂ ತೀರ್ಥಂ ಪ್ರಯಾಗಾದಧಿಕಂ ಶುಭಮ್ ।**
**ವಿಶ್ವರೂಪಂ ತಥಾ ತೀರ್ಥಂ ಕಾಲತೀರ್ಥಮನುತ್ತಮಮ್ ॥ ೨ ॥**

---

## ಮೂವತ್ತೈದನೆಯ ಅಧ್ಯಾಯವು.

೧. ತರುವಾಯ ಷಡ್ಗುಣೈಶ್ವರ್ಯ ಸಂಪನ್ನನಾದ ವ್ಯಾಸಮುನಿಯು ಜೈಮಿನಿ ಮುಂತಾದ ಶಿಷ್ಯರಿಂದ ಸುತ್ತಲ್ಪಟ್ಟವನಾಗಿ ಸಮಸ್ತ ರಹಸ್ಯತೀರ್ಥಗಳನ್ನೂ ರಹಸ್ಯ ದೇವಾಲಯಗಳನ್ನೂ ಕುರಿತು ಪ್ರಯಾಣಮಾಡಿದನು.

೨. ವ್ಯಾಸಮುನಿಯು ಕ್ರಮವಾಗಿ ಪ್ರಯಾಗವೆಂಬ ಉತ್ತಮ ತೀರ್ಥಕ್ಕೂ ಅಲ್ಲಿಂದ ಪ್ರಯಾಗಕ್ಕಿಂತಲೂ ಅಧಿಕವೂ, ಮಂಗಳಕರವೂ ಆದ ವಿಶ್ವರೂಪ ತೀರ್ಥಕ್ಕೂ ಹಾಗೂ ಸರ್ವೋತ್ತಮವಾದ ಕಾಲತೀರ್ಥಕ್ಕೂ ಪ್ರಯಾಣಮಾಡಿದನು.

ಆಕಾಶಾಖ್ಯಂ ಮಹಾತೀರ್ಥಂ ತೀರ್ಥಂ ಚೈವಾನುಷಂ ಪರಮ್ ।
ಸ್ವರ್ಲೀನಂ ಚ ಮಹಾತೀರ್ಥಂ ಗೌರೀತೀರ್ಥಮನುತ್ತಮಮ್ ॥ ೩ ॥

ಪ್ರಾಜಾಪತ್ಯಂ ಪರಂ ತೀರ್ಥಂ ಸ್ವರ್ಗದ್ವಾರಂ ತಥೈವ ಚ ।
ಜಂಬುಕೇಶ್ವರಮಿತ್ಯುಕ್ತಂ ಚರ್ಮಾಖ್ಯಂ ತೀರ್ಥಮುತ್ತಮಮ್ ॥ ೪ ॥

ಗಯಾತೀರ್ಥಂ ಮಹಾತೀರ್ಥಂ ತೀರ್ಥಂ ಚೈವ ಮಹಾನದೀ ।
ನಾರಾಯಣಂ ಪರಂ ತೀರ್ಥಂ ವಾಯುತೀರ್ಥಮನುತ್ತಮಮ್ ॥ ೫ ॥

ಜ್ಞಾನತೀರ್ಥಂ ಪರಂ ಗುಹ್ಯಂ ವಾರಾಹಂ ತೀರ್ಥಮುತ್ತಮಮ್ ।
ಯಮತೀರ್ಥಂ ಮಹಾಪುಣ್ಯಂ ತೀರ್ಥಂ ಸಂವರ್ತಕಂ ಪರಮ್ ॥ ೬ ॥

---

೩. ಮತ್ತು ಆಕಾಶವೆಂಬ ಮಹಾತೀರ್ಥ, ಅನುಷವೆಂಬ ಉತ್ತಮತೀರ್ಥ ಸ್ವರ್ಲೀನ ಎಂಬ ಮಹಾತೀರ್ಥ ಮತ್ತು ಗೌರೀತೀರ್ಥವೆಂಬ ಉತ್ತಮ ತೀರ್ಥಗಳಿಗೆ ಕ್ರಮವಾಗಿ ಪ್ರಯಾಣ ಮಾಡಿದನು.

೪. ಅಲ್ಲಿಂದ ಮುಂದೆ ಪ್ರಾಜಾಪತ್ಯ ಎಂಬ ಉತ್ತಮತೀರ್ಥ, ಸ್ವರ್ಗದ್ವಾರವೆಂಬ ಮಹಾತೀರ್ಥ ಜಂಬುಕೇಶ್ವರವೆಂದು ಪ್ರಖ್ಯಾತತೀರ್ಥ, ಚರ್ಮತೀರ್ಥವೆಂಬ ಪ್ರಸಿದ್ಧಿಯುಳ್ಳ ಮಹಾತೀರ್ಥಗಳಿಗೆ ಕ್ರಮವಾಗಿ ಹೊರಟುಹೋದನು.

೫. ಮುಂದೆ ಗಯಾ ತೀರ್ಥವೆಂಬ ಉತ್ತಮತೀರ್ಥಕ್ಕೂ, ಮಹಾನದಿ ಎಂಬ ಉತ್ತಮ ತೀರ್ಥಕ್ಕೂ, ನಾರಾಯಣತೀರ್ಥವೆಂಬ ಮಹಾತೀರ್ಥಕ್ಕೂ ಮತ್ತು ವಾಯು ತೀರ್ಥವೆಂಬ ಸರ್ವೋತ್ತಮ ತೀರ್ಥಕ್ಕೂ ಪ್ರಯಾಣಮಾಡಿದನು.

೬. ಅಲ್ಲಿಂದ ಗುಹ್ಯವಾದ ಜ್ಞಾನತೀರ್ಥ, ಶ್ರೇಷ್ಠವಾದ ವಾರಾಹತೀರ್ಥ, ಮಹಾ ಪುಣ್ಯಕರವಾದ ಯಮತೀರ್ಥ ಮತ್ತು ಶ್ರೇಷ್ಠವಾದ ಸಂವರ್ತಕ ತೀರ್ಥ ಎಂಬ ತೀರ್ಥಗಳಿಗೆ ಹೋದನು.

ಅಗ್ನಿತೀರ್ಥಂ ದ್ವಿಜಶ್ರೇಷ್ಠಾಃ ಕಾಲಕೇಶ್ವರಮುತ್ತಮಮ್ ।
ನಾಗತೀರ್ಥಂ ಸೋಮತೀರ್ಥಂ ಸೂರ್ಯತೀರ್ಥಂ ತಥೈವ ಚ ॥ ೭ ॥

ಪರ್ವತಾಖ್ಯಂ ಮಹಾಪುಣ್ಯಂ ಮಣಿಕರ್ಣಮನುತ್ತಮಮ್ ।
ಘಟೋತ್ಕಚಂ ತೀರ್ಥವರಂ ಶ್ರೀತೀರ್ಥಂ ಚ ಪಿತಾಮಹಮ್ ॥ ೮ ॥

ಗಂಗಾತೀರ್ಥಂ ತು ದೇವೇಶಂ ತಥಾ ತತ್ತೀರ್ಥಮುತ್ತಮಮ್ ।
ಕಾಪಿಲಂ ಚೈವ ಸೋಮೇಶಂ ಬ್ರಹ್ಮತೀರ್ಥಮನುತ್ತಮಮ್ ॥ ೯ ॥

ಯತ್ರ ಲಿಂಗಂ ಪೂಜನೀಯಂ ಸ್ನಾತುಂ ಬ್ರಹ್ಮಾ ಯದಾಗತಃ ।
ತದಾನೀಂ ಸ್ಥಾಪಯಾಮಾಸ ವಿಷ್ಣುಸ್ತಲ್ಲಿಂಗಮೈಶ್ವರಮ್ ॥ ೧೦ ॥

---

೭. ದ್ವಿಜೋತ್ತಮರೇ ! ಅಗ್ನಿತೀರ್ಥ, ಕಾಲಕೇಶ್ವರ ತೀರ್ಥ, ನಾಗತೀರ್ಥ, ಸೋಮತೀರ್ಥ ಮತ್ತು ಸೂರ್ಯತೀರ್ಥವೆಂಬ ಉತ್ತಮ ತೀರ್ಥಕ್ಷೇತ್ರಗಳಿಗೆ ಹೊರಟುಹೋದನು.

೮. ಮತ್ತು ಮಹಾಪವಿತ್ರವಾದ ಪರ್ವತತೀರ್ಥ, ಸರ್ವೋತ್ತಮವಾದ ಮಣಿಕರ್ಣತೀರ್ಥ, ಶ್ಲಾಘ್ಯತೀರ್ಥವಾದ ಘಟೋತ್ಕಚ ತೀರ್ಥ ಮತ್ತು ಅತ್ಯುತ್ತಮವಾದ ಶ್ರೀತೀರ್ಥ ಎಂಬ ತೀರ್ಥಗಳನ್ನು ಕ್ರಮವಾಗಿ ಹೊಂದಿದನು.

೯. ಮತ್ತು ಗಂಗಾತೀರ್ಥ, ದೇವೇಶತೀರ್ಥ, ಕಪಿಲತೀರ್ಥ, ಸೋಮೇಶ ತೀರ್ಥ, ಮತ್ತು ಬ್ರಹ್ಮ ತೀರ್ಥಗಳೆಂಬ ಪವಿತ್ರವೂ ಶ್ರೇಷ್ಠವೂ ಆದ ತೀರ್ಥಗಳಲ್ಲಿ ಸಂಚರಿಸಿದನು.

೧೦. ಈ ಬ್ರಹ್ಮತೀರ್ಥದಲ್ಲಿ ಹಿಂದೆ ಒಂದು ವೇಳೆಯಲ್ಲಿ ಬ್ರಹ್ಮದೇವನು ಒಂದು ಲಿಂಗವನ್ನು ಸ್ಥಾಪಿಸಿ ಪೂಜಿಸಲು ಇಲ್ಲಿಗೆ ಬಂದು ಲಿಂಗವನ್ನು ಒಂದು ಕಡೆ ಇರಿಸಿ ಸ್ನಾನಮಾಡಲು ಹೊರಟುಹೋದನು. ಆಗ ವಿಷ್ಣುವು ಈಶ್ವರನ ಆ ಲಿಂಗ ವನ್ನು ತಾನು ಪ್ರತಿಷ್ಠೆಮಾಡಿದನು.

ತತಃ ಸ್ನಾತ್ವಾ ಸಮಾಗತ್ಯ ಬ್ರಹ್ಮಾ ಪ್ರೋವಾಚ ತಂ ಹರಿಮ್ ।
ಮಯಾನೀತಮಿದಂ ಲಿಂಗಂ ಕಸ್ಮಾತ್ ಸ್ಥಾಪಿತವಾನಸಿ ॥ ೧೧ ॥

ತಮಾಹ ವಿಷ್ಣುಸ್ತ್ವತ್ತೋಽಪಿ ರುದ್ರೇ ಭಕ್ತಿರ್ದೃಢಾ ಯತಃ ।
ತಸ್ಮಾತ್ ಪ್ರತಿಷ್ಠಿತಂ ಲಿಂಗಂ ನಾಮ್ನಾ ತತ್ರ ಭವಿಷ್ಯತಿ ॥ ೧೨ ॥

ಭೂತೇಶ್ವರಂ ತಥಾ ತೀರ್ಥಂ ತೀರ್ಥಂ ಧರ್ಮಸಮುದ್ಭವಮ್ ।
ಗಂಧರ್ವತೀರ್ಥಂ ಸುಶುಭಂ ವಾಹ್ನೇಯಂ ತೀರ್ಥಮುತ್ತಮಮ್॥೧೩॥

ದೌರ್ವಾಸಿಕಂ ಹೋಮತೀರ್ಥಂ ಚಂದ್ರತೀರ್ಥಂ ದ್ವಿಜೋತ್ತಮಾಃ ।
ಚಿತ್ರಾಂಗದೇಶ್ವರಂ ಪುಣ್ಯಂ ಪುಣ್ಯಂ ವಿದ್ಯಾಧರೇಶ್ವರಮ್ ॥ ೧೪ ॥

---

೧೧. ಆಗ ಯಥಾವಿಧಿಯಾಗಿ ಸ್ನಾನಮಾಡಿ ಹಿಂತಿರುಗಿದ ಬ್ರಹ್ಮದೇವನು ಲಿಂಗವು ಸ್ಥಾಪಿಸಲ್ಪಟ್ಟಿರುವುದನ್ನು ನೋಡಿ "ನನ್ನಿಂದ ತರಲ್ಪಟ್ಟಿರುವ ಈ ಈಶ್ವರ ಲಿಂಗವನ್ನು ನೀನು ಏಕೆ ಸ್ಥಾಪಿಸಿರುವೆ ?" ಎಂದು ವಿಷ್ಣುವನ್ನು ಕುರಿತು ಪ್ರಶ್ನೆ ಮಾಡಿದನು.

೧೨. ವಿಷ್ಣುವು ಅದಕ್ಕೆ ಈ ರೀತಿಯಾಗಿ ಉತ್ತರವಿತ್ತನು :— ನಿನಗಿಂತಲೂ ನನಗೆ ರುದ್ರದೇವನಲ್ಲಿ ಭಕ್ತಿಯು ದೃಢವಾಗಿರುವುದು, ಆದುದರಿಂದ ನಾನು ಲಿಂಗವನ್ನು ಸ್ಥಾಪಿಸಿ ಪೂಜಿಸಿರುವೆನು. ಆದರೆ ಈ ಲಿಂಗದ ಸನ್ನಿಧಿಯಲ್ಲಿರುವ ತೀರ್ಥವು ಬ್ರಹ್ಮ ತೀರ್ಥವೆಂದು ನಿನ್ನ ಹೆಸರಿನಿಂದ ಖ್ಯಾತಿಯನ್ನು ಹೊಂದುವುದು.

೧೩. ಹಾಗು ಭೂತೇಶ್ವರತೀರ್ಥ, ಧರ್ಮಸಮುದ್ಭವತೀರ್ಥ, ಗಂಧರ್ವ ತೀರ್ಥ, ವಹ್ನಿತೀರ್ಥಗಳೆಂಬ ಪವಿತ್ರವೂ, ಮಂಗಳಕರವೂ, ಸರ್ವೋತ್ತಮವೂ ಆದ ವಿವಿಧ ತೀರ್ಥಗಳಲ್ಲಿ ಸಂಚರಿಸಿದನು.

೧೪. ದ್ವಿಜೋತ್ತಮರೇ ! ಮುಂದೆ ದುರ್ವಾಸತೀರ್ಥ, ಹೋಮತೀರ್ಥ, ಚಂದ್ರತೀರ್ಥ, ಚಿತ್ರಾಂಗದೇಶತೀರ್ಥ, ವಿದ್ಯಾಧರೇಶ್ವರತೀರ್ಥಗಳೆಂಬ ಪವಿತ್ರವಾದ ತೀರ್ಥಶ್ರೇಣಿಯಲ್ಲಿ ಸಂಚರಿಸಿದನು.

ಕೇದಾರಂ ತೀರ್ಥಮುಖ್ಯಾಖ್ಯಂ ಕಾಲಂಜರಮನುತ್ತಮಮ್ ।
ಸಾರಸ್ವತಂ ಪ್ರಭಾಸಂ ಚ ಶ್ವೇಟಕರ್ಣಂ ಹರಂ ಶುಭಮ್ ॥ ೧೫ ॥

ಲೌಕಿಕಾಖ್ಯಂ ಮಹಾತೀರ್ಥಂ ತೀರ್ಥಂ ಚೈವ ಹಿಮಾಲಯಮ್ ।
ಹಿರಣ್ಯಗರ್ಭಂ ಗೋಪ್ರೇಖ್ಯಂ ತೀರ್ಥಂ ಚೈವ ವೃಷಧ್ವಜಮ್ ॥ ೧೬ ॥

ಉಪಶಾಂತಂ ಶಿವಂ ಚೈವ ವ್ಯಾಘ್ರೇಶ್ವರಮನುತ್ತಮಮ್ ।
ತ್ರಿಲೋಚನಂ ಮಹಾತೀರ್ಥಂ ಲೋಲಾರ್ಕಂ ಚೋತ್ತರಾಹ್ವಯಮ್ ॥

ಕಪಾಲಮೋಚನಂ ತೀರ್ಥಂ ಬ್ರಹ್ಮಹತ್ಯಾವಿನಾಶನಮ್ ।
ಶುಕ್ರೇಶ್ವರಂ ಮಹಾಪುಣ್ಯಮಾನಂದಪುರಮುತ್ತಮಮ್ ॥ ೧೮ ॥

---

೧೫. ತೀರ್ಥ ಮುಖ್ಯವೆಂದು ಪ್ರಸಿದ್ಧವಾದ ಕೇದಾರತೀರ್ಥ, ಸರ್ವೋತ್ತಮವೆಂದೆನಿಸಿದ ಕಾಲಂಜರತೀರ್ಥ ಮತ್ತುಸಾರಸ್ವತ, ಪ್ರಭಾಸ, ಶ್ವೇಟಕರ್ಣ, ಹರತೀರ್ಥಗಳೆಂಬ ಮಹಾತೀರ್ಥಗಳಲ್ಲಿ ಸಂಚರಿಸಿದನು.

೧೬. ಮತ್ತು ಲೌಕಿಕತೀರ್ಥವೆಂಬ ಮಹಾತೀರ್ಥಕ್ಕೂ, ಹಿಮಾಲಯ ತೀರ್ಥಕ್ಕೂ, ಹಿರಣ್ಯಗರ್ಭತೀರ್ಥಕ್ಕೂ ಗೋಪ್ರೇಖ್ಯತೀರ್ಥಕ್ಕೂ ಹಾಗೂ ವೃಷಧ್ವಜ ತೀರ್ಥಕ್ಕೂ ಪ್ರಯಾಣ ಮಾಡಿದನು.

೧೭. ಮತ್ತು ಉಪಶಾಂತಿಯನ್ನು ಕೊಡುವ ಶಿವತೀರ್ಥ, ಶ್ರೇಷ್ಠವಾದ ವ್ಯಾಘ್ರೇಶ್ವರತೀರ್ಥ, ಮಹಾತೀರ್ಥವೆಂದು ಗಣ್ಯವಾದ ತ್ರಿಲೋಚನತೀರ್ಥ ಮತ್ತು ಉತ್ತರತೀರ್ಥ ಅಥವಾ ಲೋಲಾರ್ಕತೀರ್ಥಗಳಿಗೆ ಕ್ರಮವಾಗಿ ಪ್ರಯಾಣಮಾಡಿದನು

೧೮. ಬ್ರಹ್ಮಹತ್ಯಾ ಮಹಾಪಾತಕವನ್ನು ನಾಶಮಾಡುವ ಕಪಾಲಮೋಚನ ತೀರ್ಥದಲ್ಲಿಯೂ, ಮಹಾಪುಣ್ಯಸಂಪಾದಕವೂ ಉತ್ತಮವೂ ಆನಂದದಾಯಕವೂ ಆದ ಶುಕ್ರೇಶ್ವರತೀರ್ಥದಲ್ಲಿ ಸಂಚರಿಸಿದನು.

ಏವಮಾದೀನಿ ತೀರ್ಥಾನಿ ಪ್ರಾಧಾನ್ಯಾತ್ ಕಥಿತಾನಿ ತು ।
ನ ಶಕ್ಯಾ ವಿಸ್ತರಾದ್ವಕ್ತುಂ ತೀರ್ಥಸಂಖ್ಯಾ ದ್ವಿಜೋತ್ತಮಾಃ ॥ ೧೯ ॥

ತೇಷು ಸರ್ವೇಷು ತೀರ್ಥೇಷು ಸ್ನಾತ್ವಾಭ್ಯರ್ಚ್ಯ ಸನಾತನಮ್ ।
ಉಪೋಷ್ಯ ತತ್ರ ತತ್ರಾಸೌ ಪಾರಾಶರ್ಯೋ ಮಹಾಮುನಿಃ ॥ ೨೦ ॥

ತರ್ಪಯಿತ್ವಾ ಪಿತೄನ್-ದೇವಾನ್ ಕೃತ್ವಾ ಪಿಂಡಪ್ರದಾನಕಮ್ ।
ಜಗಾಮ ಪುನರೇವಾಪಿ ಯತ್ರ ವಿಶ್ವೇಶ್ವರಃ ಶಿವಃ ॥ ೨೧ ॥

ಸ್ನಾತ್ವಾಭ್ಯರ್ಚ್ಯ ಮಹಾಲಿಂಗಂ ಶಿಷ್ಯೈಃ ಸಹ ಮಹಾಮುನಿಃ ।
ಉವಾಚ ಶಿಷ್ಯಾನ್ ಧರ್ಮಾತ್ಮಾ ಯಥೇಷ್ಟಂ ಗಂತುಮರ್ಹಥ ॥ ೨೨ ॥

---

೧೯. ದ್ವಿಜೋತ್ತಮರೇ ! ಈ ರೀತಿಯಾಗಿ ಪ್ರಧಾನವಾಗಿ ಗಣ್ಯವಾಗಿರುವ ತೀರ್ಥಗಳು ನನ್ನಿಂದ ಹೇಳಲ್ಪಟ್ಟವೆ. ತೀರ್ಥಗಳ ಸಂಖ್ಯೆಯನ್ನು ವಿಸ್ತಾರವಗಿ ವರ್ಣಿಸಲು ಶಕ್ಯವಲ್ಲ.

೨೦. ಪರಾಶರಮುನಿಯ ಪುತ್ರನಾದ ವ್ಯಾಸಮಹಾಮುನಿಯು ಆಯಾಯ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಿ ಭಗವಂತನನ್ನು ಪೂಜಿಸಿ ಅಲ್ಲಲ್ಲಿ ಉಪವಾಸ ಮಾಡಿ ತೀರ್ಥವಿಧಿಯನ್ನು ಆಚರಿಸಿದನು.

೨೧. ಮತ್ತು ಪಿತೃ-ದೇವತಾಗಣಗಳಿಗೆ ತರ್ಪಣವನ್ನು ಬಿಟ್ಟು ಪಿಂಡದಾನಾದಿಗಳನ್ನು ಮಾಡಿ ವಿಶ್ವೇಶ್ವರನೆಂಬ ಸಂಜ್ಞಾಂಕಿತನಾದ ಶಿವನು ಇರುವ ಸ್ಥಳಕ್ಕೆ ಬಂದು ಸೇರಿದನು.

೨೨. ಧರ್ಮಾತ್ಮನಾದ ಆ ವ್ಯಾಸಮಹಾಮುನಿಯು ಶಿಷ್ಯರೊಂದಿಗೆ ಸ್ನಾನ ಮಾಡಿ ವಿಶ್ವೇಶ್ವರ ಮಹಾಲಿಂಗವನ್ನು ಪೂಜಿಸಿ ಶಿಷ್ಯರನ್ನು ಕುರಿತು ಇನ್ನುಮುಂದೆ ನಿಮ್ಮ ಇಷ್ಟಾನುಸಾರವಾಗಿ ಹೋಗಬಹುದೆಂದು ಅಪ್ಪಣೆಕೊಟ್ಟನು.

ತೇ ಪ್ರಣಮ್ಯ ಮಹಾತ್ಮಾನಂ ಜಗ್ಮುಃ ಪೈಲಾದಯೋ ದ್ವಿಜಾಃ ।
ವಾಸಂ ಚ ತತ್ರ ನಿಯತೋ ವಾರಾಣಸ್ಯಾಂ ಚಕಾರ ಸಃ ॥ ೨೩ ॥

ಶಾಂತೋ ದಾಂತಸ್ತ್ರಿಷವಣಂ ಸ್ನಾತ್ವಾಭ್ಯರ್ಚ್ಯ ಪಿನಾಕಿನಮ್ ।
ಭೈಕ್ಷ್ಯಾಹಾರೋ ವಿಶುದ್ಧಾತ್ಮಾ ಬ್ರಹ್ಮಚರ್ಯಪರಾಯಣಃ ॥ ೨೪ ॥

ಕದಾಚಿತ್ತತ್ರ ವಸತಾ ವ್ಯಾಸೇನಾಮಿತತೇಜಸಾ ।
ಭ್ರಮಮಾಣೇನ ಭಿಕ್ಷಾ ವೈ ನೈವ ಲಬ್ಧಾ ದ್ವಿಜೋತ್ತಮಾಃ ॥ ೨೫ ॥

ತತಃ ಕ್ರೋಧಾವೃತತನುರ್ನರಾಣಾಮಿಹ ವಾಸಿನಾಮ್ ।
ವಿಘ್ನಂ ಸೃಜಾಮಿ ಸರ್ವೇಷಾಂ ಯೇನ ಸಿದ್ಧಿರ್ವಿಹೀಯತೇ ॥ ೨೬ ॥

---

೨೩. ಆಗ ವಿಪ್ರರಾದ ಪೈಲ ಮುಂತಾದ ಶಿಷ್ಯಜನರು ಮಹಾತ್ಮನಾದ ವ್ಯಾಸ ಮಹರ್ಷಿಯನ್ನು ನಮಸ್ಕರಿಸಿ ಯಥೇಷ್ಟವಾಗಿ ಹೊರಟರು. ವ್ಯಾಸಮುನಿಯು ವಾರಾಣಸಿಯಲ್ಲೇ ನಿಯತವಾಗಿ ವಾಸಮಾಡಿದನು.

೨೪. ವ್ಯಾಸಮಹಾಮುನಿಯು ಶಾಂತನೂ, ಜಿತೇಂದ್ರಿಯನೂ ಆಗಿ ತ್ರಿಕಾಲದಲ್ಲಿ ಸ್ನಾನಮಾಡಿ ಪಿನಾಕಧಾರಿಯಾದ ಶಿವನನ್ನು ಪೂಜಿಸಿ ಭೈಕ್ಷದ ಆಹಾರವನ್ನು ಭುಂಜಿಸುತ್ತಾ ಪವಿತ್ರವಾದ ಅಂತಃಕರಣವುಳ್ಳವನಾಗಿ ಬ್ರಹ್ಮಚರ್ಯ ನಿಯಮದಲ್ಲಿ ಆಸಕ್ತನಾಗಿದ್ದನು.

೨೫. ದ್ವಿಜೋತ್ತಮರೇ! ಅಪಾರತೇಜಸ್ವಿಯಾದ, ಆ ವಾರಾಣಸಿಯಲ್ಲಿ ವಾಸಮಾಡುತ್ತಿದ್ದ ವ್ಯಾಸಮುನಿಯು ಒಂದು ಸಮಯದಲ್ಲಿ ಭಿಕ್ಷಾರ್ಥವಾಗಿ ಸಂಚಾರ ಮಾಡಿದರೂ ಭಿಕ್ಷೆಯು ದೊರಕಲಿಲ್ಲ.

೨೬. ಅನಂತರದಲ್ಲಿ ಕೋಪದಿಂದ ಆವರಿಸಲ್ಪಟ್ಟದೇಹವುಳ್ಳ ವ್ಯಾಸಮುನಿಯು ಇಲ್ಲಿ ವಾಸಮಾಡುವ ಎಲ್ಲಾ ಮಾನವರಿಗೆ ಇರುವ ಸಮೃದ್ಧಿಯನ್ನು ಹಾನಿಮಾಡುವಂತೆ ವಿಘ್ನವನ್ನು ಮಾಡುವೆನೆಂದು ಚಿಂತಿಸಿದನು.

ತತ್ಕ್ಷಣಾತ್ ಸಾ ಮಹಾದೇವೀ ಶಂಕರಾರ್ಧಶರೀರಿಣೀ ।
ಪ್ರಾದುರಾಸೀತ್ ಸ್ವಯಂ ಪ್ರೀತ್ಯಾ ವೇಷಂ ಕೃತ್ವಾ ತು ಮಾನುಷಮ್ ॥

ಭೋ ಭೋ ವ್ಯಾಸ ಮಹಾಬುದ್ಧೇ ಶಪ್ತವ್ಯಾ ನ ತ್ವಯಾ ಪುರೀ ।
ಗೃಹಾಣ ಭಿಕ್ಷಾಂ ಮತ್ತಸ್ತ್ವಮುಕ್ತ್ವೈವಂ ಪ್ರದದೌ ಶಿವಾ ॥ ೨೮ ॥

ಉವಾಚ ಚ ಮಹಾದೇವೀ ಕ್ರೋಧನಸ್ತ್ವಂ ಯತೋ ಮುನೇ ।
ಇಹ ಕ್ಷೇತ್ರೇ ನ ವಸ್ತವ್ಯಂ ಕೃತಘ್ನೋಽಸಿ ಯತಃ ಸದಾ ॥ ೨೯ ॥

ಏವಮುಕ್ತಃ ಸ ಭಗವಾನ್ ಧ್ಯಾನಾಜ್ಜ್ಞಾತ್ವಾ ಪರಾಂ ಶಿವಾಮ್ ।
ಉವಾಚ ಪ್ರಣತೋ ಭೂತ್ವಾ ಸ್ತುತ್ವಾ ಚ ಪ್ರವರೈಃ ಸ್ತವೈಃ ॥ ೩೦ ॥

---

೨೭. ಆ ಕ್ಷಣದಲ್ಲಿ ಶಂಕರನ ಅರ್ಧಾಂಗಿಯಾದ, ಮಹಾದೇವಿಯಾದ ಪಾರ್ವತಿಯು ಪ್ರೀತಿಯಿಂದ ತಾನೇ ಮಾನುಷವೇಷವನ್ನು ಧರಿಸಿ ವ್ಯಾಸಮುನಿಯ ಸಮ್ಮುಖದಲ್ಲಿ ಪ್ರಾದುರ್ಭವಿಸಿದಳು.

೨೮. ಮಹಾಜ್ಞಾನಿಯಾದ ವ್ಯಾಸಮುನಿಯೇ! ನಿನ್ನಿಂದ ಈ ನಗರವು ಶಪಿಸಲ್ಪಡಬಾರದು. ನನ್ನಿಂದ ನೀನು ಈ ಭಿಕ್ಷೆಯನ್ನು ತೆಗೆದುಕೋ, ಹೀಗೆಂದು ಹೇಳಿ ಪಾರ್ವತಿಯು ಭಿಕ್ಷೆಯನ್ನು ನೀಡಿದಳು.

೨೯. ಆಗ ಮಹಾದೇವಿಯು ವ್ಯಾಸಮುನಿಯನ್ನು ಕುರಿತು ಹೀಗೆ ಹೇಳಿದಳು:—ಮುನಿಯೇ! ನೀನು ಬಹಳ ಕೋಪಸ್ವಭಾವನಾಗಿರುವೆ. ಆದುದರಿಂದ ಯಾವಾಗಲೂ ಕೃತಘ್ನನಾದ ನೀನು ಈ ಕ್ಷೇತ್ರದಲ್ಲಿ ವಾಸಮಾಡಬಾರದು.

೩೦. ಹೀಗೆಂದು ದೇವಿಯಿಂದ ಹೇಳಲ್ಪಟ್ಟ ಭಗವಂತನಾದ ವ್ಯಾಸಮುನಿಯು ಧ್ಯಾನದೃಷ್ಟಿಯಿಂದ ಹಾಗೆ ಹೇಳಿದ ವ್ಯಕ್ತಿಯನ್ನು ಪಾರ್ವತೀದೇವಿಯೆಂದು ತಿಳಿದು ಉತ್ತಮವಾದ ಸ್ತೋತ್ರಗಳಿಂದ ಸ್ತುತಿಸಿ ನಮಸ್ಕಾರಮಾಡಿ ಹೀಗೆ ಹೇಳಿದನು.

ಚತುರ್ದಶ್ಯಾಮಥಾಷ್ಟಮ್ಯಾಂ ಪ್ರವೇಶಂ ದೇಹಿ ಶಾಂಕರಿ ।
ಏವಮುಕ್ತ್ವಾತ್ಯನುಜ್ಞಾಯ ದೇವೀ ಚಾಂತರಧೀಯತ ॥ ೩೧ ॥

ಏವಂ ಸ ಭಗವಾನ್ ವ್ಯಾಸೋ ಮಹಾಯೋಗೀ ಪುರಾತನಃ ।
ಜ್ಞಾತ್ವಾ ಕ್ಷೇತ್ರಗುಣಾನ್ ಸರ್ವಾನ್ ಸ್ಥಿತಸ್ತಸ್ಯಾಥ ಪಾರ್ಶ್ವತಃ ॥ ೩೨ ॥

ಏವಂ ವ್ಯಾಸಂ ಸ್ಥಿತಂ ಜ್ಞಾತ್ವಾ ಕ್ಷೇತ್ರಂ ಸೇವಂತಿ ಪಂಡಿತಾಃ ।
ತಸ್ಮಾತ್ ಸರ್ವಪ್ರಯತ್ನೇನ ವಾರಾಣಸ್ಯಾಂ ವಸೇನ್ನರಃ ॥ ೩೩ ॥

ಸೂತ ಉವಾಚ :—

ಯಃ ಪಠೇದವಿಮುಕ್ತಸ್ಯ ಮಾಹಾತ್ಮ್ಯಂ ಶೃಣುಯಾದಥ ।
ಶ್ರಾವಯೇದ್ವಾ ದ್ವಿಜಾನ್ ಶಾಂತಾನ್ ಸ ಯಾತಿ ಪರಮಾಂ ಗತಿಮ್ ॥

---

೩೧. ಶಂಕರನ ಸತಿಯೇ ! ನನಗೆ ಈ ಸ್ಥಳದಲ್ಲಿ ಚತುರ್ದಶೀ ಮತ್ತು ಅಷ್ಟಮೀ ತಿಥಿಗಳಲ್ಲಿ ಪ್ರವೇಶವನ್ನು ಕೊಡು ; ಎಂದು ಕೇಳಲು ದೇವಿಯು " ಹಾಗೆ ಆಗಲಿ " ಎಂದು ಅಂಗೀಕರಿಸಿ ಅಂತರ್ಧಾನವನ್ನು ಹೊಂದಿದಳು.

೩೨. ಈರೀತಿಯಾಗಿ ಷಡ್ಗುಣೈಶ್ವರ್ಯ ಸಂಪನ್ನನೂ, ಮಹಾಯೋಗಿಯೂ, ಪುರಾತನನೂ ಆದ ವ್ಯಾಸಮುನಿಯು ಸಮಸ್ತ ಕ್ಷೇತ್ರಗಳ ಗುಣಗಳನ್ನು ತಿಳಿದು ಕೊಂಡು ವಾರಾಣಸೀ ನಗರದ ಪಾರ್ಶ್ವದಲ್ಲಿ ವಾಸಮಾಡಿದನು.

೩೩. ಹೀಗೆ ವ್ಯಾಸಮುನಿಯು ಅಲ್ಲಿ ವಾಸಮಾಡಿರುವುದನ್ನು ತಿಳಿದು ಪಂಡಿತರು ಆ ಕ್ಷೇತ್ರವನ್ನು ಸೇವಿಸುತ್ತಾರೆ. ಆದುದರಿಂದ ಮಾನವನು ಸರ್ವ ಪ್ರಯತ್ನಗಳಿಂದಲಾದರೂ ವಾರಾಣಸೀ ಕ್ಷೇತ್ರದಲ್ಲಿ ವಾಸಮಾಡಬೇಕು.

೩೪. ಸೂತಮುನಿಯು ಹೀಗೆಂದು ಹೇಳಿದನು :— ಯಾವ ನರನು ಅವಿಮುಕ್ತಕ್ಷೇತ್ರದ ಮಾಹಾತ್ಮ್ಯೆಯನ್ನು ಸಾಕ್ಷಾತ್ತಾಗಿ ಶ್ರವಣ ಮಾಡುವನೊ ; ಅಥವಾ ಶಾಂತರಾದ ದ್ವಿಜರಿಂದ ಶ್ರವಣಮಾಡಿಸುವನೊ ; ಅವನು ಪರಮ ಸದ್ಗತಿಯನ್ನು ಹೊಂದುವನು.

ಶ್ರಾದ್ಧೇ ವಾ ದೈವಿಕೇ ಕಾರ್ಯೇ ರಾತ್ರಾವಹನಿ ವಾ ದ್ವಿಜಾಃ ।
ನದೀನಾಂ ಚೈವ ತೀರೇಷು ದೇವತಾಯತನೇಷು ಚ ॥ ೩೫ ॥

ಜ್ಞಾತ್ವಾ ಸಮಾಹಿತಮನಾಃ ಕಾಮಕ್ರೋಧವಿವರ್ಜಿತಃ ।
ಜಪೇದೀಶಂ ನಮಸ್ಕೃತ್ಯ ಸ ಯಾತಿ ಪರಮಾಂ ಗತಿವ್ ॥ ೩೬ ॥

ಇತಿ ಶ್ರೀ ಕೂರ್ಮಪುರಾಣೇ ಪಂಚತ್ರಿಂಶೋಽಧ್ಯಾಯಃ.

---

೩೫. ದ್ವಿಜರೆ! ಮತ್ತು ಈ ಮಾಹಾತ್ಮ್ಯವನ್ನು ಶ್ರಾದ್ಧಕರ್ಮ, ದೇವತಾ ಕಾರ್ಯ ಪ್ರಸಂಗಗಳಲ್ಲಿಯೂ ರಾತ್ರಿಕಾಲ, ಅಹಃಕಾಲ, ನದೀತೀರದೇಶ, ಅಥವಾ ದೇವಾಲಯ ಮುಂತಾದ ಕಾಲ ದೇಶಗಳಲ್ಲಿಯೂ ಜಪಿಸಬೇಕು.

೩೬. ಜಪಸಮಯದಲ್ಲಿ ಸಮಾಧಾನವುಳ್ಳ ಮಾನಸವುಳ್ಳವನೂ, ಕಾಮ-ಕ್ರೋಧಾದಿಗಳಿಂದ ವರ್ಜಿತನೂ ಆಗಿ ಪರಮೇಶ್ವರನನ್ನು ನಮಸ್ಕರಿಸಿ ಜಪಮಾಡುವ ಮಾನವನು ಪರಮಗತಿಯನ್ನು ಹೊಂದುವನು.

( ಕೂರ್ಮಪುರಾಣದಲ್ಲಿ ಮೂವತ್ತೈದನೆಯ ಅಧ್ಯಾಯವು ಸಮಾಪ್ತವು. )



ಶ್ರೀಃ

# ಕೂರ್ಮಪುರಾಣಂ

---

## ಷಟ್ತ್ರಿಂಶೋಽಧ್ಯಾಯಃ.

**ಋಷಯ ಊಚುಃ :—**

**ಮಾಹಾತ್ಮ್ಯಮವಿಮುಕ್ತಸ್ಯ ಯಥಾವತ್ಸಮುದೀರಿತಮ್ ।**
**ಇದಾನೀಂ ಚ ಪ್ರಯಾಗಸ್ಯ ಮಾಹಾತ್ಮ್ಯಂ ಬ್ರೂಹಿ ಸುವ್ರತ ॥ ೧ ॥**

**ಯಾನಿ ತೀರ್ಥಾನಿ ತತ್ರೈವ ವಿಶ್ರುತಾನಿ ಮಹಾಂತಿ ವೈ ।**
**ಇದಾನೀಂ ಕಥಯಾಸ್ಮಾಕಂ ಸೂತ ಸರ್ವಾರ್ಥವಿದ್ಭವಾನ್ ॥ ೨ ॥**

---

## ಮೂವತ್ತಾರನೆಯ ಅಧ್ಯಾಯವು

೧. ಋಷಿಗಳು ಹೀಗೆಂದರು :— ನಿಯಮವಂತನಾದ ಸೂತಮಹಾಮುನಿಯೆ! ನಿನ್ನಿಂದ ಅವಿಮುಕ್ತಕ್ಷೇತ್ರದ ಮಾಹಾತ್ಮ್ಯವು ತಾತ್ತ್ವಿಕವಾಗಿ ಉಪದೇಶಿಸಲ್ಪಟ್ಟಿತು. ಈಗ ಪ್ರಯಾಗ ಕ್ಷೇತ್ರದ ಮಹಿಮೆಯನ್ನು ವರ್ಣಿಸು.

೨. ಸೂತಮಹಾಮುನಿಯೆ ! ಸರ್ವಾರ್ಥಗಳನ್ನು ಅರಿತಿರುವ ನೀನು ಪ್ರಯಾಗಕ್ಷೇತ್ರದಲ್ಲಿರುವ ಪ್ರಸಿದ್ಧವಾದ ಮಹಾತೀರ್ಥಗಳನ್ನು ನಮಗೆ ಈಗ ಉಪದೇಶಿಸುವವನಾಗು.

ಸೂತ ಉವಾಚ :-

ಶೃಣುಧ್ವಮೃಷಯಃ ಸರ್ವೇ ವಿಸ್ತರೇಣ ಬ್ರವೀಮಿ ವಃ ।
ಪ್ರಯಾಗಸ್ಯ ಚ ಮಾಹಾತ್ಮ್ಯಂ ಯತ್ರ ದೇವಃ ಪಿತಾಮಹಃ ॥ ೩ ॥

ಮಾರ್ಕಂಡೇಯೇನ ಕಥಿತಂ ಕೌಂತೇಯಾಯ ಮಹಾತ್ಮನೇ ।
ಯಥಾ ಯುಧಿಷ್ಠಿರಾಯೈತತ್ತದ್ವಕ್ಷ್ಯೇ ಭವತಾಮಹಮ್ ॥ ४ ॥

ನಿಹತ್ಯ ಕೌರವಾನ್ ಸರ್ವಾನ್ ಭ್ರಾತೃಭಿಃ ಸಹ ಪಾರ್ಥಿವಃ ।
ಶೋಕೇನ ಮಹತಾವಿಷ್ಟೋ ಮುಮೋಹ ಸ ಯುಧಿಷ್ಠಿರಃ ॥ ೫ ॥

ಅಚಿರೇಣಾಥ ಕಾಲೇನ ಮಾರ್ಕಂಡೇಯೋ ಮಹಾತಪಾಃ ।
ಸಂಪ್ರಾಪ್ತೋ ಹಾಸ್ತಿನಪುರಂ ರಾಜದ್ವಾರೇ ಸ ತಿಷ್ಠತಿ ॥ ೬ ॥

---

೩. ಸೂತಮುನಿಯು ಇಂತೆಂದನು :— ಜಗತ್ತಿಗೆ ಪಿತಾಮಹನಾದ ಬ್ರಹ್ಮದೇವನು ವಾಸಮಾಡುತ್ತಿರುವ ಪ್ರಯಾಗ ಕ್ಷೇತ್ರದ ಮಾಹಾತ್ಮ್ಯವನ್ನು ನಿಮಗೆ ವಿಸ್ತಾರವಾಗಿ ಹೇಳುವೆನು ; ಮಹರ್ಷಿಗಳಾದ ನೀವೆಲ್ಲರೂ ಶ್ರವಣಮಾಡಿರಿ.

೪. ಹಿಂದೆ ಮಾರ್ಕಂಡೇಯ ಮಹಾಮುನಿಯಿಂದ ಮಹಾತ್ಮನೂ, ಕುಂತೀದೇವಿಯ ಪುತ್ರನೂ ಆದ ಯುಧಿಷ್ಠಿರನಿಗೆ ಉಪದೇಶಿಸಲ್ಪಟ್ಟಿರುವ ಈ ಪ್ರಯಾಗ ಕ್ಷೇತ್ರ ಮಾಹಾತ್ಮ್ಯವನ್ನು ನಾನು ನಿಮಗೆ ಹೇಳುತ್ತೇನೆ.

೫. ಆ ಯುಧಿಷ್ಠಿರ ಮಹಾರಾಜನು ತನ್ನ ಸಹೋದರರೊಡನೆ ಸಮಸ್ತ ಕೌರವರಾಜರನ್ನು ಸಂಹರಿಸಿ ಜ್ಞಾತಿವಧದ ಚಿಂತೆಯಿಂದ ಮಹಾಶೋಕದಿಂದ ಆವಿಷ್ಟನಾಗಿ ಮೋಹಗೊಂಡನು.

೬. ಆದಾಗಿ ಸ್ವಲ್ಪಕಾಲದಲ್ಲಿಯೆ ಮಹಾತಪಸ್ವಿಯಾದ ಮಾರ್ಕಂಡೇಯ ಮಹಾಮುನಿಯು ಆಕಸ್ಮಿಕವಾಗಿ ಹಸ್ತಿನಾವತೀ ನಗರಿಗೆ ಬಂದು ರಾಜಗೃಹವನ್ನು ಪ್ರವೇಶಿಸಲು ರಾಜಗೃಹದ್ವಾರದಲ್ಲಿ ನಿಂತುಕೊಂಡನು.

ದ್ವಾರಪಾಲೋಽಪಿ ತಂ ದೃಷ್ಟ್ವಾ ರಾಜ್ಞೇ ಕಥಿತವಾನ್ ದ್ರುತಮ್ ।
ಮಾರ್ಕಂಡೇಯೋ ದ್ರಷ್ಟುಮಿಚ್ಛಂಸ್ತ್ವಾಮಾಸ್ತೇ ದ್ವಾರ್ಯಸೌ ಮುನಿಃ॥

ತ್ವರಿತೋ ಧರ್ಮಪುತ್ರಸ್ತು ದ್ವಾರಮಭ್ಯೇತ್ಯ ಸತ್ವರಮ್ ।
ದ್ವಾರಮಭ್ಯಾಗತಸ್ಯೇಹ ಸ್ವಾಗತಂ ತೇ ಮಹಾಮುನೇ ॥ ೮ ॥

ಅದ್ಯ ಮೇ ಸಫಲಂ ಜನ್ಮ ಅದ್ಯ ಮೇ ತಾರಿತಂ ಕುಲಮ್ ।
ಅದ್ಯ ಮೇ ಪಿತರಸ್ತುಷ್ಟಾಸ್ತ್ವಯಿ ತುಷ್ಟೇ ಸದಾ ಮುನೇ ॥ ೯ ॥

ಸಿಹ್ಮಾಸನಮುಪಸ್ಥಾಪ್ಯ ಪಾದಶೌಚಾರ್ಚನಾದಿಭಿಃ ।
ಯುಧಿಷ್ಠಿರೋ ಮಹಾತ್ಮೇತಿ ಪೂಜಯಾಮಾಸ ತಂ ಮುನಿಮ್ ॥೧೦ ॥

---

೭. ಅಲ್ಲಿದ್ದ ದ್ವಾರಪಾಲಕನು ಮಾರ್ಕಂಡೆಯ ಮುನಿಯನ್ನು ನೋಡಿ ಬೇಗ ರಾಜನ ಒಳಗೆ ಹೋಗಿ " ಮಾರ್ಕಂಡೇಯ ಮಹಾಮುನಿಯು ನಿನ್ನನ್ನು ನೋಡಲು ಬಂದು ರಾಜದ್ವಾರದಲ್ಲಿ ನಿಂತುಕೊಂಡಿರುವನು " ಎಂದು ವಿಜ್ಞಾಪಿಸಿದನು.

೮. ಅದನ್ನು ಕೇಳಿ ಸಂಭ್ರಮಗೊಂಡ ಧರ್ಮಪುತ್ರನಾದ ಯುಧಿಷ್ಠಿರನು ವೇಗವಾಗಿ ದ್ವಾರದ ಬಳಿಗೆ ಬಂದು " ಮಹಾಮುನಿಯೆ ! ದ್ವಾರಭೂಮಿಗೆ ಬಂದಿರುವ ನಿನಗೆ ಸುಖಾಗಮನವಾಗಲಿ " ಎಂದು ನುಡಿದನು.

೯. ಮುನಿಯೆ ! ನೀನು ನನ್ನಲ್ಲಿ ಅನುಗ್ರಹವಿಟ್ಟು ಇಲ್ಲಿಗೆ ಬಂದು ಸದಾ ಸಂತುಷ್ಟನಾಗಿರುವುದರಿಂದ ಈಗ ನನ್ನ ಜನ್ಮವು ಸಫಲವಾಯಿತು ; ನನ್ನ ವಂಶವು ಈಗ ಸದ್ಗತಿಯನ್ನು ಹೊಂದಿಸಲ್ಪಟ್ಟಿತು ; ಮತ್ತು ಈಗ ನನ್ನ ಪಿತೃಗಣವು ಸಂತುಷ್ಟವಾಯಿತು.

೧೦. ಹೀಗೆಂದು ಹೇಳಿ ಯುಧಿಷ್ಠಿರನು ಅಭ್ಯಾಗತಮುನಿಯು ಮಹಾತ್ಮನೆಂದು ಅರಿತು ಅವನನ್ನು ಕರೆತಂದು ಸಿಹ್ಮಾಸನದಲ್ಲಿ ಕುಳ್ಳಿರಿಸಿ ಪಾದ್ಯಾದಿ ಅರ್ಚನೋಪಚಾರಗಳಿಂದ ಆ ಮುನಿಯನ್ನು ಪೂಜಿಸಿದನು.

ಮಾರ್ಕಂಡೇಯಸ್ತು ಸಂಪೃಷ್ಟಃ ಪ್ರೋವಾಚ ಸ ಯುಧಿಷ್ಠಿರಮ್ ।
ಕಿಮರ್ಥಂ ಮುಹ್ಯಸೇ ವಿದ್ವನ್ ಸರ್ವಂ ಜ್ಞಾತ್ವಾ ಸಮಾಗತಃ ॥ ೧೧ ॥

ತತೋ ಯುಧಿಷ್ಠಿರೋ ರಾಜಾ ಪ್ರಣಮ್ಯ ಶಿರಸಾಬ್ರವೀತ್ ।
ಕಥಯಸ್ವ ಸಮಾಸೇನ ಯೇನ ಮುಂಚಾಮಿ ಕಿಲ್ಬಿಷಮ್ ॥ ೧೨ ॥

ನಿಹತಾ ಬಹವೋ ಯುದ್ಧೇ ಪುಂಸೋ ನಿರಪರಾಧಿನಃ ।
ಅಸ್ಮಾಭಿಃ ಕೌರವೈಃ ಸಾರ್ಧಂ ಪ್ರಸಂಗಾನ್ಮುನಿಸತ್ತಮ ॥ ೧೩ ॥

ಯೇನ ಹಿಂಸಾಸಮುದ್ಭೂತಾಜ್ಜನ್ಮಾಂತರಕೃತಾದಪಿ ।
ಮುಚ್ಯೇಮ ಪಾತಕಾದದ್ಯ ತದ್ಭವಾನ್ ವಕ್ತುಮರ್ಹತಿ ॥ ೧೪ ॥

---

೧೧. ಆಗ ಯುಧಿಷ್ಠಿರನಿಂದ ಪ್ರಶ್ನಿಸಲ್ಪಟ್ಟ ಮಾರ್ಕಂಡೇಯ ಮುನಿಯು ಯುಧಿಷ್ಠಿರನನ್ನು ಕುರಿತು ಹೀಗೆಂದು ಹೇಳಿದನು :— ಜ್ಞಾನಿಯೆ ! ನೀನು ಏಕೆ ಮೋಹವನ್ನು ಹೊಂದಿರುವೆ ? ಇದೆಲ್ಲವನ್ನೂ ತಿಳಿದು ನಾನು ಇಲ್ಲಿಗೆ ಬಂದಿರುವೆನು.

೧೨. ತರುವಾಯ ಯುಧಿಷ್ಠಿರ ರಾಜನು ಮುನಿಗೆ ತಲೆಬಾಗಿ ನಮಸ್ಕರಿಸಿ ಕೇಳಿಕೊಂಡನು. ನಾನು ಯಾವ ಕರ್ಮದಿಂದ ಈ ಪಾಪಪುಂಜವನ್ನು ಕಳೆದು ಕೊಳ್ಳುವೆನೊ ; ಅದನ್ನು ಸಂಗ್ರಹವಾಗಿ ಹೇಳು.

೧೩. ಮುನಿಪುಂಗವನೇ ! ಯುದ್ಧಪ್ರಸಂಗವುಂಟಾಗಿ ಕೌರವರಾಜರೊಡನೆ ಅನೇಕ ನಿರಪರಾಧಿಗಳಾದ ಮನುಷ್ಯರು ನಮ್ಮಿಂದ ರಣರಂಗದಲ್ಲಿ ಕೊಲ್ಲಲ್ಪಟ್ಟಿರುವರು.

೧೪. ಯಾವ ಸತ್ಕರ್ಮವು ಈ ಹಿಂಸೆಯಿಂದ ಉಂಟಾದ ಮತ್ತು ಜನ್ಮಾಂತರಗಳಲ್ಲಿ ಮಾಡಿದ ದುಷ್ಕರ್ಮಗಳಿಂದ ಉಂಟಾದ ಪಾತಕದಿಂದ ನಮ್ಮನ್ನು ಉದ್ಧರಿಸುವುದೊ, ಅದನ್ನು ನೀನು ಹೇಳುವವನಾಗು.

ಮಾರ್ಕಂಡೇಯ ಉವಾಚ :—

ಶೃಣು ರಾಜನ್ಮಹಾಭಾಗ ಯನ್ಮಾಂ ಪೃಚ್ಛಸಿ ಭಾರತ ।
ಪ್ರಯಾಗಗಮನಂ ಶ್ರೇಷ್ಠಂ ನರಾಣಾಂ ಪಾಪನಾಶನಮ್ ॥ ೧೫ ॥

ತತ್ರ ದೇವೋ ಮಹಾದೇವೋ ರುದ್ರೋಽವಾತ್ಸೀನ್ನರೇಶ್ವರ ।
ಸಮಾಸ್ತೇ ಭಗವಾನ್ ಬ್ರಹ್ಮಾ ಸ್ವಯಂಭೂಃ ಸಹ ದೈವತೈಃ ॥ ೧೬ ॥

ಯುಧಿಷ್ಠಿರ ಉವಾಚ :—

ಭಗವನ್ ಶ್ರೋತುಮಿಚ್ಛಾಮಿ ಪ್ರಯಾಗಗಮನೇ ಫಲಮ್ ।
ಮೃತಾನಾಂ ಕಾ ಗತಿಸ್ತತ್ರ ಸ್ನಾತಾನಾಂ ಚೈವ ಕಿಂ ಫಲಮ್ ॥ ೧೭ ॥

ಯೇ ವಸಂತಿ ಪ್ರಯಾಗೇ ತು ಬ್ರೂಹಿ ತೇಷಾಂ ತು ಕಿಂ ಫಲಮ್ ।
ಭವತೋ ವಿದಿತಂ ಹ್ಯೇತತ್ತನ್ಮೇ ಬ್ರೂಹಿ ನಮೋಽಸ್ತು ತೇ ॥ ೧೮ ॥

---

೧೫. ಮಾರ್ಕಂಡೇಯ ಮುನಿಯು ಇಂತೆಂದನು :—ಮಹಾಭಾಗ್ಯಶಾಲಿಯೂ ಭರತವಂಶಸಂಭೂತನೂ ಆದ ರಾಜನೆ ! ನೀನು ಯಾವ ವಿಷಯವನ್ನು ಕುರಿತು ನನ್ನನ್ನು ಪ್ರಶ್ನಿಸುತ್ತಿದ್ದೀಯೊ ; ಅದನ್ನು ಕೇಳು. ಶ್ರೇಷ್ಠವಾದ ಪ್ರಯಾಗ ಕ್ಷೇತ್ರ ಯಾತ್ರೆಯು ಮಾನವರಿಗೆ ಸಮಸ್ತ ಪಾಪಗಳನ್ನು ಶೋಧನಮಾಡುವುದು.

೧೬. ನೃಪತಿಯೆ ! ಆ ಕ್ಷೇತ್ರದಲ್ಲಿ ಮಹಾದೇವನೂ, ಸ್ವಾಮಿಯೂ ಆದ ರುದ್ರಮೂರ್ತಿಯು ವಾಸಮಾಡಿರುವನು. ಸ್ವಯಂಭುಸ್ವರೂಪನೂ, ಪೂಜ್ಯನೂ ಆದ ಬ್ರಹ್ಮದೇವನು ಅನೇಕ ದೇವತೆಗಳೊಂದಿಗೆ ಅಲ್ಲಿ ವಾಸಮಾಡುತ್ತಾನೆ.

೧೭. ಯುಧಿಷ್ಠಿರರಾಜನು ಹೀಗೆಂದು ಕೇಳಿಕೊಂಡನು :— ಪೂಜ್ಯನಾದ ಮುನಿಯೆ ! ಪ್ರಯಾಗ ಕ್ಷೇತ್ರದ ಯಾತ್ರೆಯಿಂದ ಲಭಿಸುವ ಫಲವನ್ನು ಕೇಳಲು ಇಷ್ಟವುಳ್ಳವನಾಗಿದ್ದೇನೆ. ಆ ಕ್ಷೇತ್ರದಲ್ಲಿ ಮರಣಹೊಂದಿದವರಿಗೆ ಯಾವಗತಿಯು ದೊರಕುವುದು ? ಸ್ನಾನದಿಂದ ಲಭಿಸುವ ಫಲವೇನು ?

೧೮. ಪ್ರಯಾಗದಲ್ಲಿ ಯಾರು ವಾಸಮಾಡುವರೊ ಅವರಿಗೆ ಆ ಕ್ಷೇತ್ರವಾಸದಿಂದ ಲಭಿಸುವ ಫಲವಾವುದು ? ಇದನ್ನು ಹೇಳು. ಇದೆಲ್ಲವೂ ಸರ್ವಜ್ಞನಾದ ನಿನಗೆ ವಿದಿತವಾಗಿರುವುದು. ಇದನ್ನು ನನಗೆ ಹೇಳು, ನಿನಗೆ ನಮಸ್ಕರಿಸುವೆನು.

ಮಾರ್ಕಂಡೇಯ ಉವಾಚ :—

ಕಥಯಿಷ್ಯಾಮಿ ತೇ ವತ್ಸ ಪ್ರಯಾಗಸ್ನಾನಜಂ ಫಲಮ್
ಪುರಾ ಮಹರ್ಷಿಭಿಃ ಸಮ್ಯಕ್ ಕಥ್ಯಮಾನಂ ಮಯಾ ಶ್ರುತಮ್ ॥ ೧೯ ॥

ಏತತ್ ಪ್ರಜಾಪತೇಃ ಕ್ಷೇತ್ರಂ ತ್ರಿಷು ಲೋಕೇಷು ವಿಶ್ರುತಮ್ ।
ಅತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ॥ ೨೦ ॥

ತತ್ರ ಬ್ರಹ್ಮಾದಯೋ ದೇವಾ ರಕ್ಷಾಂ ಕುರ್ವಂತಿ ಸಂಗತಾಃ ।
ಬಹೂನ್ಯನ್ಯಾನಿ ತೀರ್ಥಾನಿ ಸರ್ವಪಾಪಾಪಹಾನಿ ತು ॥ ೨೧ ॥

ಕಥಿತುಂ ನೇಹ ಶಕ್ನೋಮಿ ಬಹುವರ್ಷಶತೈರಪಿ ।
ಸಂಕ್ಷೇಪೇಣ ಪ್ರವಕ್ಷ್ಯಾಮಿ ಪ್ರಯಾಗಸ್ಯೇಹ ಕೀರ್ತನಮ್ ॥ ೨೨ ॥

---

೧೯. ಮಾರ್ಕಂಡೇಯ ಮುನಿಯು ಇಂತೆಂದನು :—ವತ್ಸನೆ ! ಪ್ರಯಾಗ ತೀರ್ಥದಲ್ಲಿ ಸ್ನಾನಾಚರಣೆಯಿಂದ ಉಂಟಾಗುವ ಮಹಾಫಲವನ್ನು ಹೇಳುವೆನು. ಪೂರ್ವದಲ್ಲಿ ಮಹರ್ಷಿಗಳು ವರ್ಣಿಸಿದ ಈ ಸ್ನಾನಫಲವು ನನ್ನಿಂದ ಚೆನ್ನಾಗಿ ಶ್ರವಣ ಮಾಡಲ್ಪಟ್ಟಿದೆ.

೨೦. ಈ ಕ್ಷೇತ್ರವು ಪ್ರಜಾಪತಿಯಾದ ಬ್ರಹ್ಮದೇವನ ಕ್ಷೇತ್ರವೆಂದು ಮೂರು ಲೋಕಗಳಲ್ಲಿ ಪ್ರಖ್ಯಾತವಾಗಿರುವುದು. ಇಲ್ಲಿ ಸ್ನಾನಮಾಡಿದ ಸುಕೃತಿಗಳು ಸ್ವರ್ಗ ಲೋಕಕ್ಕೆ ಹೋಗುತ್ತಾರೆ. ಇಲ್ಲಿ ಮೃತರಾದ ಮಾನವರು ಪುನರ್ಜನ್ಮಶೂನ್ಯ ರಾಗುತ್ತಾರೆ.

೨೧. ಆ ಕ್ಷೇತ್ರದಲ್ಲಿ ಬ್ರಹ್ಮಾದಿ ದೇವತೆಗಳು ಸನ್ನಿಹಿತರಾಗಿ ಮಾನವರಿಗೆ ರಕ್ಷೆಯನ್ನು ಮಾಡುವರು. ಅಲ್ಲಿ ಸರ್ವ ಪಾತಕಗಳನ್ನು ನಾಶಮಾಡುವ ಇತರ ಅನೇಕ ತೀರ್ಥಗಳು ಇರುವುವು.

೨೨. ಪ್ರಯಾಗ ಕ್ಷೇತ್ರದ ಮಹಿಮೆಯನ್ನು ನೂರಾರು ವರ್ಷಗಳಿಂದಲೂ ಪೂರ್ತಿಯಾಗಿ ಹೇಳಲು ನಾನು ಶಕ್ತನಾಗಿಲ್ಲ. ಆದರೂ ಸಂಕ್ಷೇಪವಾಗಿ ಪ್ರಯಾಗ ಕ್ಷೇತ್ರದ ಕೀರ್ತನವನ್ನು ಮಾಡುತ್ತೇನೆ.

ಷಷ್ಟಿರ್ಧನುಃಸಹಸ್ರಾಣಿ ತಾನಿ ರಕ್ಷಂತಿ ಜಾಹ್ನವೀಮ್ ।
ಯಮುನಾಂ ರಕ್ಷತಿ ಸದಾ ಸವಿತಾ ಸಪ್ತವಾಹನಃ ॥ ೨೩ ॥

ಪ್ರಯಾಗೇ ತು ವಿಶೇಷೇಣ ಸ್ವಯಂ ವಸತಿ ವಾಸವಃ ।
ಮಂಡಲಂ ರಕ್ಷತಿ ಹರಿಃ ಸರ್ವದೇವೈಶ್ಚ ಸಮ್ಮಿತಮ್ ॥ ೨೪ ॥

ನ್ಯಗ್ರೋಧಂ ರಕ್ಷತೇ ನಿತ್ಯಂ ಶೂಲಪಾಣಿರ್ಮಹೇಶ್ವರಃ ।
ಸ್ಥಾನಂ ರಕ್ಷಂತಿ ವೈ ದೇವಾಃ ಸರ್ವಪಾಪಹರಂ ಶುಭಮ್ ॥ ೨೫ ॥

ಸ್ವಕರ್ಮಣಾ ವೃತಾ ಲೋಕಾ ನೈವ ಗಚ್ಛಂತಿ ತತ್ಪದಮ್ ।
ಸ್ವಲ್ಪಮಲ್ಪತರಂ ಪಾಪಂ ಯಸ್ಯ ಚಾಸ್ತಿ ನರಾಧಿಪ ॥ ೨೬ ॥

---

೨೩. ಅರವತ್ತು ಸಹಸ್ರಸಂಖ್ಯೆಯ ಧನು ಎಂಬ ಪರಿಮಾಣಗಳು ಜಹ್ನು ಮುನಿಯ ಪುತ್ರಿಯಾದ ಗಂಗಾನದಿಯನ್ನು ಆವರಿಸಿ ರಕ್ಷಿಸುತ್ತಿವೆ. ಸಪ್ತಾಶ್ವಗಳ ವಾಹನವುಳ್ಳ ಸೂರ್ಯನು ಸರ್ವಕಾಲಗಳಲ್ಲಿಯೂ ಯಮುನಾ ನದಿಯನ್ನು ರಕ್ಷಿಸುತ್ತಾನೆ.

೨೪. ಪ್ರಯಾಗ ಕ್ಷೇತ್ರದಲ್ಲಿ ಇಂದ್ರನು ತಾನಾಗಿ ವಿಶೇಷವಾಗಿ ವಾಸಮಾಡುತ್ತಲಿರುವನು. ಸಮಸ್ತದೇವತಾವರ್ಗದಿಂದ ಕೂಡಿದ ಪ್ರಯಾಗ ಕ್ಷೇತ್ರಮಂಡಲವನ್ನು ಹರಿಯು ರಕ್ಷಿಸುತ್ತಾನೆ.

೨೫. ತ್ರಿಶೂಲಧಾರಿಯಾದ ಮಹೇಶ್ವರನು ಇಲ್ಲಿರುವ ನ್ಯಗ್ರೋಧಸ್ಥಾನವನ್ನು ನಿತ್ಯದಲ್ಲಿಯೂ ರಕ್ಷಿಸುತ್ತಾನೆ. ದೇವತೆಗಳು ಸರ್ವಪಾಪಹರವಾದ ಮತ್ತು ಶುಭಕರವಾದ ಸ್ಥಾನವನ್ನು ರಕ್ಷಿಸುತ್ತಾರೆ.

೨೬. ಜನಗಳು ಸ್ವಕರ್ಮಜಾಲಕ್ಕೆ ವಶರಾಗಿರುವುದರಿಂದ ಆ ಪರಮ ಪದಕ್ಕೆ ಹೋಗುವುದಿಲ್ಲ. ನೃಪತಿಯೇ! ಮಾನವನಿಗೆ ಅಲ್ಪಸ್ವಲ್ಪವಾಗಿ ಯಾವುದಾದರೂ ಪಾಪಕರ್ಮದ ಲೇಶವು ಇರಬಹುದು.

ಪ್ರಯಾಗಂ ಸ್ಮರಮಾಣಸ್ಯ ಸರ್ವಮಾಯಾತಿ ಸಂಕ್ಷಯಮ್ ।
ದರ್ಶನಾತ್ತಸ್ಯ ತೀರ್ಥಸ್ಯ ನಾಮಸಂಕೀರ್ತನಾದಪಿ ॥ ೨೭ ॥

ಮೃತ್ತಿಕಾಲಂಭನಾದ್ವಾಪಿ ನರಃ ಪಾಪಾತ್ಪ್ರಮುಚ್ಯತೇ ।
ಪಂಚಕುಂಡಾನಿ ರಾಜೇಂದ್ರ ಯೇಷಾಂ ಮಧ್ಯೇ ತು ಜಾಹ್ನವೀ ॥೨೮॥

ಪ್ರಯಾಗಂ ವಿಶತಃ ಪುಂಸಃ ಪಾಪಂ ನಶ್ಯತಿ ತತ್ಕ್ಷಣಾತ್ ।
ಯೋಜನಾನಾಂ ಸಹಸ್ರೇಷು ಗಂಗಾಂ ಸ್ಮರತಿ ಯೋ ನರಃ ॥ ೨೯ ॥

ಅಪಿ ದುಷ್ಕೃತಕರ್ಮಾಸೌ ಲಭತೇ ಪರಮಾಂ ಗತಿಮ್ ।
ಕೀರ್ತನಾನ್ಮುಚ್ಯತೇ ಪಾಪಾದ್ದೃಷ್ಟ್ವಾ ಭದ್ರಾಣಿ ಪಶ್ಯತಿ ॥ ೩೦ ॥

---

೨೭. ಆದರೆ ಪ್ರಯಾಗವನ್ನು ಸ್ಮರಣಮಾಡಿದ ಮಾತ್ರದಿಂದ ಸಮಸ್ತ ಪಾಪವು ಕ್ಷಯಹೊಂದುವುದು. ಪ್ರಯಾಗತೀರ್ಥದ ದರ್ಶನ ಅಥವಾ ನಾಮ ಸಂಕೀರ್ತನಗಳು ಪಾಪಭಂಜಕಗಳಾಗಿರುವುವು.

೨೮. ಅಥವಾ ಕ್ಷೇತ್ರದ ಮೃತ್ತಿಕಾಸ್ಪರ್ಶಮಾತ್ರದಿಂದಲೂ ಮಾನವನು ಪಾಪದಿಂದ ಮುಕ್ತನಾಗುತ್ತಾನೆ. ರಾಜೇಂದ್ರನೆ ! ಆ ಕ್ಷೇತ್ರಗಳಲ್ಲಿ ಪಂಚಕುಂಡಗಳೂ ಅವುಗಳ ಮಧ್ಯದಲ್ಲಿ ಜಾಹ್ನವೀನದಿಯೂ ಪ್ರಸಿದ್ಧವಾಗಿವೆ.

೨೯. ಪ್ರಯಾಗ ಕ್ಷೇತ್ರವನ್ನು ಪ್ರವೇಶಿಸಿದ ಮಾನವನ ಸಮಸ್ತ ಪಾತಕಗಳು ಲಯಹೊಂದುವುವು. ಸಹಸ್ರಾರು ಯೋಜನಗಳ ದೂರದಲ್ಲಿರುವ ಮಾನವನು ಗಂಗಾನದಿಯನ್ನು ಸ್ಮರಣಮಾಡಬೇಕು.

೩೦. ಗಂಗಾಸ್ಮರಣಮಾತ್ರದಿಂದ ಮಹಾಪಾತಕಿಯು ಕೂಡ ಪರಮಗತಿಯನ್ನು ಹೊಂದುತ್ತಾನೆ. ಗಂಗಾನಾಮಕೀರ್ತನದಿಂದ ಪಾಪನಿರ್ಮುಕ್ತನಾಗುತ್ತಾನೆ. ಮತ್ತು ಗಂಗಾದರ್ಶನದಿಂದ ಸನ್ಮಂಗಳಗಳನ್ನು ನೋಡುತ್ತಾನೆ.

ತಥೋಪಸ್ಪೃಶ್ಯ ರಾಜೇಂದ್ರ ಸುರಲೋಕೇ ಮಹೀಯತೇ ।
ವ್ಯಾಧಿತೋ ಯದಿ ವಾ ದೀನಃ ಕ್ರುದ್ಧೋ ವಾಪಿ ಭವೇನ್ನರಃ ॥ ೩೧ ॥

ಪಿತೃಣಾಂ ತಾರಕಂ ಚೈವ ಸರ್ವಪಾಪಪ್ರಣಾಶನಮ್ ।
ಯೈಃ ಪ್ರಯಾಗೇ ಕೃತೋ ವಾಸ ಉತ್ತೀರ್ಣೋ ಭವಸಾಗರಃ॥ ೩೨ ॥

ಗಂಗಾಯಮುನಮಾಸಾದ್ಯ ತ್ಯಜೇತ್ಪ್ರಾಣಾನ್ ಪ್ರಯತ್ನತಃ ।
ಈಪ್ಸಿತಾನ್ ಲಭತೇ ಕಾಮಾನ್ ವದಂತಿ ಮುನಿಪುಂಗವಾಃ ॥ ೩೩ ॥

ದೀಪ್ತಕಾಂಚನವರ್ಣಾಭೈರ್ವಿಮಾನೈರ್ಭಾನುವರ್ಣಿಭಿಃ ।
ಸರ್ವರತ್ನಮಯೈರ್ದಿವ್ಯೈರ್ನಾನಾಧ್ವಜಸಮಾಕುಲೈಃ ॥ ೩೪ ॥

---

೩೧. ರಾಜೇಂದ್ರನೆ ! ವ್ಯಾಧಿಗ್ರಸ್ತ ದೀನ, ಅಥವಾ ಕುಪಿತನಾದ ನರನು ಗಂಗಾ ತೀರ್ಥದಲ್ಲಿ ಸ್ನಾನಾಚಮನಗಳನ್ನು ಮಾಡುವುದರಿಂದ ದೇವಲೋಕದಲ್ಲಿ ಪೂಜ್ಯನಾಗುವನು.

೩೨. ಗಂಗಾತೀರ್ಥಸ್ನಾನವು ಪಿತೃಗಳಿಗೆ ದುರ್ಗತಿಯಿಂದ ತಾರಕವೂ, ಸರ್ವಪಾಪನಾಶಕವೂ ಆಗಿದೆ. ಪ್ರಯಾಗ ಕ್ಷೇತ್ರದಲ್ಲಿ ವಾಸಮಾಡುವ ಜನರಿಂದ ಸಂಸಾರ ಸಾಗರವು ದಾಟಲ್ಪಡುವುದು.

೩೩. ಗಂಗಾ ಯಮುನಾ ಸಂಗಮ ಕ್ಷೇತ್ರವನ್ನು ಹೊಂದಿ ಪ್ರಯತ್ನ ಪೂರ್ವಕವಾಗಿ ಪ್ರಾಣಗಳನ್ನು ತ್ಯಜಿಸಬೇಕು. ಅಂತಹ ದುರ್ಲಭ ಮರಣದಿಂದ ಇಷ್ಟ ಕಾಮಗಳನ್ನು ಹೊಂದುವನು ; ಎಂದು ಮುನಿಪುಂಗವರು ಹೇಳುತ್ತಾರೆ.

೩೪. ಅಂತಹ ಸುಕೃತಿಯು ತಪಿಸಿದ ಸುವರ್ಣದಂತೆ ಕಾಂತಿಯುಳ್ಳ, ಸೂರ್ಯ ಬಿಂಬಗಳಂತೆ ಹೊಳೆಯುವ, ಸಮಸ್ತ ರತ್ನಗಳಿಂದ ಖಚಿತವಾದ, ಮತ್ತು ನಾನಾಧ್ವಜ ಪತಾಕೆಗಳಿಂದ ಅಲಂಕರಿಸಲ್ಪಟ್ಟ ವಿಮಾನಗಳಿಂದ ಭೋಗವನ್ನು ಅನುಭವಿಸುವನು.

ವರಾಂಗನಾಸಮಾಕೀರ್ಣೈರ್ಮೋದತೇ ಶುಭಲಕ್ಷಣಃ ।
ಗೀತವಾದಿತ್ರನಿರ್ಘೋಷೈಃ ಪ್ರಸುಪ್ತಃ ಪ್ರತಿಬುಧ್ಯತೇ ॥ ೩೫ ॥

ಯಾವನ್ನ ಸ್ಮರತೇ ಜನ್ಮ ತಾವತ್ ಸ್ವರ್ಗೇ ಮಹೀಯತೇ ।
ತಸ್ಮಾತ್ ಸ್ವರ್ಗಾತ್ ಪರಿಭ್ರಷ್ಟಃ ಕ್ಷೀಣಕರ್ಮಾ ನರೋತ್ತಮಃ ॥ ೩೬ ॥

ಹಿರಣ್ಯರತ್ನಸಂಪೂರ್ಣೇ ಸಮೃದ್ಧೇ ಜಾಯತೇ ಕುಲೇ ।
ತದೇವ ಸ್ಮರತೇ ತೀರ್ಥಂ ಸ್ಮರಣಾತ್ತತ್ರ ಗಚ್ಛತಿ ॥ ೩೭ ॥

ದೇಶೇ ವಾ ಯದಿ ವಾರಣ್ಯೇ ವಿದೇಶೇ ಯದಿ ವಾ ಗೃಹೇ ।
ಪ್ರಯಾಗಂ ಸ್ಮರಮಾಣಸ್ತು ಯಸ್ತು ಪ್ರಾಣಾನ್ ಪರಿತ್ಯಜೇತ್ ॥ ೩೮ ॥

---

೩೫. ಮತ್ತು ಉತ್ತಮಾಂಗನೆಯರಿಂದ ಕೂಡಿ ಶುಭಲಕ್ಷಣಗಳುಳ್ಳವನಾಗಿ ಸಂತೋಷಿಸುವನು. ನಿದ್ರೆ ಹೊಂದಿದವನು ಗೀತ-ವಾದ್ಯಾದಿಧ್ವನಿಗಳಿಂದ ಪ್ರಬೋಧವನ್ನು ಹೊಂದುವನು.

೩೬. ಮತ್ತು ಸುಖಭೋಗಿಯು ಮತ್ತೆ ಜನ್ಮವನ್ನು ಸ್ಮರಿಸಿಕೊಳ್ಳುವವರೆಗೆ ಸ್ವರ್ಗಲೋಕದಲ್ಲಿ ಪೂಜ್ಯನಾಗಿರುವನು. ಆ ನರೋತ್ತಮನು ತನ್ನ ಸುಕೃತವು ಕ್ಷಯಿಸಿಹೋಗಲು ಸ್ವರ್ಗಲೋಕದಿಂದ ಭ್ರಷ್ಟನಾಗುವನು.

೩೭. ಮತ್ತು ಸುವರ್ಣ-ರತ್ನ ಮುಂತಾದ ಸಮೃದ್ಧಿಯಿಂದ ಕೂಡಿದ ವಂಶದಲ್ಲಿ ಜನಿಸುವನು. ಆಗ ಜನ್ಮಾಂತರವಾಸನೆಯಿಂದ ಆ ತೀರ್ಥವನ್ನು ಸ್ಮರಿಸಿಕೊಂಡು ಅಲ್ಲಿಗೆ ಹೋಗುತ್ತಾನೆ.

೩೮. ಸ್ವದೇಶ, ಅರಣ್ಯ, ವಿದೇಶ ಅಥವಾ ಸ್ವಗೃಹ ಮುಂತಾದ ಯಾವುದೊಂದು ಅನಿರ್ದಿಷ್ಟಸ್ಥಳದಲ್ಲಿಯೂ ಪ್ರಯಾಗವನ್ನು ಸ್ಮರಿಸುತ್ತ ಪ್ರಾಣತ್ಯಾಗ ಮಾಡುವುದು ಸದ್ಗತಿದಾಯಕವಾಗುವುದು.

ಬ್ರಹ್ಮಲೋಕಮವಾಪ್ನೋತಿ ವದಂತಿ ಮುನಿಪುಂಗವಾಃ ।
ಸರ್ವಕಾಮಫಲಾ ವೃಕ್ಷಾ ಮಹೀ ಯತ್ರ ಹಿರಣ್ಮಯೀ ॥ ೩೯ ॥

ಋಷಯೋ ಮುನಯಃ ಸಿದ್ಧಾಸ್ತತ್ರ ಲೋಕೇ ಸ ಗಚ್ಛತಿ ।
ಸ್ತ್ರೀಸಹಸ್ರಾಕುಲೇ ರಮ್ಯೇ ಮಂದಾಕಿನ್ಯಾಸ್ತಟೇ ಶುಭೇ ॥ ೪೦ ॥

ಮೋದತೇ ಮುನಿಭಿಃ ಸಾರ್ಧಂ ಸ್ವಕೃತೇನೇಹ ಕರ್ಮಣಾ ।
ಸಿದ್ಧಚಾರಣಗಂಧರ್ವೈಃ ಪೂಜ್ಯತೇ ದೇವದಾನವೈಃ ॥ ೪೧ ॥

ತತಃ ಸ್ವರ್ಗಾತ್ ಪರಿಭ್ರಷ್ಟೋ ಜಂಬುದ್ವೀಪಪತಿರ್ಭವೇತ್ ।
ತತಃ ಶುಭಾನಿ ಕರ್ಮಾಣಿ ಚಿಂತಯಾನಃ ಪುನಃ ಪುನಃ ॥ ೪೨ ॥

---

೩೯. ಮರಣಕಾಲದಲ್ಲಿ ಪ್ರಯಾಗಸ್ಮರಣದಿಂದ ಬ್ರಹ್ಮಲೋಕಪ್ರಾಪ್ತಿಯು ಉಂಟಾಗುವುದೆಂದು ಮುನಿಪುಂಗವರು ಹೇಳುವರು. ಮತ್ತು ಆ ಸುಕೃತಿಯ ಭೋಗ ಭೂಮಿಯು ಸುವರ್ಣಮಯವೂ, ಸರ್ವಕಾಮ ಫಲಗಳನ್ನು ಕೊಡುವ ವೃಕ್ಷಗಳಿಂದ ಪೂರ್ಣವೂ ಆಗಿರುವುದು.

೪೦. ಅನೇಕ ಋಷಿ, ಮುನಿ, ಮತ್ತು ಸಿದ್ಧ ಜನರು ಇರುವ ಲೋಕಕ್ಕೆ ಹೋಗುವನು. ಹಾಗು ಸಹಸ್ರಾರು ಸ್ತ್ರೀಯರಿಂದ ವ್ಯಾಪ್ತವೂ ಶುಭಕರವೂ ರಮ್ಯವೂ ಆದ ಮಂದಾಕಿನೀ ನದೀತೀರದಲ್ಲಿ ಸುಖವನ್ನು ಅನುಭವಿಸುವನು.

೪೧. ತಾನು ಗಳಿಸಿದ ಪುಣ್ಯಕರ್ಮನಿಮಿತ್ತದಿಂದ ಮುನಿಗಳೊಡನೆ ಸುಖ ಸಂತೋಷಗಳನ್ನು ಅನುಭವಿಸುವನು. ಹಾಗು ಸಿದ್ಧ-ಚಾರಣ-ಗಂಧರ್ವ ದೇವದಾನವ ರಿಂದ ಪೂಜಿಸಲ್ಪಡುವನು.

೪೨. ತರುವಾಯ ಸ್ವರ್ಗಲೋಕದಿಂದ ಭ್ರಷ್ಟನಾಗಿ ಭೂಮಿಯಲ್ಲಿ ಜಂಬೂ ದ್ವೀಪಕ್ಕೆ ಪತಿಯಾಗುವನು, ಅಲ್ಲಿ ಮತ್ತೆ ಮತ್ತೆ ಶುಭಕರ್ಮಗಳನ್ನು ಕರ್ತವ್ಯವಾಗಿ ಚಿಂತಿಸುವನು.

ಗುಣವಾನ್ ವೃತ್ತಸಂಪನ್ನೋ ಭವತೀತ್ಯನುಶುಶ್ರುಮ ।
ಕರ್ಮಣಾ ಮನಸಾ ವಾಚಾ ಸತ್ಯೇ ಧರ್ಮೇ ಪ್ರತಿಷ್ಠಿತಃ ॥ ೪೩ ॥

ಗಂಗಾಯಮುನಯೋರ್ಮಧ್ಯೇ ಯಸ್ತು ಗ್ರಾಸಂ ಪ್ರಯಚ್ಛತಿ ।
ಸುವರ್ಣಮಥ ಮುಕ್ತಾಂ ವಾ ತಥೈವಾನ್ಯತ್ಪರಿಗ್ರಹಮ್ ॥ ೪೪ ॥

ಸ್ವಕಾರ್ಯೇ ಪಿತೃಕಾರ್ಯೇ ವಾ ತೀರ್ಥೇ ಯೋಽಭ್ಯರ್ಚಯೇನ್ನರಃ ।
ನಿಷ್ಫಲಂ ತಸ್ಯ ತತ್ತೀರ್ಥಂ ಯಾವತ್ತತ್ಫಲಮಶ್ನುತೇ ॥ ೪೫ ॥

ಅತಸ್ತೀರ್ಥೇ ನ ಗೃಹ್ಣೀಯಾತ್ಪುಣ್ಯೇಷ್ವಾಯತನೇಷು ಚ ।
ನಿಮಿತ್ತೇಷು ಚ ಸರ್ವೇಷು ಅಪ್ರಮತ್ತೋ ದ್ವಿಜೋ ಭವೇತ್ ॥ ೪೬ ॥

---

೪೩. ಮತ್ತು ಸದ್ಗುಣವಂತನೂ ಸದಾಚಾರ ಸಂಪನ್ನನೂ ಆಗುವನೆಂದು ಮುನಿ ವಚನವನ್ನು ನಾವು ಶ್ರವಣಮಾಡಿದ್ದೇವೆ. ಮತ್ತು ಅವನು ಕರ್ಮ-ಮಾನಸ-ವಚನಗಳಿಂದ ಸತ್ಯಮಾರ್ಗದಲ್ಲಿ ಪ್ರತಿಷ್ಠೆಯನ್ನು ಹೊಂದುವನು.

೪೪. ಇಂತಹ ಗಂಗಾ-ಯಮುನಾ ನದಿಗಳ ಮಧ್ಯದಲ್ಲಿ ಒಂದು ಅನ್ನ ಗ್ರಾಸ, ಸುವರ್ಣ, ಮುಕ್ತಾಮಣಿ ಅಥವಾ ಇನ್ನಾವುದಾದರೂ ಉಪಕರಣವಸ್ತುವನ್ನು ದಾನ ಮಾಡುವವನಿಂದ ಪ್ರತಿಗ್ರಹವನ್ನು ಸ್ವೀಕರಿಸುವುದು ಉಚಿತವಲ್ಲ.

೪೫. ಸ್ವಕಾರ್ಯ ಅಥವಾ ಪಿತೃಕಾರ್ಯಗಳಲ್ಲಿ ತೀರ್ಥ ಕ್ಷೇತ್ರದಲ್ಲಿ ಪ್ರತಿಗ್ರಹ ಮಾಡಿದ ಮಾನವನು ತೀರ್ಥಾಟನೆಯನ್ನು ಮಾಡಿದರೂ ಪ್ರತಿಗ್ರಹದ ಫಲವನ್ನು ಅನುಭವಿಸುವವರೆಗೂ ತೀರ್ಥಯಾತ್ರೆಯು ನಿಷ್ಫಲವಾಗುವುದು.

೪೬. ಆದುದರಿಂದ ತೀರ್ಥ, ಪವಿತ್ರವಾದ ದೇವಾಲಯ ಮುಂತಾದ ಸ್ಥಳಗಳಲ್ಲಿ ಎಲ್ಲ ನಿಮಿತ್ತಗಳಲ್ಲಿಯೂ ಜಾಗರೂಕನಾಗಿದ್ದು ಪ್ರತಿಗ್ರಹಮಾಡುವ ಅವಕಾಶವನ್ನು ತ್ಯಜಿಸಬೇಕು.

ಕಪಿಲಾಂ ಪಾಟಲಾಂ ಧೇನುಂ ಯಸ್ತು ಕೃಷ್ಣಾಂ ಪ್ರಯಚ್ಛತಿ ।
ಸ್ವರ್ಣಶೃಂಗೀಂ ರೌಪ್ಯಖುರಾಂ ಚೈಲಕರ್ಣೀಂ ಪಯಸ್ವಿನೀಮ್ ॥ ೪೭ ॥

ತಸ್ಯಾ ಯಾವಂತಿ ಲೋಮಾನಿ ಸಂತಿ ಗಾತ್ರೇಷು ಸತ್ತಮ ।
ತಾವದ್ವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೪೮ ॥

ಇತಿ ಶ್ರೀ ಕೂರ್ಮಪುರಾಣೇ ಷಟ್ತ್ರಿಂಶೋಽಧ್ಯಾಯಃ.

---

೪೭. ಪುಣ್ಯಕ್ಷೇತ್ರದಲ್ಲಿ ಕೊಂಬಿನಲ್ಲಿ ಸುವರ್ಣವನ್ನೂ ಗೊರಸಿನಲ್ಲಿ ಬೆಳ್ಳಿಯನ್ನೂ ಕಿವಿಯಲ್ಲಿ ವಸ್ತ್ರವನ್ನೂ ಇಟ್ಟು ಶೃಂಗರಿಸಿದ ಕಪಿಲ ಪಾಟಲ ಅಥವಾ ಕೃಷ್ಣವರ್ಣದ ಹಾಲು ಕರೆಯುತ್ತಿರುವ ಹಸುವನ್ನು ದಾನಮಾಡುವುದು ಬಹು ಪ್ರಶಸ್ತವು.

೪೮. ಸಾಧುಶ್ರೇಷ್ಠರೇ ! ಗೋದಾನಮಾಡಿದವನು ಹಸುವಿನ ದೇಹದಲ್ಲಿ ಎಷ್ಟು ರೋಮಗಳು ಇವೆಯೋ ; ಅಷ್ಟು ಸಾವಿರ ವರ್ಷಗಳವರೆಗೆ ರುದ್ರಲೋಕದಲ್ಲಿ ಪೂಜ್ಯನಾಗುತ್ತಾನೆ.

(ಕೂರ್ಮಪುರಾಣದಲ್ಲಿ ಮೂವತ್ತಾರನೆಯ ಅಧ್ಯಾಯವು ಮುಗಿದುದು.)

---

ಶ್ರೀಃ

# ಕೂರ್ಮಪುರಾಣಂ

## ಸಪ್ತತ್ರಿಂಶೋಽಧ್ಯಾಯಃ.

**ಮಾರ್ಕಂಡೇಯ ಉವಾಚ :—**

**ಕಥಯಿಷ್ಯಾಮಿ ತೇ ವತ್ಸ ತೀರ್ಥಯಾತ್ರಾವಿಧಿಕ್ರಮಮ್ ।**
**ಆರ್ಷೇಣ ತು ವಿಧಾನೇನ ಯಥಾದೃಷ್ಟಂ ಯಥಾಶ್ರುತಮ್ ॥ ೧ ॥**

**ಪ್ರಯಾಗತೀರ್ಥಯಾತ್ರಾರ್ಥೀ ಯಃ ಪ್ರಯಾತಿ ನರಃ ಕ್ವಚಿತ್ ।**
**ಬಲೀವರ್ದಂ ಸಮಾರೂಢಃ ಶೃಣು ತಸ್ಯಾಪಿ ಯತ್ಫಲಮ್ ॥ ೨ ॥**

---

## ಮೂವತ್ತೇಳನೆಯ ಅಧ್ಯಾಯವು

೧. ಮಾರ್ಕಂಡೇಯಮುನಿಯು ಹೀಗೆಂದು ಹೇಳಿದನು:- ವತ್ಸನೇ ! ಶಾಸ್ತ್ರ ವಿಧಾನದಿಂದ ಕಂಡು ಅಥವಾ ಕೇಳಿದ ರೀತಿಯಲ್ಲಿ ಸಂಪೂರ್ಣವಾಗಿ ತೀರ್ಥಯಾತ್ರಾ ವಿಧಿಯ ಕ್ರಮವನ್ನು ನಿನಗೆ ಹೇಳುತ್ತೇನೆ.

೨. ಪ್ರಯಾಗತೀರ್ಥದ ಯಾತ್ರೆಯನ್ನು ಅಪೇಕ್ಷಿಸಿ ಯಾವ ಮಾನವನು ಎಲ್ಲಿಯಾದರೂ ವೃಷಭವನ್ನು ಏರಿ ಪ್ರಯಾಣಮಾಡಿದರೆ ಆ ಪಾಪದ ಫಲವನ್ನು ಶ್ರವಣಮಾಡು.

ನರಕೇ ವಸತೇ ಘೋರೇ ಸಮಾಃ ಕಲ್ಪಶತಾಯುತಮ್ ।
ತತೋ ನಿವರ್ತಿತೋ ಘೋರೋ ಗವಾಂ ಕ್ರೋಧಃ ಸುದಾರುಣಃ ॥೩॥

ಸಲಿಲಂ ಚ ನ ಗೃಹ್ಣಂತಿ ಪಿತರಸ್ತಸ್ಯ ದೇಹಿನಃ ।
ಯಸ್ತು ಪುತ್ರಾಂಸ್ತಥಾ ಬಾಲಾನನ್ನಹೀನಾನ್ ಪ್ರಮುಂಚತಿ ॥ ೪ ॥

ಯಥಾತ್ಮಾನಂ ತದಾ ಸರ್ವಂ ದಾನಂ ವಿಪ್ರೇಷು ದಾಪಯೇತ್ ।
ಐಶ್ವರ್ಯಾಲ್ಲೋಭಮೋಹಾದ್ವಾ ಗಚ್ಛೇದ್ಯಾನೇನ ಯೋ ನರಃ ॥ ೫ ॥

ನಿಷ್ಫಲಂ ತಸ್ಯ ತತ್ತೀರ್ಥಂ ತಸ್ಮಾದ್ಯಾನಂ ವಿವರ್ಜಯೇತ್ ।
ಗಂಗಾಯಮುನಯೋರ್ಮಧ್ಯೇ ಯಸ್ತು ಕನ್ಯಾಂ ಪ್ರಯಚ್ಛತಿ ॥ ೬ ॥

---

೩. ಅವನು ಘೋರವಾದ ನರಕದಲ್ಲಿ ನೂರಾರು ಅಯುತ ಸಂಖ್ಯೆಯಷ್ಟು ವರ್ಷಗಳವರೆಗೆ ವಾಸಮಾಡುತ್ತಾನೆ. ಅವನು ವೃಷಭವಾಹನದಿಂದ ಘೋರವೂ, ದಾರುಣವೂ ಆದ ಕ್ರೋಧವನ್ನು ಗೋವುಗಳಿಗೆ ಉಂಟುಮಾಡಿರುವನು.

೪. ಯಾವ ನರನು ಪುತ್ರರನ್ನೂ ಬಾಲಕರನ್ನೂ ಅನ್ನ ಹೀನರನ್ನಾಗಿ ಮಾಡಿ ತ್ಯಜಿಸುವನೋ, ಆ ಮಾನವನು ಕೊಟ್ಟ ಜಲಾಂಜಲಿಯನ್ನು ಅವನ ಪಿತೃಗಳು ಸ್ವೀಕರಿಸುವುದಿಲ್ಲ.

೫. ಆತ್ಮಹಿತವನ್ನು ಉದ್ದೇಶಿಸುವವನಾಗಿ ಸಮಸ್ತ ದಾನಗಳನ್ನೂ ಸತ್ಪಾತ್ರರಾದ ವಿಪ್ರರಲ್ಲಿ ಅರ್ಪಿಸಬೇಕು. ಐಶ್ವರ್ಯದಿಂದಾಗಲೀ ಲೋಭ-ಮೋಹಗಳಿಂದಾಗಲೀ ವಾಹನದಿಂದ ತೀರ್ಥಯಾತ್ರೆಯನ್ನು ಮಾಡಬಾರದು.

೬. ಆಗ ಅವನು ತೀರ್ಥಾಟನೆಯು ನಿಷ್ಫಲವಾಗುವುದರಿಂದ ಅವನು ವಾಹನವನ್ನು ಬಿಡಬೇಕು. ಗಂಗಾ-ಯಮುನಾ ನದಿಗಳ ಮಧ್ಯವಾದ ಪವಿತ್ರಕ್ಷೇತ್ರದಲ್ಲಿ ಕನ್ಯಾದಾನಮಾಡುವುದು ಬಹು ಪ್ರಶಸ್ತವು.

ಆರ್ಷೇಣ ತು ವಿಧಾನೇನ ಯಥಾವಿಭವವಿಸ್ತರಮ್ ।
ನ ಸ ಪಶ್ಯತಿ ತಂ ಘೋರಂ ನರಕಂ ತೇನ ಕರ್ಮಣಾ ॥ ೭ ॥

ಉತ್ತರಾನ್ ಸ ಕುರೂನ್ ಗತ್ವಾ ಮೋದತೇ ಕಾಲಮವ್ಯಯಮ್ ।
ವಟಮೂಲಂ ಸಮಾಶ್ರಿತ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ॥ ೮ ॥

ಸ್ವರ್ಗಲೋಕಾನತಿಕ್ರಮ್ಯ ರುದ್ರಲೋಕಂ ಸ ಗಚ್ಛತಿ ।
ಯತ್ರ ಬ್ರಹ್ಮಾದಯೋ ದೇವಾ ದಿಶಶ್ಚ ಸದಿಗೀಶ್ವರಾಃ ॥ ೯ ॥

ಲೋಕಪಾಲಾಶ್ಚ ಪಿತರಃ ಸರ್ವೇ ತೇ ಲೋಕಸಂಸ್ಥಿತಾಃ ।
ಸನತ್ಕುಮಾರಪ್ರಮುಖಾಸ್ತಥಾ ಬ್ರಹ್ಮರ್ಷಯೋಽಪರೇ ॥ ೧೦ ॥

---

೭. ಶಾಸ್ತ್ರೋಕ್ತವಿಧಾನದಿಂದ ತನ್ನ ಸಂಪತ್ತಿನ ಸಮೃದ್ಧಿಯನ್ನು ಅನುಸರಿಸಿ ಕನ್ಯಾದಾನವನ್ನು ಮಾಡಿದ ಮಹಾತ್ಮನು ಆ ಸುಕೃತದಿಂದ ಘೋರವಾದ ನರಕವನ್ನು ಹೊಂದುವುದಿಲ್ಲ.

೮. ಅವನು ಉತ್ತರ ಕುರುಕ್ಷೇತ್ರಕ್ಕೆ ಹೋಗಿ ಶಾಶ್ವತಕಾಲದವರೆಗೆ ಸುಖ-ಸಂತೋಷಗಳನ್ನು ಅನುಭವಿಸುತ್ತಾನೆ. ಅಲ್ಲಿ ವಟವೃಕ್ಷದ ಮೂಲವನ್ನು ಆಶ್ರಯಿಸಿ ಪ್ರಾಣಗಳನ್ನು ತ್ಯಜಿಸುವುದು ಪುಣ್ಯಮಾತ್ರಲಭ್ಯವು.

೯. ಅಂತಹವನು ಸ್ವರ್ಗಲೋಕಗಳನ್ನು ಅತಿಕ್ರಮಿಸಿ ರುದ್ರ ಲೋಕವನ್ನು ಹೊಂದುತ್ತಾನೆ. ಆ ರುದ್ರಲೋಕದಲ್ಲಿ ಬ್ರಹ್ಮಾದಿ ದೇವತೆಗಳೂ, ದಿಕ್ಕುಗಳೂ, ದಿಕ್ಪಾಲಕರೂ ವಾಸಮಾಡುವರು.

೧೦. ಮತ್ತು ಲೋಕಪಾಲರೂ, ಲೋಕದಲ್ಲಿ ವಾಸಮಾಡುವ ಸಮಸ್ತ ಪಿತೃ ಗಣಗಳೂ, ಸನತ್ಕುಮಾರ ಮುಂತಾದ ಅನೇಕ ಬ್ರಹ್ಮರ್ಷಿಗಳೂ ಆ ರುದ್ರಲೋಕದಲ್ಲಿ ವಾಸಮಾಡುತ್ತಿರುವರು.

ನಾಗಾಃ ಸುಪರ್ಣಾಃ ಸಿದ್ಧಾಶ್ಚ ತಥಾ ನಿತ್ಯಂ ಸಮಾಸತೇ ।
ಹರಿಶ್ಚ ಭಗವಾನಾಸ್ತೇ ಪ್ರಜಾಪತಿಪುರಸ್ಕೃತಃ ॥ ೧೧ ॥

ಗಂಗಾಯಮುನಯೋರ್ಮಧ್ಯಂ ಪೃಥಿವ್ಯಾ ಜಘನಂ ಸ್ಮೃತಮ್ ।
ಪ್ರಯಾಗಂ ರಾಜಶಾರ್ದೂಲ ತ್ರಿಷು ಲೋಕೇಷು ವಿಶ್ರುತಮ್ ॥ ೧೨ ॥

ತತ್ರಾಭಿಷೇಕಂ ಯಃ ಕುರ್ಯಾತ್ ಸಂಗಮೇ ಶಂಸಿತವ್ರತಃ ।
ತುಲ್ಯಂ ಫಲಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೧೩ ॥

ನ ಮಾತೃವಚನಾತ್ತಾತ ನ ಲೋಕವಚನಾದಪಿ ।
ಮತಿರುತ್ಕ್ರಮಣೀಯಾ ತೇ ಪ್ರಯಾಗಗಮನಂ ಪ್ರತಿ ॥ ೧೪ ॥

---

೧೧. ಹಾಗು ಬ್ರಹ್ಮದೇವನಿಂದ ಪುರಸ್ಕರಿಸಲ್ಪಟ್ಟ ಪೂಜ್ಯನಾದ ವಿಷ್ಣುವೂ ನಾಗ- ಸುಪರ್ಣ ಮತ್ತು ಸಿದ್ಧಪುರುಷರೂ ಆ ರುದ್ರಲೋಕದಲ್ಲಿ ಯಾವಾಗಲೂ ನೆಲೆಸಿ ಕೊಂಡಿರುವರು.

೧೨. ರಾಜಶ್ರೇಷ್ಠನೇ ! ಗಂಗಾ-ಯಮುನಾ ನದಿಗಳ ಮಧ್ಯಭಾಗದಲ್ಲಿರುವ ಪ್ರಯಾಗವು ಸಮಸ್ತ ಭೂಮಂಡಲದ ಜಘನಭಾಗವೆಂದು ಸ್ಮರಿಸಲ್ಪಟ್ಟಿದೆ ಮತ್ತು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿದೆ.

೧೩. ಯಾವ ಮಾನವನು ಪ್ರಶಸ್ತವಾದ ನಿಯಮವಂತನಾಗಿ ಗಂಗಾ ಯಮುನಾ ಸಂಗಮದಲ್ಲಿ ಸ್ನಾನವನ್ನು ಮಾಡುವನೋ, ಅವನು ರಾಜಸೂಯ-ಅಶ್ವಮೇಧ ಮಹಾಯಾಗಗಳಿಗೆ ತುಲ್ಯವಾದ ಫಲವನ್ನು ಹೊಂದುವನು.

೧೪. ವತ್ಸನೇ ! ಜನನಿಯ ವಚನದಿಂದಾಗಲೀ, ಜನರ ಆದೇಶದಿಂದಾಗಲೀ ಪ್ರಯಾಗತೀರ್ಥಯಾತ್ರೆಯ ಸಂಕಲ್ಪವು ತ್ಯಜಿಸಬೇಕಾದುದಲ್ಲ.

ಷಷ್ಟಿತೀರ್ಥಸಹಸ್ರಾಣಿ ಷಷ್ಟಿಕೋಟ್ಯಸ್ತಥಾಪರಾಃ ।
ತೇಷಾಂ ಸಾನ್ನಿಧ್ಯಮತ್ರೈವ ತೀರ್ಥಾನಾಂ ಕುರುನಂದನ ॥ ೧೫ ॥

ಯಾ ಗತಿರ್ಯೋಗಯುಕ್ತಸ್ಯ ಸನ್ಯಸ್ತಸ್ಯ ಮನೀಷಿಣಃ ।
ಸಾ ಗತಿಸ್ತ್ಯಜತಃ ಪ್ರಾಣಾನ್ ಗಂಗಾಯಮುನಸಂಗಮೇ ॥ ೧೬ ॥

ನ ತೇ ಜೀವಂತಿ ಲೋಕೇಽಸ್ಮಿನ್ ಯತ್ರ ತತ್ರ ಯುಧಿಷ್ಠಿರ ।
ಯೇ ಪ್ರಯಾಗಂ ನ ಸಂಪ್ರಾಪ್ತಾಸ್ತ್ರಿಷು ಲೋಕೇಷು ವಂಚಿತಾಃ ೧೭ ॥

ಏವಂ ದೃಷ್ಟ್ವಾ ತು ತತ್ತೀರ್ಥಂ ಪ್ರಯಾಗಂ ಪರಮಂ ಪದಮ್ ।
ಮುಚ್ಯತೇ ಸರ್ವಪಾಪೇಭ್ಯಃ ಶಶಾಂಕ ಇವ ರಾಹುಣಾ ॥ ೧೮ ॥

---

೧೫. ಪಾಂಡುಪುತ್ರನಾದ ಯುಧಿಷ್ಠಿರನೇ! ಈ ಪ್ರಯಾಗದಲ್ಲಿ ಅರವತ್ತು ಸಹಸ್ರತೀರ್ಥಗಳ ಮತ್ತು ಇತರ ಅರವತ್ತು ಕೋಟಿ ತೀರ್ಥಗಳ ಸಂಗಮವು ಒಂದೇ ಸ್ಥಳದಲ್ಲಿ ಸೇರಿರುವುದು.

೧೬. ಯೋಗಾಭ್ಯಾಸ ತತ್ಪರನಿಗೂ ಸನ್ಯಾಸವನ್ನು ಸ್ವೀಕರಿಸಿದ ಜ್ಞಾನಿಗೂ ಲಭಿಸುವ ಪರಮಸದ್ಗತಿಯು ಗಂಗಾ ಯಮುನಾ ನದಿಗಳ ಸಂಗಮದಲ್ಲಿ ಪ್ರಾಣ ಪರಿತ್ಯಾಗಮಾತ್ರದಿಂದ ಲಭಿಸುವುದು.

೧೭. ಯುಧಿಷ್ಠಿರನೇ! ಯಾವ ಜನರು ಪ್ರಯಾಗ ಕ್ಷೇತ್ರವನ್ನು ಹೊಂದುವುದಿಲ್ಲವೋ, ಅವರು ಈ ಲೋಕದಲ್ಲಿ ಯಾವುದೊಂದು ಸ್ಥಳದಲ್ಲಿಯೂ ಜೀವಂತರಾಗಿರುವಂತೆ ಅಲ್ಲ. ಅವರು ಮೂರು ಲೋಕದಲ್ಲಿಯೂ ಪುಣ್ಯಫಲದಿಂದ ವಂಚಿತರಾಗಿರುವರು.

೧೮. ಹೀಗೆ ಪರಮಪದವಿಯನ್ನು ಕೊಡುವ ಆ ಪ್ರಯಾಗ ತೀರ್ಥವನ್ನು ದರ್ಶನಮಾಡಿದ ನರನು ರಾಹುಗ್ರಹದಿಂದ ಚಂದ್ರಮ ಬಿಡಲ್ಪಟ್ಟಂತೆ ಸಮಸ್ತ ಪಾತಕಗಳಿಂದ ಮುಕ್ತನಾಗುವನು.

ಕಂಬಲಾಶ್ವತರೌ ನಾಗೌ ಯಮುನಾದಕ್ಷಿಣೇ ತಟೇ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಮುಚ್ಯತೇ ಸರ್ವಪಾತಕೈಃ ॥ ೧೯ ॥

ತತ್ರ ಗತ್ವಾ ನರಃ ಸ್ಥಾನಂ ಮಹಾದೇವಸ್ಯ ಧೀಮತಃ ।
ಸಮಸ್ತಾಂಸ್ತಾರಯೇತ್ ಪೂರ್ವಾನ್ ದಶಾತೀತಾನ್ ದಶಾವರಾನ್ ॥

ಕೃತ್ವಾಭಿಷೇಕಂ ತು ನರಃ ಸೋಽಶ್ವಮೇಧಫಲಂ ಲಭೇತ್ ।
ಸ್ವರ್ಗಲೋಕಮವಾಪ್ನೋತಿ ಯಾವದಾಭೂತಸಂಪ್ಲವಮ್ ॥ ೨೧ ॥

ಪೂರ್ವಪಾರ್ಶ್ವೇ ತು ಗಂಗಾಯಾಸ್ತ್ರೈಲೋಕ್ಯೇ ಯಾತಿ ಮಾನವಃ ।
ಅವಟಃ ಸರ್ವಸಾಮುದ್ರಃ ಪ್ರತಿಷ್ಠಾನಂ ಚ ವಿಶ್ರುತಮ್ ॥ ೨೨ ॥

---

೧೯. ಯಮುನಾ ನದಿಯ ದಕ್ಷಿಣತೀರದಲ್ಲಿ ಕಂಬಲನಾಗ- ಅಶ್ವತರನಾಗ ಎಂಬ ಎರಡು ತೀರ್ಥಗಳು ಪ್ರಸಿದ್ಧವಾಗಿವೆ. ಅಲ್ಲಿ ಸ್ನಾನ ಮತ್ತು ಪಾನಮಾಡುವುದರಿಂದ ಸಮಸ್ತ ಪಾಪಗಳಿಂದ ವರ್ಜಿತನಾಗುವನು.

೨೦. ಸರ್ವಜ್ಞನಾದ ವಿಶ್ವೇಶ್ವರನ ಸ್ಥಾನಕ್ಕೆ ಪ್ರಯಾಣ ಮಾಡಿದ ಮಾನವನು ತನ್ನ ವಂಶದ ಹತ್ತು ಮಂದಿ ಪೂರ್ವಪುರುಷರನ್ನೂ ಹತ್ತು ಮಂದಿ ಮುಂದಿನ ಪುರುಷರನ್ನೂ ಎಲ್ಲರನ್ನೂ ಸದ್ಗತಿಗೆ ಒಯ್ಯುವನು.

೨೧. ಅಲ್ಲಿ ಸ್ನಾನವನ್ನು ಮಾಡಿದ ಮಾನವನು ಸಂಪೂರ್ಣವಾದ ಅಶ್ವಮೇಧ ಯಾಗದ ಫಲವನ್ನು ಹೊಂದಿ ಕಲ್ಪದ ಪ್ರಳಯವಾಗುವವರೆಗೂ ಸ್ವರ್ಗಲೋಕ ಸುಖವನ್ನು ಹೊಂದುತ್ತಾನೆ.

೨೨. ರಾಜನೇ ! ಗಂಗಾ ನದಿಯ ಪೂರ್ವಪಾರ್ಶ್ವದಲ್ಲಿ ಮೂರು ಲೋಕದಲ್ಲಿ ಪ್ರಸಿದ್ಧಿ ಹೊಂದಿರುವ, ಸರ್ವ ಸಮುದ್ರಗಳ ಸಂಗಮದಂತೆ ಪವಿತ್ರವಾದ ಒಂದು ಜಲಾಶಯವೂ, ಪ್ರತಿಷ್ಠಾನ ಎಂಬ ಕ್ಷೇತ್ರವೂ ಪ್ರಸಿದ್ಧವಾಗಿರುವುದು.

ಬ್ರಹ್ಮಚಾರೀ ಜಿತಕ್ರೋಧಸ್ತ್ರಿರಾತ್ರಂ ಯದಿ ತಿಷ್ಠತಿ ।
ಸರ್ವಪಾಪವಿಶುದ್ಧಾತ್ಮಾ ಸೋಽಶ್ವಮೇಧಫಲಂ ಲಭೇತ್ ॥ ೨೩ ॥

ಉತ್ತರೇಣ ಪ್ರತಿಷ್ಠಾನಂ ಭಾಗೀರಥ್ಯಾಸ್ತು ಸವ್ಯತಃ ।
ಹಂಸಪ್ರಪತನಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಮ್ ॥ ೨೪ ॥

ಅಶ್ವಮೇಧಫಲಂ ತತ್ರ ಸ್ಮೃತಮಾತ್ರೇ ತು ಜಾಯತೇ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ತಾವತ್ ಸ್ವರ್ಗೇ ಮಹೀಯತೇ ॥ ೨೫ ॥

ಉರ್ವಶೀಪುಲಿನೇ ರಮ್ಯೇ ವಿಪುಲೇ ಹಂಸಪಾಂಡುರೇ ।
ಪರಿತ್ಯಜತಿ ಯಃ ಪ್ರಾಣಾನ್ ಶೃಣು ತಸ್ಯಾಪಿ ಯತ್ಫಲಮ್ ॥ ೨೬ ॥

---

೨೩. ಆ ಪ್ರದೇಶದಲ್ಲಿ ಮೂರುದಿನ ಬ್ರಹ್ಮಚರ್ಯವ್ರತಧಾರಿಯೂ ಕ್ರೋಧವನ್ನು ತ್ಯಜಿಸಿದವನೂ ಆಗಿ ವಾಸಮಾಡಿದರೆ ಸಮಸ್ತ ಪಾತಕಗಳಿಂದ ಶುದ್ಧವಾದ ಅಂತಃಕರಣವುಳ್ಳವನಾಗಿ ಅಶ್ವಮೇಧಯಾಗದ ಫಲವನ್ನು ಹೊಂದುವನು.

೨೪. ಪ್ರತಿಷ್ಠಾನ ನಗರಕ್ಕೆ ಉತ್ತರದಲ್ಲಿಯೂ ಭಾಗೀರಥೀ ನದಿಗೆ ದಕ್ಷಿಣದಲ್ಲಿಯೂ ಹಂಸಪ್ರಪತನ ಎಂಬ ತೀರ್ಥವು ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯನ್ನು ಹೊಂದಿದೆ.

೨೫. ಹಂಸಪ್ರಪತನತೀರ್ಥದ ಸ್ಮರಣಮಾತ್ರದಿಂದ ಅಶ್ವಮೇಧಯಾಗದ ಫಲವು ಲಭಿಸುವುದು. ಮತ್ತು ಭೂಮಿಯಲ್ಲಿ ಚಂದ್ರ-ಸೂರ್ಯರು ಪ್ರಕಾಶಿಸುವವರೆಗೂ ಸ್ವರ್ಗಲೋಕದಲ್ಲಿ ಪೂಜ್ಯನಾಗಿರುವನು.

೨೬. ರಮ್ಯವೂ, ವಿಸ್ತಾರವೂ ಹಂಸಪಕ್ಷಿಗಳಿಂದ ಶುದ್ಧವೂ ಆದ ಊರ್ವಶೀ ಪುಲಿನವೆಂಬಲ್ಲಿ ಯಾವ ಮಾನವನು ಪ್ರಾಣವನ್ನು ತ್ಯಜಿಸುವನೋ, ಅವನು ಹೊಂದುವ ಫಲಗಳನ್ನು ಕೇಳು.

ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ।
ಆಸ್ತೇ ಸ ಪಿತೃಭಿಃ ಸಾರ್ಧಂ ಸ್ವರ್ಗಲೋಕೇ ನರಾಧಿಪ ॥ ೨೭ ॥

ಅಥ ಸಂಧ್ಯಾವಟೇ ರಮ್ಯೇ ಬ್ರಹ್ಮಚಾರೀ ಸಮಾಹಿತಃ ।
ನರಃ ಶುಚಿರುಪಾಸೀತ ಬ್ರಹ್ಮಲೋಕಮವಾಪ್ನುಯಾತ್ ॥ ೨೮ ॥

ಕೋಟಿತೀರ್ಥಂ ಸಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ ।
ಕೋಟಿವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೨೯ ॥

ಯತ್ರ ಗಂಗಾ ಮಹಾಭಾಗಾ ಬಹುತೀರ್ಥತಪೋವನಾ ।
ಸಿದ್ಧಂ ಕ್ಷೇತ್ರಂ ಹಿ ತಜ್ಜ್ಞೇಯಂ ನಾತ್ರ ಕಾರ್ಯಾ ವಿಚಾರಣಾ ॥ ೩೦ ॥

---

೨೭. ನರಪತಿಯಾದ ಯುಧಿಷ್ಠಿರನೇ ! ಅವನು ಅರವತ್ತು ಸಹಸ್ರ ಮತ್ತ ಅರವತ್ತು ನೂರು ವರ್ಷಗಳವರೆಗೆ ತನ್ನ ಪಿತೃಗಳ ಸಂಗಡ ಸ್ವರ್ಗಲೋಕದಲ್ಲಿ ವಾಸ ಮಾಡುವನು.

೨೮. ಮತ್ತು ರಮ್ಯವಾದ ಸಂಧ್ಯಾವಟಪ್ರದೇಶದಲ್ಲಿ ಬ್ರಹ್ಮಚರ್ಯವ್ರತ, ಚಿತ್ತೈಕಾಗ್ರತೆ ಮತ್ತು ಶೌಚ ಇವುಗಳಿಂದ ಕೂಡಿ ಉಪಾಸನೆಮಾಡುವುದರಿಂದ ಮನುಷ್ಯನು ಬ್ರಹ್ಮಲೋಕವನ್ನು ಹೊಂದುತ್ತಾನೆ.

೨೯. ಯಾವ ಮನುಷ್ಯನು ಕೋಟಿತೀರ್ಥವನ್ನು ಹೊಂದಿ ಪ್ರಾಣಗಳನ್ನು ಬಿಡುವನೋ, ಅವನು ಒಂದು ಕೋಟಿಸಹಸ್ರವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಪೂಜ್ಯನಾಗಿರುವನು.

೩೦. ಅನೇಕ ತೀರ್ಥಗಳಿಂದಲೂ ತಪೋವನಗಳಿಂದಲೂ ಕೂಡಿದ ಮಹಾ ಪವಿತ್ರವಾದ ಗಂಗಾನದಿಯು ಎಲ್ಲಿ ಹರಿಯುವುದೋ, ಅದು ಸಿದ್ಧ ಕ್ಷೇತ್ರವೆಂದು ತಿಳಿಯಬೇಕು. ಈ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿಲ್ಲ.

ಕ್ಷಿತೌ ತಾರಯತೇ ಮರ್ತ್ಯಾನ್ ನಾಗಾಂಸ್ತಾರಯತೇಽಪ್ಯಧಃ ।
ದಿವಿ ತಾರಯತೇ ದೇವಾಂಸ್ತೇನ ಸಾ ತ್ರಿಪಥಾ ಸ್ಮೃತಾ　　॥ ೩೧ ॥

ಯಾವದಸ್ಥೀನಿ ಗಂಗಾಯಾಂ ತಿಷ್ಠಂತಿ ಪುರುಷಸ್ಯ ತು ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ　　॥ ೩೨ ॥

ತೀರ್ಥಾನಾಂ ಪರಮಂ ತೀರ್ಥಂ ನದೀನಾಂ ಪರಮಾ ನದೀ ।
ಮೋಕ್ಷದಾ ಸರ್ವಭೂತಾನಾಂ ಮಹಾಪಾತಕಿನಾಮಪಿ　　॥ ೩೩ ॥

ಸರ್ವತ್ರ ಸುಲಭಾ ಗಂಗಾ ತ್ರಿಷು ಸ್ಥಾನೇಷು ದುರ್ಲಭಾ ।
ಗಂಗಾದ್ವಾರೇ ಪ್ರಯಾಗೇ ಚ ಗಂಗಾಸಾಗರಸಂಗಮೇ　　॥ ೩೪ ॥

---

೩೧. ಆ ಗಂಗಾನದಿಯು ಭೂಮಿಯಲ್ಲಿ ಮನುಷ್ಯರನ್ನೂ, ಅಧೋಲೋಕವಾದ ಪಾತಾಳದಲ್ಲಿ ಸರ್ಪಗಳನ್ನೂ, ಸ್ವರ್ಗಲೋಕದಲ್ಲಿ ದೇವತೆಗಳನ್ನೂ ಸದ್ಗತಿಗೆ ಒಯ್ಯುವುದರಿಂದ ಆ ನದಿಯು ತ್ರಿಪಥಗಾ–ಮೂರು ಮಾರ್ಗಗಳಲ್ಲಿ ಸಂಚರಿಸುವುದು ಎಂದು ಸ್ಮರಿಸಲ್ಪಟ್ಟಿದೆ.

೩೨. ಮೃತನಾದ ಮಾನವನ ಅಸ್ಥಿಗಳು ಎಷ್ಟುಕಾಲದವರೆಗೆ ಗಂಗಾ ಪ್ರವಾಹದಲ್ಲಿರುವುವೋ, ಅಷ್ಟು ಸಹಸ್ರವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಸತ್ಕರಿಸಲ್ಪಡುತ್ತಾನೆ.

೩೩. ಗಂಗಾನದಿಯು ತೀರ್ಥಗಳಲ್ಲಿ ಉತ್ತಮವಾದ ತೀರ್ಥವು, ನದಿಗಳಲ್ಲಿ ಪಾವನವಾದ ನದಿಯು. ಮತ್ತು ಮಹಾಪಾತಕಗಳನ್ನು ಮಾಡಿರುವ ಸಮಸ್ತ ಪ್ರಾಣಿಗಳಿಗೂ ಮೋಕ್ಷವನ್ನು ಕೊಡುವದು.

೩೪. ಗಂಗಾನದಿಯು ಎಲ್ಲ ಪ್ರದೇಶಗಳಲ್ಲಿಯೂ ಸುಲಭವಾಗಿರುವುದು. ಆದರೆ ಗಂಗಾದ್ವಾರ, ಪ್ರಯಾಗ ಮತ್ತು ಗಂಗಾಸಾಗರ ಸಂಗಮ ಎಂಬ ಮೂರು ಸ್ಥಳಗಳಲ್ಲಿ ಸರ್ವರಿಗೂ ಸುಲಭವಲ್ಲ.

ಸರ್ವೇಷಾಮೇವ ಭೂತಾನಾಂ ಪಾಪೋಪಹತಚೇತಸಾಮ್ ।
ಗತಿಮನ್ವೇಷಮಾಣಾನಾಂ ನಾಸ್ತಿ ಗಂಗಾಸಮಾ ಗತಿಃ ॥ ೩೫ ॥

ಪವಿತ್ರಾಣಾಂ ಪವಿತ್ರಂ ಯನ್ಮಂಗಲಾನಾಂ ಚ ಮಂಗಲಮ್ ।
ಮಹೇಶ್ವರಾತ್ಪರಿಭ್ರಷ್ಟಾ ಸರ್ವಪಾಪಹರಾ ಶುಭಾ ॥ ೩೬ ॥

ಕೃತೇ ತು ನೈಮಿಷಂ ತೀರ್ಥಂ ತ್ರೇತಾಯಾಂ ಪುಷ್ಕರಂ ವರಮ್ ।
ದ್ವಾಪರೇ ತು ಕುರುಕ್ಷೇತ್ರಂ ಕಲೌ ಗಂಗಾ ವಿಶಿಷ್ಯತೇ ॥ ೩೭ ॥

ಗಂಗಾಮೇವ ನಿಷೇವಂತೇ ಪ್ರಯಾಗೇ ತು ವಿಶೇಷತಃ ।
ನಾನ್ಯತ್ಕಲಿಯುಗೇ ರೌದ್ರೇ ಭೇಷಜಂ ನೃಪ ವಿದ್ಯತೇ ॥ ೩೮ ॥

---

೩೫. ಪಾಪದಿಂದ ಕಲ್ಮಷಗಳನ್ನು ಹೊಂದಿದ ಚಿತ್ತವುಳ್ಳ ಸಮಸ್ತ ಪ್ರಾಣಿಗಳೂ ಸದ್ಗತಿಯನ್ನು ಹುಡುಕುವುದಾದರೆ ಅವರಿಗೆ ಗಂಗಾತೀರ್ಥಕ್ಕೆ ಸಮಾನವಾದ ಮತ್ತೊಂದು ಸಾಧನವು ಇಲ್ಲ.

೩೬. ಈಶ್ವರನ ಶಿರಸ್ಸಿನಿಂದ ಪತಿತವೂ, ಸಮಸ್ತ ಪಾಪಗಳನ್ನು ನಿವಾರಿಸುವುದೂ ಮತ್ತು ಮಂಗಳಮಯವೂ ಆದ ಗಂಗಾನದಿಯು ಪಾವನವಸ್ತುಗಳಲ್ಲೆಲ್ಲಾ ಪಾವನವೂ, ಮಂಗಳವಸ್ತುಗಳಲ್ಲೆಲ್ಲಾ ಮಂಗಳವೂ ಆಗಿರುವುದು.

೩೭. ಕೃತಯುಗದಲ್ಲಿ ನೈಮಿಷ ಎಂಬ ತೀರ್ಥವೂ, ತ್ರೇತಾಯುಗದಲ್ಲಿ ಉತ್ತಮವಾದ ಪುಷ್ಕರತೀರ್ಥವೂ, ದ್ವಾಪರ ಯುಗದಲ್ಲಿ ಕುರುಕ್ಷೇತ್ರವೂ ಪ್ರಸಿದ್ಧವಾಗಿರುವಂತೆ ಕಲಿಯುಗದಲ್ಲಿ ಗಂಗಾನದಿಯು ವಿಶೇಷವಾಗಿ ಪಾವನವಾದುದು.

೩೮. ಯುಧಿಷ್ಠಿರರಾಜನೇ ! ಪ್ರಯಾಗ ಕ್ಷೇತ್ರದಲ್ಲಿ ವಿಶೇಷವಾಗಿ ಗಂಗಾನದಿಯನ್ನು ಸೇವಿಸುತ್ತಾರೆ ಭೀಷಣವಾದ ಕಲಿಯುಗದಲ್ಲಿ ಇದನ್ನು ಬಿಟ್ಟು ಮತ್ತೊಂದು ಸಂಸಾರ ವ್ಯಾಧಿಚಿಕಿತ್ಸೆಯು ಇರುವುದಿಲ್ಲ.

**ಅಕಾಮೋ ವಾ ಸಕಾಮೋ ವಾ ಗಂಗಾಯಾಂ ಯೋ ವಿಪದ್ಯತೇ ।**
**ಸ ಮೃತೋ ಜಾಯತೇ ಸ್ವರ್ಗೇ ನರಕಂ ಚ ನ ಪಶ್ಯತಿ ॥ ೩೯ ॥**

**ಇತಿ ಶ್ರೀ ಕೂರ್ಮಪುರಾಣೇ ಸಪ್ತತ್ರಿಂಶೋಽಧ್ಯಾಯಃ.**

---

೩೯. ಯಾವ ಮಾನವನು ಇಷ್ಟಹೊಂದಿ ಅಥವಾ ಇಷ್ಟಹೊಂದದೆ ಗಂಗಾ ನದಿಯಲ್ಲಿ ಮರಣ ಹೊಂದುವನೋ, ಅವನು ಮೃತನಾದ ಕೂಡಲೇ ಸ್ವರ್ಗದಲ್ಲಿ ಜನಿಸುವನು ಹಾಗೂ ನರಕಯಾತನೆಯನ್ನು ಅನುಭವಿಸುವುದಿಲ್ಲ.

ಕೂರ್ಮಪುರಾಣದಲ್ಲಿ ಮೂವತ್ತೇಳನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಕೂರ್ಮಪುರಾಣಂ



## ಅಷ್ಟಾತ್ರಿಂಶೋಽಧ್ಯಾಯಃ.

**ಮಾರ್ಕಂಡೇಯ ಉವಾಚ :—**

**ಷಷ್ಟಿಸ್ತೀರ್ಥಸಹಸ್ರಾಣಿ ಷಷ್ಟಿಸ್ತೀರ್ಥಶತಾನಿ ಚ ।**
**ಮಾಘಮಾಸೇ ಗಮಿಷ್ಯಂತಿ ಗಂಗಾಯಮುನಸಂಗಮೇ ॥ ೧ ॥**

**ಗವಾಂ ಶತಸಹಸ್ರಸ್ಯ ಸಮ್ಯಗ್ದತ್ತಸ್ಯ ಯತ್ಫಲಮ್ ।**
**ಪ್ರಯಾಗೇ ಮಾಘಮಾಸೇ ತು ತ್ರ್ಯಹಂ ಸ್ನಾತಸ್ಯ ತತ್ಫಲಮ್ ॥ ೨ ॥**

---

೧. ಮಾರ್ಕಂಡೇಯ ಮುನಿಯು ಹೀಗೆಂದು ನುಡಿದನು: —ಭೂಮಿಯಲ್ಲಿ ಪ್ರಸಿದ್ಧವಾದ ಅರವತ್ತು ಸಹಸ್ರ ಮತ್ತು ಅರವತ್ತುನೂರು ತೀರ್ಥಗಳು ಮಾಘಮಾಸದಲ್ಲಿ ಗಂಗಾ-ಯಮುನಾ ನದಿಗಳ ಸಂಗಮದಲ್ಲಿ ಹೋಗಿ ಸೇರುತ್ತವೆ.

೨. ಮೂರು ಅಥವಾ ಸಹಸ್ರಸಂಖ್ಯೆಯ ಗೋದಾನಗಳನ್ನು ಯಥಾವಿಧಿಯಾಗಿ ಮಾಡಿದರೆ ಯಾವ ಫಲವು ದೊರಕುವುದೋ, ಮಾಘಮಾಸದಲ್ಲಿ ಪ್ರಯಾಗ ಕ್ಷೇತ್ರದಲ್ಲಿ ಮೂರುದಿನ ಸ್ನಾನಮಾಡುವುದರಿಂದ ಆ ಫಲವು ಲಭಿಸುವುದು.

ಗಂಗಾಯಮುನಯೋರ್ಮಧ್ಯೇ ಕರೀಷಾಗ್ನಿಂ ಚ ಸಾಧಯೇತ್ ।
ಅಹೀನಾಂಗೋ ಹ್ಯರೋಗಶ್ಚ ಪಂಚೇಂದ್ರಿಯಸಮನ್ವಿತಃ ॥ ೩ ।

ಯಾವಂತಿ ರೋಮಕೂಪಾಣಿ ತಸ್ಯ ಗಾತ್ರೇಷು ಭೂಮಿಪ ।
ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೪ ॥

ತತಃ ಸ್ವರ್ಗಾತ್ಪರಿಭ್ರಷ್ಟೋ ಜಂಬೂದ್ವೀಪಪತಿರ್ಭವೇತ್ ।
ಭುಕ್ತ್ವಾ ಸ ವಿಪುಲಾನ್ ಭೋಗಾಂಸ್ತತ್ತೀರ್ಥಂ ಲಭತೇ ಪುನಃ ॥ ೫ ॥

ಜಲಪ್ರವೇಶಂ ಯಃ ಕುರ್ಯಾತ್ ಸಂಗಮೇ ಲೋಕವಿಶ್ರುತೇ ।
ರಾಹುಗ್ರಸ್ತೋ ಯಥಾ ಸೋಮೋ ವಿಮುಕ್ತಃ ಸರ್ವಪಾತಕೈಃ ॥ ೬ ॥

---

೩. ಗಂಗಾ-ಯಮುನಾ ನದಿಗಳ ಮಧ್ಯದಲ್ಲಿ ಶುದ್ಧಗೋಮಯದ ಇಂಧನಗಳಿಂದ ಜ್ವಲಿಸುವ ಅಗ್ನಿಯನ್ನು ಧರಿಸಿದ ಮಾನವನು ಊನವಿಲ್ಲದ ಅಂಗವುಳ್ಳವನೂ ನೀರೋಗಿಯೂ ಮತ್ತು ಐದು ಇಂದ್ರಿಯಗಳ ಪಾಟವದಿಂದ ಕೂಡಿದವನೂ ಆಗುತ್ತಾನೆ.

೪. ಭೂಪತಿಯಾದ ಯುಧಿಷ್ಠಿರನೇ! ಅವನ ದೇಹದಲ್ಲಿ ಎಷ್ಟೊಂದು ರೋಮ. ಕೂಪಗಳು ಇವೆಯೋ, ಅಷ್ಟು ಸಹಸ್ರವರ್ಷಗಳವರೆಗೆ ಸ್ವರ್ಗಲೋಕದ ಸತ್ಕಾರವನ್ನು ಅನುಭವಿಸುತ್ತಾನೆ.

೫. ತರುವಾಯ ಪುಣ್ಯಕ್ಷಯದಿಂದ ಸ್ವರ್ಗ ಲೋಕದಿಂದ ಭ್ರಷ್ಟನಾಗಿ ಜಂಬೂದ್ವೀಪಕ್ಕೆ ಪತಿಯಾಗಿ ಹುಟ್ಟುತ್ತಾನೆ. ಅವನು ಸಂಪೂರ್ಣಭೋಗಗಳನ್ನು ಅನುಭವಿಸಿ ಮತ್ತೆ ಆ ತೀರ್ಥವನ್ನು ಹೊಂದುತ್ತಾನೆ.

೬. ಯಾವ ಮನುಷ್ಯನು ಲೋಕಪ್ರಸಿದ್ಧವಾದ ಗಂಗಾ-ಯಮುನಾ ಸಂಗಮದಲ್ಲಿ ಜಲಪ್ರವೇಶವನ್ನು ಮಾಡುವನೋ, ಅವನು ಚಂದ್ರನು ರಾಹುಗ್ರಹದಿಂದ ಮುಕ್ತನಾಗುವಂತೆ ಸರ್ವ ಪಾಪಗಳಿಂದ ವರ್ಜಿಸಲ್ಪಡುವನು.

ಸೋಮಲೋಕಮವಾಪ್ನೋತಿ ಸೋಮೇನ ಸಹ ಮೋದತೇ ।
ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ॥ ೭ ॥

ಸ್ವರ್ಗತಃ ಶಕ್ರಲೋಕೇಽಸೌ ಮುನಿಗಂಧರ್ವಸೇವಿತೇ ।
ತತೋ ಭ್ರಷ್ಟಸ್ತು ರಾಜೇಂದ್ರ ಸಮೃದ್ಧೇ ಜಾಯತೇ ಕುಲೇ ॥ ೮ ॥

ಅಧಃಶಿರಾಸ್ತು ಯೋ ಧಾರಾಮೂರ್ಧ್ವಪಾದಃ ಪಿಬೇನ್ನರಃ ।
ಸಪ್ತವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ॥ ೯ ॥

ತಸ್ಮಾದ್ಭ್ರಷ್ಟಸ್ತು ರಾಜೇಂದ್ರ ಅಗ್ನಿಹೋತ್ರೀ ಭವೇನ್ನರಃ ।
ಭುಕ್ತ್ವಾಥ ವಿಪುಲಾನ್ ಭೋಗಾಂಸ್ತತ್ತೀರ್ಥಂ ಭಜತೇ ಪುನಃ ॥ ೧೦ ॥

---

೭. ಮತ್ತು ಅವನು ಅರವತ್ತುಸಹಸ್ರ ಹಾಗೂ ಅರವತ್ತುನೂರು ವರ್ಷಗಳ ವರೆಗೆ ಚಂದ್ರಲೋಕವನ್ನು ಹೊಂದಿ ಚಂದ್ರನೊಡನೆ ಭೋಗವನ್ನು ಅನುಭವಿಸುತ್ತಾನೆ.

೮. ಆ ಲೋಕದಿಂದ ಸ್ವರ್ಗಕ್ಕೆ ಹೋಗಿ ಮುನಿ-ಗಂಧರ್ವರಿಂದ ಸೇವಿಸಲ್ಪಟ್ಟಿರುವ ಇಂದ್ರಲೋಕದಲ್ಲಿ ಭೋಗವನ್ನು ಅನುಭವಿಸುವನು. ರಾಜೇಂದ್ರನೇ! ಅಲ್ಲಿಂದ ಭ್ರಷ್ಟನಾಗಿ ಸಮೃದ್ಧಿವುಳ್ಳ ವಂಶದಲ್ಲಿ ಹುಟ್ಟುತ್ತಾನೆ.

೯. ಮತ್ತು ಯಾವ ಮಾನವನು ಊರ್ಧ್ವಮುಖವಾದ ಪಾದ, ಅಧೋಭಾಗದಲ್ಲಿರುವ ಶಿರಗಳುಳ್ಳವನಾಗಿ ಜಲಧಾರೆಯನ್ನು ಪಾನಮಾಡುವನೋ, ಅವನು ಏಳು ಸಹಸ್ರವರ್ಷಗಳವರೆಗೆ ಸ್ವರ್ಗಸುಖವನ್ನು ಅನುಭವಿಸುತ್ತಾನೆ.

೧೦. ರಾಜೇಂದ್ರನೇ! ಅವನು ಸ್ವರ್ಗದಿಂದ ಭ್ರಷ್ಟನಾಗಿ ಅಗ್ನಿಹೋತ್ರವನ್ನು ಆಚರಿಸುವ ದ್ವಿಜನಾಗಿ ಹುಟ್ಟುವನು. ಅಲ್ಲಿ ಅವನು ವಿಸ್ತಾರವಾದ ಭೋಗಗಳನ್ನು ಅನುಭವಿಸಿ ಮತ್ತೆ ಪವಿತ್ರ ತೀರ್ಥವನ್ನು ಸೇವಿಸುತ್ತಾನೆ.

ಯಃ ಶರೀರಂ ವಿಕರ್ತಿತ್ವಾ ಶಕುನಿಭ್ಯಃ ಪ್ರಯಚ್ಛತಿ ।
ವಿಹಂಗೈರುಪಭುಕ್ತಸ್ಯ ಶೃಣು ತಸ್ಯಾಪಿ ಯತ್ಫಲಮ್ ॥ ೧೧ ॥

ಶತಂ ವರ್ಷಸಹಸ್ರಾಣಾಂ ಸೋಮಲೋಕೇ ಮಹೀಯತೇ ।
ತತಸ್ತಸ್ಮಾತ್ಪರಿಭ್ರಷ್ಟೋ ರಾಜಾ ಭವತಿ ಧಾರ್ಮಿಕಃ ॥ ೧೨ ॥

ಗುಣವಾನ್ ರೂಪಸಂಪನ್ನೋ ವಿದ್ವಾಂಸ್ತು ಪ್ರಿಯವಾಕ್ಯವಾನ್ ।
ಭೋಗಾನ್ ಭುಕ್ತ್ವಾ ಚ ದತ್ತ್ವಾ ಚ ತತ್ತೀರ್ಥಂ ಭಜತೇ ಪುನಃ ॥೧೩॥

ಉತ್ತರೇ ಯಮುನಾತೀರೇ ಪ್ರಯಾಗಸ್ಯ ಚ ದಕ್ಷಿಣೇ ।
ಋಣಪ್ರಮೋಚನಂ ನಾಮ ತೀರ್ಥಂ ತು ಪರಮಂ ಸ್ಮೃತಮ್ ॥೧೪॥

---

೧೧. ಯಾವ ಮಾನವನು ಶರೀರದಲ್ಲಿಯೂ ಆದರವಿಲ್ಲದೆ ತನ್ನ ಅವಯವಗಳನ್ನು ಕತ್ತರಿಸಿ ಪಕ್ಷಿಗಳಿಗೆ ಆಹಾರವಾಗಿ ಅರ್ಪಿಸುವನೋ, ಅವನು ಮಹಾಪುಣ್ಯಶಾಲಿಯಾಗುವನು. ಪಕ್ಷಿಗಳಿಂದ ಭುಂಜಿಸಲ್ಪಟ್ಟ ಆ ಮಾನವನಿಗೆ ಲಭ್ಯವಾದ ಫಲವನ್ನು ಕೇಳು.

೧೨. ಒಂದುನೂರು ಸಹಸ್ರವರ್ಷಗಳವರೆಗೆ ಚಂದ್ರಲೋಕದಲ್ಲಿ ಪೂಜ್ಯನಾಗಿರುತ್ತಾನೆ. ಚಂದ್ರಲೋಕದಿಂದ ಭ್ರಷ್ಟನಾದನಂತರದಲ್ಲಿ ಧಾರ್ಮಿಕನೂ, ಗುಣವಂತನೂ, ಸುರೂಪಸಂಪನ್ನನೂ, ಜ್ಞಾನಿಯೂ ಮತ್ತು ಪ್ರಿಯವಚನಗಳನ್ನು ನುಡಿಯುವವನೂ ಆದ ರಾಜನಾಗಿ ಹುಟ್ಟುತ್ತಾನೆ.

೧೩. ಅಲ್ಲಿ ದುರ್ಲಭವಾದ ಸುಖಭೋಗಗಳನ್ನು ಅನುಭವಿಸಿ ಯಥೇಚ್ಛವಾಗಿ ದಾನಮಾಡಿ ಮತ್ತೆ ಆ ತೀರ್ಥವನ್ನು ಹೊಂದುತ್ತಾನೆ. ಯಮುನಾನದಿಯ ಉತ್ತರ ತೀರದಲ್ಲಿಯೂ ಪ್ರಯಾಗದ ದಕ್ಷಿಣಭಾಗದಲ್ಲಿಯೂ ಒಂದು ತೀರ್ಥವಿರುವುದು.

೧೪. ಆ ತೀರ್ಥವು ಋಣಮೋಚನವೆಂಬ ನಾಮಾಂಕಿತವಾದ ಉತ್ತಮ ತೀರ್ಥವೆಂದು ಸ್ಮರಿಸಲ್ಪಟ್ಟಿದೆ. ಆ ತೀರ್ಥದಲ್ಲಿ ಒಂದು ದಿನ ವಾಸಮಾಡಿ ಸ್ನಾನಮಾಡುವುದರಿಂದ ಋಣ ನಿರ್ಮುಕ್ತನಾಗುವನು.

ಏಕರಾತ್ರೋಷಿತಃ ಸ್ನಾತ್ವಾ ಋಣಾತ್ತತ್ರ ಪ್ರಮುಚ್ಯತೇ ।
ಸ್ವರ್ಗಲೋಕಮವಾ ತಿ ಅನೃಣಶ್ಚ ಸದಾ ಭವೇತ್ ॥ ೧೫ ॥

ಇತಿ ಶ್ರೀ ಕೂರ್ಮಪುರಾಣೇ ಅಷ್ಟತ್ರಿಂಶೋಽಧ್ಯಾಯಃ.

---

೧೬. ಮತ್ತು ಆ ಸ್ನಾನ ಪುಣ್ಯದಿಂದ ದೇಹಾಂತದಲ್ಲಿ ಸ್ವರ್ಗಲೋಕವನ್ನು ಹೊಂದಿ ಯಾವಾಗಲೂ ಋಣನಿರ್ಮುಕ್ತನಾಗಿಯೇ ಇರುವನು.

( ಕೂರ್ಮಪುರಾಣದಲ್ಲಿ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ

## ಏಕೋನಚತ್ವಾರಿಂಶೋಽಧ್ಯಾಯಃ.

**ಮಾರ್ಕಂಡೇಯ ಉವಾಚ :—**

**ತಪನಸ್ಯ ಸುತಾ ದೇವೀ ತ್ರಿಷು ಲೋಕೇಷು ವಿಶ್ರುತಾ ।**
**ಸಮಾಗತಾ ಮಹಾಭಾಗಾ ಯಮುನಾ ಯತ್ರ ನಿಮ್ನಗಾ ॥ ೧ ॥**

**ಯೇನೈವ ನಿಸ್ಸೃತಾ ಗಂಗಾ ತೇನೈವ ಯಮುನಾ ಗತಾ ।**
**ಯೋಜನಾನಾಂ ಸಹಸ್ರೇಷು ಕೀರ್ತನಾತ್ಪಾಪನಾಶಿನೀ ॥ ೨ ॥**

---

## ಮೂವತ್ತೊಂಭತ್ತನೆಯ ಅಧ್ಯಾಯವು

೧. ಮಾರ್ಕಂಡೇಯ ಮುನಿಯು ಹೀಗೆಂದು ಹೇಳಿದನು :—ಆ ಪವಿತ್ರ ಕ್ಷೇತ್ರದಲ್ಲಿ ಸೂರ್ಯನ ಪುತ್ರಿಯೂ, ಮೂರು ಲೋಕಗಳಲ್ಲಿ ಪ್ರಖ್ಯಾತಿಗೊಂಡಿತ ವುದೂ, ಮಹಾಪವಿತ್ರವೂ ಆದ ಯಮುನಾ ನದಿಯು ಹರಿಯುತ್ತಿರುವುದು.

೨. ಸಹಸ್ರಯೋಜನಗಳ ದೂರದಲ್ಲಿಯೂ ಕೀರ್ತನವಾಡಿದ ಮಾತ್ರದಿಂದ ಪಾಪಗಳನ್ನು ಶೋಧಿಸುವ ಯಮುನಾ ನದಿಯು ಗಂಗಾ ನದಿಯು ಪ್ರವಹಿಸಿದ ಮಾರ್ಗದಿಂದಲೇ ಪ್ರವಹಿಸುತ್ತಿರುವುದು.

ತತ್ರ ಸ್ನಾತ್ವಾ ಚ ಪೀತ್ವಾ ಚ ಯಮುನಾ ಯತ್ರ ನಿಮ್ನಗಾ ।
ಸರ್ವಪಾಪವಿನಿರ್ಮುಕ್ತಃ ಪುನಾತ್ಯಾಸಪ್ತಮಂ ಕುಲಮ್ ॥ ೩ ॥

ಪ್ರಾಣಾಂಸ್ತ್ಯಜತಿ ಯಸ್ತತ್ರ ಸ ಯಾತಿ ಪರಮಾಂ ಗತಿಮ್ ।
ಅಗ್ನಿತೀರ್ಥಮಿತಿ ಖ್ಯಾತಂ ಯಮುನಾದಕ್ಷಿಣೇ ತಟೇ ॥ ೪ ॥

ಪಶ್ಚಿಮೇ ಧರ್ಮರಾಜಸ್ಯ ತೀರ್ಥಂ ತ್ವನಕಶಕಂ ಸ್ಮೃತಮ್ ।
ತತ್ರ ಸ್ನಾತ್ವಾ ದಿವಂ ಯಾಂತಿ ಯೇ ಮೃತಾಸ್ತೇಽಪುನರ್ಭವಾಃ ॥ ೫ ॥

ಕೃಷ್ಣಪಕ್ಷೇ ಚತುರ್ದಶ್ಯಾಂ ಸ್ನಾತ್ವಾ ಸಂತರ್ಪ್ಯ ವೈ ಶುಚಿಃ ।
ಧರ್ಮರಾಜಂ ಮಹಾಪಾಪೈರ್ಮುಚ್ಯತೇ ನಾತ್ರ ಸಂಶಯಃ ॥ ೬ ॥

---

೩. ಆ ಯಮುನಾ ನದಿಯಲ್ಲಿ ಸ್ನಾನ ಪಾನಗಳನ್ನು ಮಾಡುವುದರಿಂದ ಸರ್ವಪಾಪಗಳಿಂದ ಬಿಡುಗಡೆ ಹೊಂದಿದ ಮಾನವನು ಸಪ್ತಪುರುಷರವರೆಗೆ ತನ್ನ ವಂಶವನ್ನು ಪವಿತ್ರಗೊಳಿಸುವನು.

೪. ಆ ಯಮುನಾ ನದಿಯಲ್ಲಿ ಪ್ರಾಣಗಳನ್ನು ತ್ಯಜಿಸಿದವನು ಉತ್ತಮವಾದ ಸದ್ಗತಿಯನ್ನು ಹೊಂದುತ್ತಾನೆ. ಯಮುನಾ ನದಿಯ ದಕ್ಷಿಣ ತೀರದಲ್ಲಿ ಅಗ್ನಿತೀರ್ಥವೆಂದು ಪ್ರಸಿದ್ಧವಾದ ಒಂದು ತೀರ್ಥವಿರುವುದು.

೫. ಮತ್ತು ಪಶ್ಚಿಮಭಾಗದಲ್ಲಿ ಧರ್ಮರಾಜ ತೀರ್ಥವೆಂಬ ನರಕಯಾತನೆಯನ್ನು ಶೋಧಿಸುವ ತೀರ್ಥವು ಸ್ಮರಿಸಲ್ಪಟ್ಟಿದೆ. ಅಲ್ಲಿ ಸ್ನಾನಮಾಡಿದ ಮಾನವರು ಸ್ವರ್ಗಲೋಕಕ್ಕೆ ಹೋಗುತ್ತಾರೆ. ಮತ್ತು ಅಲ್ಲಿ ಮರಣಹೊಂದಿದವರು ಪುನರ್ಜನ್ಮಕ್ಕೆ ಭಾಗಿಗಳಲ್ಲ..

೬. ಕೃಷ್ಣಪಕ್ಷದ ಚತುರ್ದಶೀ ತಿಥಿಯಲ್ಲಿ ಪವಿತ್ರನಾಗಿ ಆ ತೀರ್ಥದಲ್ಲಿ ಸ್ನಾನ ಮಾಡಿ ಯಮಧರ್ಮರಾಜನಿಗೆ ತರ್ಪಣಕೊಡುವುದರಿಂದ ನಿಸ್ಸಂಶಯವಾಗಿ ಸಮಸ್ತ ಪಾಪಗಳಿಂದ ಬಿಡಲ್ಪಡುವನು.

ದಶತೀರ್ಥಸಹಸ್ರಾಣಿ ದಶಕೋಟ್ಯಸ್ತಥಾಪರಾಃ ।
ಪ್ರಯಾಗಸಂಸ್ಥಿತಾನಿ ಸ್ಯುರೇವಮಾಹುರ್ಮನೀಷಿಣಃ ॥ ೭ ॥

ತಿಸ್ರಃ ಕೋಟ್ಯೋಽರ್ಧಕೋಟಿಶ್ಚ ತೀರ್ಥಾನಾಂ ವಾಯುರಬ್ರವೀತ್ ।
ದಿವಿ ಭೂಮ್ಯಂತರಿಕ್ಷೇ ಚ ತತ್ಸರ್ವಂ ಜಾಹ್ನವೀ ಸ್ಮೃತಾ ॥ ೮ ॥

ಯತ್ರ ಗಂಗಾ ಮಹಾಭಾಗಾ ಸ ದೇಶಸ್ತತ್ತಪೋವನಮ್ ।
ಸಿದ್ಧಕ್ಷೇತ್ರಂ ತು ತಜ್ಜ್ಞೇಯಂ ಗಂಗಾತೀರಂ ಸಮಾಶ್ರಿತಮ್ ॥ ೯ ॥

ಯತ್ರ ದೇವೋ ಮಹಾದೇವೋ ಮಾಧವೇನ ಮಹೇಶ್ವರಃ ।
ಆಸ್ತೇ ದೇವೇಶ್ವರೋ ನಿತ್ಯಂ ತತ್ತೀರ್ಥಂ ತತ್ತಪೋವನಮ್ ॥ ೧೦ ॥

---

೭. ಪ್ರಯಾಗ ಕ್ಷೇತ್ರದಲ್ಲಿ ಒಂದೆಡೆಯಲ್ಲಿ ಹತ್ತು ಸಹಸ್ರ ತೀರ್ಥಗಳೂ, ಇನ್ನೊಂದೆಡೆಯಲ್ಲಿ ಹತ್ತು ಕೋಟಿ ತೀರ್ಥಗಳೂ ಇರುವುವು-ಎಂಬುದಾಗಿ ಜ್ಞಾನಿಗಳು ಹೇಳುತ್ತಾರೆ.

೮. ಮೂರೂವರೆ ಕೋಟಿ ಸಂಖ್ಯೆಯ ಮಹಾತೀರ್ಥಗಳು ಪ್ರಯಾಗ ಪ್ರದೇಶದಲ್ಲಿ ಸ್ವರ್ಗ, ಭೂಮಿ ಮತ್ತು ಆಕಾಶ ಪ್ರದೇಶಗಳನ್ನು ವ್ಯಾಪಿಸಿಕೊಂಡಿವೆ-ಎಂದು ವಾಯುದೇವನು ಹೇಳಿರುವನು. ಆ ತೀರ್ಥಗಳ ಸಮಷ್ಟಿಯು ಜಾಹ್ನವೀ ನದಿಯೆಂದು ಸ್ಮರಿಸಲ್ಪಟ್ಟಿರುವುದು.

೯. ಯಾವ ಸ್ಥಳದಲ್ಲಿ ಮಹಾ ಪವಿತ್ರವಾದ ಗಂಗಾ ನದಿಯು ಪ್ರವಹಿಸುವುದೋ, ಆ ದೇಶವು ಉತ್ತಮವಾದ ತಪೋವನವು, ಮತ್ತು ಗಂಗಾ ತೀರವನ್ನು ಹೊಂದಿರುವ ಕ್ಷೇತ್ರವು ಸಿದ್ಧಕ್ಷೇತ್ರವೆಂದು ತಿಳಿಯಲ್ಪಡಬೇಕು.

೧೦. ಯಾವ ತೀರ್ಥದಲ್ಲಿ ದೇವತಾ ಪ್ರಭುವೂ, ಮಹಾದೇವನೂ ಆದ ಮಹೇಶ್ವರನು ವಿಷ್ಣುವಿನೊಡನೆ ಯಾವಾಗಲೂ ವಾಸಮಾಡುವನೋ, ಆ ತೀರ್ಥವೇ ಉತ್ತಮವಾದ ತೀರ್ಥವು, ಅದೇ ದೊಡ್ಡ ತಪೋವನವು.

ಇದಂ ಸತ್ಯಂ ದ್ವಿಜಾತೀನಾಂ ಸಾಧೂನಾಮಾತ್ಮಜಸ್ಯ ಚ ।
ಸುಹೃದಾಂ ಚ ಜಪೇತ್ಕರ್ಣೇ ಶಿಷ್ಯಸ್ಯಾನುಗತಸ್ಯ ಚ ॥ ೧೧ ॥

ಇದಂ ಧನ್ಯಮಿದಂ ಸ್ವರ್ಗ್ಯಮಿದಂ ಮೇಧ್ಯಮಿದಂ ಶುಭಮ್ ।
ಇದಂ ಪುಣ್ಯಮಿದಂ ರಮ್ಯಂ ಪಾವನಂ ಧರ್ಮ್ಯಮುತ್ತಮಮ್ ॥ ೧೨ ॥

ಮಹರ್ಷೀಣಾಮಿದಂ ಗುಹ್ಯಂ ಸರ್ವಪಾಪಪ್ರಮೋಚನಮ್ ।
ಅತ್ರಾಧೀತ್ಯ ದ್ವಿಜೋಽಧ್ಯಾಯಂ ನಿರ್ಮಲತ್ವಮವಾಪ್ನುಯಾತ್ ॥ ೧೩ ॥

ಯಶ್ಚೇದಂ ಶೃಣುಯಾನ್ನಿತ್ಯಂ ತೀರ್ಥಂ ಪುಣ್ಯಂ ಸದಾ ಶುಚಿಃ ।
ಜಾತಿಸ್ಮರತ್ವಂ ಲಭತೇ ನಾಕಪೃಷ್ಠೇ ಚ ಮೋದತೇ ॥ ೧೪ ॥

---

೧೧. ಈ ಸತ್ಯವಚನವನ್ನು ದ್ವಿಜರ, ಸಾಧುಗಳ, ಪುತ್ರರ, ಸ್ನೇಹಿತರ ಮತ್ತು ಶುಶ್ರೂಷಾ ನಿರತರಾದ ಶಿಷ್ಯರ ಕರ್ಣದಲ್ಲಿ ಜಪಿಸಬೇಕು.

೧೨. ಮಹೇಶ್ವರನ ಸನ್ನಿಧಿಯುಳ್ಳ ಕ್ಷೇತ್ರವು ಧನ್ಯವು. ಇದು ಸ್ವರ್ಗ ಸಾಧನವು. ಇದು ಪವಿತ್ರವು. ಇದು ಮಂಗಳಕರವು ಇದು ಪುಣ್ಯವು. ಇದು ರಮ್ಯವು. ಇದು ಪಾವನವು ಮತ್ತು ಇದೊಂದು ಉತ್ತಮವಾದ ಧರ್ಮಸಾಧನವು.

೧೩. ಮಹರ್ಷಿಗಳಿಗೆ ಕೂಡ ಗೋಪ್ಯವಾದ ಈ ಸತ್ಯಾರ್ಥವು ಸಮಸ್ತ ಪಾಪ ಗಳನ್ನು ಬಿಡಿಸಲು ಸಾಧನವು. ಈ ಪ್ರದೇಶದಲ್ಲಿ ದ್ವಿಜನು ಈ ಅಧ್ಯಾಯವನ್ನು ಜಪಿಸಿ ನಿರ್ಮಲತ್ವವನ್ನು ಹೊಂದುತ್ತಾನೆ.

೧೪. ಯಾವ ಮಾನವನು ಪವಿತ್ರನಾಗಿ ಪುಣ್ಯಕರವಾದ ಈ ತೀರ್ಥವನ್ನು ಪ್ರತಿನಿತ್ಯವೂ ಶ್ರವಣಮಾಡುವನೋ ಆವನು ಜಾತಿಸ್ಮರತ್ವವನ್ನು ಹೊಂದಿ ಸ್ವರ್ಗ ಲೋಕದ ಮೇಲ್ಭಾಗದಲ್ಲಿ ಸಂತೋಷದಿಂದಿರುತ್ತಾನೆ.

ಪ್ರಾಪ್ಯಂತೇ ತಾನಿ ತೀರ್ಥಾನಿ ಸದ್ಭಿಃ ಶಿಷ್ಟಾನುದರ್ಶಿಭಿಃ ।
ಸ್ನಾಹಿ ತೀರ್ಥೇಷು ಕೌರವ್ಯ ಮಾ ಚ ವಕ್ರಮತಿರ್ಭವ ॥ ೧೫ ॥

ಏವಮುಕ್ತ್ವಾ ಸ ಭಗವಾನ್ ಮಾರ್ಕಂಡೇಯೋ ಮಹಾಮುನಿಃ ।
ತೀರ್ಥಾನಿ ಕಥಯಾಮಾಸ ಪೃಥಿವ್ಯಾಂ ಯಾನಿ ಕಾನಿಚಿತ್ ॥ ೧೬ ॥

ಭೂಸಮುದ್ರಾದಿಸಂಸ್ಥಾನಂ ಗ್ರಹಾಣಾಂ ಜ್ಯೋತಿಷಾಂ ಸ್ಥಿತಿಮ್ ।
ಪೃಷ್ಟಃ ಪ್ರೋವಾಚ ಸಕಲಮುಕ್ತ್ವಾಥ ಪ್ರಯಯೌ ಮುನಿಃ ॥ ೧೭ ॥

**ಸೂತ ಉವಾಚ :—**

ಯ ಇದಂ ಕಲ್ಯಮುತ್ಥಾಯ ಶೃಣೋತಿ ಪಠತೇಽಥವಾ ।
ಮುಚ್ಯತೇ ಸರ್ವಪಾಪೈಸ್ತು ರುದ್ರಲೋಕಂ ಸ ಗಚ್ಛತಿ ॥ ೧೮ ॥

ಇತಿ ಶ್ರೀ ಕೂರ್ಮಪುರಾಣೇ ಏಕೋನಚತ್ವಾರಿಂಶೋಽಧ್ಯಾಯಃ.

---

೧೫. ಶಿಷ್ಟರಿಂದ ಉಪದೇಶವನ್ನು ಹೊಂದಿ ತತ್ತ್ವವನ್ನು ತಿಳಿದಿರುವ ಸಾಧುಗಳಿಂದ ಆ ಸಮಸ್ತ ತೀರ್ಥಗಳೂ ಹೊಂದಲ್ಪಡುತ್ತವೆ. ಪಾಂಡುಪುತ್ರನಾದ ಯುಧಿಷ್ಠಿರನೇ ! ಆ ತೀರ್ಥಗಳಲ್ಲಿ ಸ್ನಾನಮಾಡು. ವಕ್ರಬುದ್ಧಿಯನ್ನು ಮಾಡಬೇಡ.

೧೬. ಪೂಜ್ಯನಾದ ಆ ಮಾರ್ಕಂಡೇಯ ಮಹಾಮುನಿಯು ಈ ರೀತಿಯಾಗಿ ಪ್ರಯಾಗ ಕ್ಷೇತ್ರ ಮಾಹಾತ್ಮ್ಯೆಯನ್ನು ಹೇಳಿ ಭೂಮಿಯಲ್ಲಿರುವ ಆಯಾಯ ಇತರ ಅನೇಕ ತೀರ್ಥಗಳನ್ನು ಹೇಳಿದನು.

೧೭. ಮತ್ತು ಆ ಮುನಿಯು ಭೂಮಿ, ಸಮುದ್ರ, ಗ್ರಹ, ಜ್ಯೋತಿರ್ಮಂಡಲ ಇವುಗಳ ಸನ್ನಿವೇಶ ಮತ್ತು ಸ್ಥಿತಿಗಳನ್ನು ರಾಜನಿಂದ ಪ್ರಶ್ನಿಸಲ್ಪಟ್ಟವನಾಗಿ ಅದೆಲ್ಲವನ್ನೂ ವಿಸ್ತಾರವಾಗಿ ಹೇಳಿ ಮುಂದೆ ಪ್ರಯಾಣಮಾಡಿದನು.

೧೮. ಸೂತಮುನಿಯು ಹೀಗೆಂದು ಹೇಳಿದನು :–ಯಾವ ಮಾನವನು ಪ್ರಾತಃ ಕಾಲದಲ್ಲಿ ಎದ್ದು ಈ ಮಾಹಾತ್ಮ್ಯೆಯನ್ನು ಶ್ರವಣ ಅಥವಾ ಪಠನ ಮಾಡುವನೋ, ಅವನು ಸಮಸ್ತ ಪಾಪಗಳಿಂದ ಮುಕ್ತನಾಗಿ ರುದ್ರಲೋಕವನ್ನು ಹೊಂದುವನು.

( ಕೂರ್ಮಪುರಾಣದಲ್ಲಿ ಮೂವತ್ತೊಂಭತ್ತನೆಯ ಅಧ್ಯಾಯವು ಮುಗಿದದು)

---

ಶ್ರೀಃ

# ಕೂರ್ಮಪುರಾಣಂ

---

## ಚತ್ವಾರಿಂಶೋಽಧ್ಯಾಯಃ.

ಮುನಯ ಊಚುಃ :—

ಏವಮುಕ್ತಾಸ್ತು ಮುನಯೋ ನೈಮಿಷೀಯಾ ಮಹಾಮುನಿಮ್ ।
ಪಪ್ರಚ್ಛುರುತ್ತರಂ ಸೂತಂ ಪೃಥಿವ್ಯಾದಿವಿನಿರ್ಣಯಮ್ ॥ ೧ ॥

ಋಷಯ ಊಚುಃ :—

ಕಥಿತೋ ಭವತಾ ಸರ್ಗಃ ಮನುಃ ಸ್ವಾಯಂಭುವಃ ಶುಭಃ ।
ಇದಾನೀಂ ಶ್ರೋತುಮಿಚ್ಛಾಮಸ್ತ್ರಿಲೋಕಸ್ಯಾಸ್ಯ ಮಂಡಲಮ್ ॥ ೨ ॥

---

## ನಲವತ್ತನೆಯ ಅಧ್ಯಾಯವು

೧. ಮುನಿಗಳು ಹೀಗೆಂದು ಕೇಳಿದರು :— ಸೂತಮುನಿಯಿಂದ ಈ ರೀತಿಯಾಗಿ ಹೇಳಲ್ಪಟ್ಟ ನೈಮಿಷಾರಣ್ಯವಾಸಿಗಳಾದ ಮುನಿಗಳು ಸೂತಮಹಾಮುನಿಯನ್ನು ಕುರಿತು ಪೃಥಿವ್ಯಾದಿಗಳ ವಿನ್ಯಾಸದ ನಿರ್ಣಯವನ್ನು ಪ್ರಶ್ನಿಸಿದರು.

೨. ಋಷಿಗಳು ಹೀಗೆಂದರು :— ಮುನಿಯೆ ! ನಿನ್ನಿಂದ ಮಂಗಳಕರವಾದ ಸ್ವಾಯಂಭುವ ಮನುವಿನ ಸರ್ಗವು ಹಿಂದೆ ವರ್ಣಿಸಲ್ಪಟ್ಟಿದೆ. ಈಗ ತ್ರೈಲೋಕ್ಯದ ಮಂಡಲದ ವಿನ್ಯಾಸ ವಿಷಯವನ್ನು ಕೇಳಲು ಇಷ್ಟವನ್ನು ಹೊಂದಿದ್ದೇವೆ.

ಯಾವಂತಃ ಸಾಗರದ್ವೀಪಾಸ್ತಥಾ ವರ್ಷಾಣಿ ಪರ್ವತಾಃ ।
ವನಾನಿ ಸರಿತಃ ಸೂರ್ಯೋ ಗ್ರಹಾಣಾಂ ಸ್ಥಿತಿರೇವ ಚ ॥ ೩ ॥

ಯದಾಧಾರಮಿದಂ ಸರ್ವಂ ಯೇಷಾಂ ಪೃಥ್ವೀ ಪುರಾ ತ್ವಿಯಮ್ ।
ನೃಪಾಣಾಂ ತತ್ಸಮಾಸೇನ ತತ್ತ್ವದ್ವಕ್ತುಮಿಹಾರ್ಹಸಿ ॥ ೪ ॥

ಸೂತ ಉವಾಚ :—

ವಕ್ಷ್ಯೇ ದೇವಾಧಿದೇವಾಯ ವಿಷ್ಣವೇ ಪ್ರಭವಿಷ್ಣವೇ ।
ನಮಸ್ಕೃತ್ಯಾಪ್ರಮೇಯಾಯ ಯದುಕ್ತಂ ತೇನ ಧೀಮತಾ ॥ ೫ ॥

ಸ್ವಾಯಂಭುವಸ್ಯಾಸ್ಯ ಮನೋಃ ಪ್ರಾಗುಕ್ತೋ ಯಃ ಪ್ರಿಯವ್ರತಃ ।
ಪುತ್ರಸ್ತಸ್ಯಾಭವನ್ ಪುತ್ರಾಃ ಪ್ರಜಾಪತಿಸಮಾ ದಶ ॥ ೬ ॥

---

೩. ಸಾಗರ, ದ್ವೀಪ, ವರ್ಷ, ಪರ್ವತ, ವನ, ನದೀ, ಸೂರ್ಯ ಮತ್ತು ಗ್ರಹಗಳ ಸಂಖ್ಯೆ-ಸ್ಥಿತಿ-ರಚನಾ ಮುಂತಾದುವುಗಳನ್ನು ನಾವು ಕೇಳಬೇಕೆಂದಿರುವೆವು.

೪. ಇದೆಲ್ಲವೂ ಯಾವ ಆಧಾರದಿಂದ ನಿಂತಿರುವುದು ? ಪೂರ್ವದಲ್ಲಿ ಈ ಪೃಥಿವಿಯು ಯಾವ ರಾಜರಿಗೆ ಅಧೀನವಾಗಿದ್ದಿತು ? ಇದನ್ನು ಸಂಗ್ರಹವಾಗಿ ನೀನು ಹೇಳುವವನಾಗು.

೫. ಸೂತಮುನಿಯು ಹೇಳಿದನು :-ದೇವಾಧಿದೇವನೂ, ಸರ್ವಸಮರ್ಥನೂ, ಪ್ರಮಾಣಾತೀತನೂ ಮತ್ತು ಸರ್ವಜ್ಞನೂ ಆದ ಮಹಾ ವಿಷ್ಣುವಿನಿಂದ ಹೇಳಲ್ಪಟ್ಟಿರುವಂತೆ ಈ ವಿಷಯಗಳನ್ನು ಹೇಳುವೆನು.

೬. ಸ್ವಾಯಂಭುವ ಮನುವಿನ ಪುತ್ರ ಶ್ರೇಣಿಯಲ್ಲಿ ಪ್ರಿಯವ್ರತನೆಂಬುವನು ಹಿಂದೆ ಹೇಳಲ್ಪಟ್ಟಿರುವನು. ಅವನಿಗೆ ಪ್ರಜಾಪತಿ ಸಮಾನರಾದ ಹತ್ತುಮಂದಿ ಪುತ್ರರು ಇದ್ದರು.

ಅಗ್ನೀಧ್ರಶ್ಚಾಗ್ನಿಬಾಹುಶ್ಚ ವಪುಷ್ಮಾನ್ ದ್ಯುತಿಮಾಂಸ್ತಥಾ ।
ಮೇಧಾ ಮೇಧಾತಿಥಿರ್ಹವ್ಯಃ ಸವನಃ ಪುತ್ರ ಏವ ಚ ॥ ೭ ॥

ಜ್ಯೋತಿಷ್ಮಾನ್ ದಶಮಸ್ತೇಷಾಂ ಮಹಾಬಲಪರಾಕ್ರಮಃ ।
ಧಾರ್ಮಿಕೋ ದಾನನಿರತಃ ಸರ್ವಭೂತಾನುಕಂಪಕಃ ॥ ೮ ॥

ಮೇಧಾಗ್ನಿಬಾಹುಪುತ್ರಾಸ್ತು ತ್ರಯೋ ಯೋಗಪರಾಯಣಾಃ ।
ಜಾತಿಸ್ಮರಾ ಮಹಾಭಾಗಾ ನ ರಾಜ್ಯೇ ದಧಿರೇ ಮತಿಮ್ ॥ ೯ ॥

ಪ್ರಿಯವ್ರತೋಽಭ್ಯಷಿಂಚದ್ವೈ ಸಪ್ತದ್ವೀಪೇಷು ಸಪ್ತ ತಾನ್ ।
ಜಂಬುದ್ವೀಪೇಶ್ವರಂ ಪುತ್ರಮಾಗ್ನೀಧ್ರಮಕರೋನ್ನೃಪಃ ॥ ೧೦ ॥

---

೭. ಆ ಹತ್ತು ಮಂದಿಯಲ್ಲಿ ಮೊದಲನೆಯ ಒಂಭತ್ತು ಮಂದಿ ಅಗ್ನೀಧ್ರ ಅಗ್ನಿಬಾಹು, ವಪುಷ್ಮಾನ್, ದ್ಯುತಿಮಾನ್, ಮೇಧಾ, ಮೇಧಾತಿಥಿ, ಹವ್ಯ, ಸವನ ಮತ್ತು ಪುತ್ರ ಎಂಬ ಪವಿತ್ರನಾಮಾಂಕಿತರಾಗಿದ್ದಾರೆ.

೮. ಹತ್ತನೆಯವನು ಮಹಾಬಲ-ಪರಾಕ್ರಮಗಳಿಂದ ಕೂಡಿದವನೂ, ಧಾರ್ಮಿಕನೂ, ದಾನನಿರತನೂ, ಸರ್ವಭೂತಗಳಲ್ಲಿ ದಯಾವಂತನೂ ಮತ್ತು ಜ್ಯೋತಿಷ್ಮಾನ್ ಎಂಬ ನಾಮಾಂಕಿತನೂ ಆಗಿದ್ದನು.

೯. ಈ ಹತ್ತು ಮಂದಿಯಲ್ಲಿ ಮೇಧಾ-ಅಗ್ನಿಬಾಹು-ಪುತ್ರ ಎಂಬ ಮೂರು, ಮಂದಿಯು ಯೋಗಾಭ್ಯಾಸನಿರತರೂ, ಜಾತಿಸ್ಮರರೂ, ಮತ್ತು ಮಹಾಭಾಗ್ಯಶಾಲಿಗಳೂ ಆಗಿ ರಾಜ್ಯಭಾರದಲ್ಲಿ ಆಸಕ್ತಿಯನ್ನು ಹೊಂದಲಿಲ್ಲ.

೧೦. ಪ್ರಿಯವ್ರತನು ಮಿಕ್ಕ ಏಳುಮಂದಿ ಪುತ್ರರನ್ನು ಏಳು ದ್ವೀಪಗಳಲ್ಲಿ ಪಟ್ಟಾಭಿಷಿಕ್ತರನ್ನಾಗಿ ಮಾಡಿದನು. ಪ್ರಿಯವ್ರತರಾಜನು ಆಗ್ನೀಧ್ರನೆಂಬ ಪುತ್ರನನ್ನು ಜಂಬೂದ್ವೀಪಾಧಿಪತಿಯನ್ನಾಗಿ ಮಾಡಿದನು.

ಪ್ಲಕ್ಷದ್ವೀಪೇಶ್ವರಶ್ಚೈವ ತೇನ ಮೇಧಾತಿಥಿಃ ಕೃತಃ ।
ಶಾಲ್ಮಲೀಶಂ ವಪುಷ್ಮಂತಂ ನರೇಂದ್ರಮಭಿಷಿಕ್ತವಾನ್ ॥ ೧೧ ॥

ಜ್ಯೋತಿಷ್ಮಂತಂ ಕುಶದ್ವೀಪೇ ರಾಜಾನಂ ಕೃತವಾನ್ ಪ್ರಭುಃ ।
ದ್ಯುತಿಮಂತಂ ಚ ರಾಜಾನಂ ಕ್ರೌಂಚದ್ವೀಪೇ ಸಮಾದಿಶತ್ ॥ ೧೨ ॥

ಶಾಕದ್ವೀಪೇಶ್ವರಂ ಚಾಪಿ ಹವ್ಯಂ ಚಕ್ರೇ ಪ್ರಿಯವ್ರತಃ ।
ಪುಷ್ಕರಾಧಿಪತಿಂ ಚಕ್ರೇ ಸವನಂ ಚ ಪ್ರಜಾಪತಿಃ ॥ ೧೩ ॥

ಪುಷ್ಕರೇಶ್ವರತಶ್ಚಾಪಿ ಮಹಾವೀತಸುತೋಽಭವತ್ ।
ಧಾತಕಿಶ್ಚೈವ ದ್ವಾವೇತೌ ಪುತ್ರೌ ಪುತ್ರವತಾಂ ವರೌ ॥ ೧೪ ॥

---

೧೧. ಹಾಗು ಪ್ರಿಯವ್ರತನಿಂದ ಮೇಧಾತಿಥಿ ಎಂಬ ಪುತ್ರನು ಪ್ಲಕ್ಷದ್ವೀಪಾಧಿಪತಿಯಾಗಿ ಮಾಡಲ್ಪಟ್ಟನು. ವಪುಷ್ಮಾನ್ ಎಂಬ ಪುತ್ರನನ್ನು ಶಾಲ್ಮಲೀದ್ವೀಪದ ರಾಜನನ್ನಾಗಿ ಪಟ್ಟಗಟ್ಟಿದನು.

೧೨. ಪ್ರಭುವಾದ ಪ್ರಿಯವ್ರತರಾಜನು ಜ್ಯೋತಿಷ್ಮಂತನನ್ನು ಕುಶದ್ವೀಪದ ರಾಜನನ್ನಾಗಿ ಮಾಡಿದನು. ಹಾಗೂ ಕ್ರೌಂಚದ್ವೀಪದಲ್ಲಿ ದ್ಯುತಿಮಂತನನ್ನು ರಾಜನನ್ನಾಗಿ ನಿಯಮಿಸಿದನು.

೧೩. ಪ್ರಿಯವ್ರತರಾಜನು ಹವ್ಯ ಎಂಬ ಪುತ್ರನನ್ನು ಶಾಕದ್ವೀಪದ ಅಧಿಪತಿಯನ್ನಾಗಿ ಮಾಡಿದನು. ಪ್ರಜಾಪಾಲಕನಾದ ಪ್ರಿಯವ್ರತನು ಸವನ ಎಂಬುವನನ್ನು ಪುಷ್ಕರದ್ವೀಪಾಧಿಪತಿಯನ್ನಾಗಿ ಮಾಡಿದನು.

೧೪. ಪುಷ್ಕರರಾಜನಿಗೆ ಮಹಾವೀತ ಮತ್ತು ಧಾತಕಿ ಎಂಬ ಇಬ್ಬರು ಪುತ್ರರು ಜನಿಸಿದರು. ಆ ಇಬ್ಬರು ಪುತ್ರರು ಪುತ್ರವಂತರಲ್ಲಿ ಶ್ರೇಷ್ಠತೆಯನ್ನು ಗಳಿಸಿದ್ದರು.

ಮಹಾವೀತಂ ಸ್ಮೃತಂ ವರ್ಷಂ ತಸ್ಯ ಸ್ಯಾತ್ತು ಮಹಾತ್ಮನಃ ।
ನಾಮ್ನಾ ವೈ ಧಾತಕೇಶ್ಚಾಪಿ ಧಾತಕೀಖಂಡಮುಚ್ಯತೇ ॥ ೧೫ ॥

ಶಾಕದ್ವೀಪೇಶ್ವರಸ್ಯಾಪಿ ಹವ್ಯಸ್ಯಾಪ್ಯಭವನ್ ಸುತಾಃ ।
ಜಲದಶ್ಚ ಕುಮಾರಶ್ಚ ಸುಕುಮಾರೋ ಮಣೀಚಕಃ ॥ ೧೬ ॥

ಕುಶೋತ್ತರೋಽಥ ಮೋದಾಕಿಃ ಸಪ್ತಮಃ ಸ್ಯಾನ್ಮಹಾದ್ರುಮಃ ।
ಜಲದಂ ಜಲದಸ್ಯಾಥ ವರ್ಷಂ ಪ್ರಥಮಮುಚ್ಯತೇ ॥ ೧೭ ॥

ಕುಮಾರಸ್ಯ ತು ಕೌಮಾರಂ ತೃತೀಯಂ ಸುಕುಮಾರಕಮ್ ।
ಮಣೀಚಕಂ ಚತುರ್ಥಂ ಚ ಪಂಚಮಂ ಚ ಕುಶೋತ್ತರಮ್ ॥ ೧೮ ॥

---

೧೫. ಅವರಲ್ಲಿ ಮಹಾತ್ಮನಾದ ಮಹಾವೀತನೆಂಬ ಪುತ್ರನು ಆಳಿರುವ ಭಾಗವು ಮಹಾವೀತವರ್ಷವೆಂದು ಸ್ಮರಿಸಲ್ಪಟ್ಟಿತು. ಧಾತಕೀ ಎಂಬುವನ ವರ್ಷವು ಧಾತಕೀ ಖಂಡವೆಂದು ಕರೆಯಲ್ಪಟ್ಟಿದೆ.

೧೬. ಶಾಕದ್ವೀಪರಾಜನಾದ ಹವ್ಯ ಎಂಬುವನಿಗೆ ಜಲದ ಮುಂತಾದ ಪುತ್ರರಿದ್ದರು. ಅವರಲ್ಲಿ ಕೆಲವರು ಜಲದ, ಕುಮಾರ, ಸುಕುಮಾರ ಮತ್ತು ಮಣೀಚಕ ಎಂಬ ನಾಮಾಂಕಿತರಾಗಿದ್ದರು.

೧೭. ಮಿಕ್ಕ ಪುತ್ರರು ಕುಶೋತ್ತರ, ಮೋದಾಕಿ ಮತ್ತು ಮಹಾದ್ರುಮ ಎಂಬ ನಾಮಾಂಕಿತರಾಗಿದ್ದರು. ಇವರಲ್ಲಿ ಮೊದಲನೆಯವನಾದ ಜಲದನು ಆಳಿದ ವರ್ಷವು ಜಲದ ವರ್ಷವೆಂದು ಅಂಕಿಸಲ್ಪಟ್ಟಿದೆ.

೧೮. ಹಾಗೆ ಕುಮಾರನ ವರ್ಷವು ಕೌಮಾರ ವರ್ಷವೆಂದೂ, ಸುಕುಮಾರನ ವರ್ಷವು ಸುಕುಮಾರ ವರ್ಷವೆಂದೂ, ಮಣೀಚಕನ ವರ್ಷವು ಮಣೀಚಕ ವರ್ಷವೆಂದೂ ಮತ್ತು ಕುಶೋತ್ತರನ ವರ್ಷವು ಕುಶೋತ್ತರ ವರ್ಷವೆಂದೂ ನಾಮಾಂಕಿತವಾಗಿವೆ.

ಮೋದಾಕಂ ಷಷ್ಠಮಿತ್ಯುಕ್ತಂ ಸಪ್ತಮಂ ತು ಮಹಾದ್ರುಮಮ್ ।
ಕ್ರೌಂಚದ್ವೀಪೇಶ್ವರಸ್ಯಾಪಿ ಸುತಾ ದ್ಯುತಿಮತೋಽಭವನ್ ॥ ೧೯ ॥

ಕುಶಲಃ ಪ್ರಥಮಸ್ತೇಷಾಂ ದ್ವಿತೀಯಸ್ತು ಮನೋಹರಃ ।
ಉಷ್ಣಸ್ತೃತೀಯಃ ಸಂಪ್ರೋಕ್ತಶ್ಚತುರ್ಥಃ ಪೀವರಃ ಸ್ಮೃತಃ ॥ ೨೦ ॥

ಅಂಧಕಾರೋ ಮುನಿಶ್ಚೈವ ದುಂದುಭಿಶ್ಚೈವ ಸಪ್ತ ವೈ ।
ತೇಷಾಂ ಸ್ವನಾಮನಿರ್ದೇಶಾಃ ಕ್ರೌಂಚದ್ವೀಪಾಶ್ರಯಾಃ ಶುಭಾಃ॥ ೨೧ ॥

ಜ್ಯೋತಿಷ್ಮತಃ ಕುಶದ್ವೀಪೇ ಸಪ್ತೈವಾಸನ್ಮಹೌಜಸಃ ।
ಉದ್ಭೇದೋ ವೇಣುಮಾಂಶ್ಚೈವಾಶ್ವರಥೋ ಲಂಬನೋ ಧೃತಿಃ ॥ ೨೨ ॥

---

೧೯. ಮೋದಾಕಿಯ ವರ್ಷವು ಮೋದಾಕವರ್ಷವೆಂದೂ, ಏಳನೆಯ ಮಹಾದ್ರುಮನ ವರ್ಷವು ಮಹಾದ್ರುಮವರ್ಷವೆಂದೂ ಪ್ರಭುನಾಮಾಂಕಿತಗಳಾಗಿವೆ. ಕ್ರೌಂಚದ್ವೀಪದ ರಾಜನಾದ ದ್ಯುತಿಮಂತನಿಗೆ ಅನೇಕ ಪುತ್ರರಿದ್ದರು.

೨೦. ಅವರಲ್ಲಿ ಮೊದಲನೆಯವನು ಕುಶಲನೆಂದೂ, ದ್ವಿತೀಯನು ಮನೋಹರನೆಂದೂ, ತೃತೀಯನು ಉಷ್ಣ ಎಂದೂ ಮತ್ತು ನಾಲ್ಕನೆಯವನು ಪೀವರ ಎಂದೂ ನಾಮಗಳಿಂದ ಸ್ಮರಿಸಲ್ಪಟ್ಟಿರುವರು.

೨೧. ಹಾಗೂ ಅಂಧಕಾರ, ಮುನಿ, ದುಂದುಭಿ ಎಂಬ ಮೂವರು ಸೇರಿ ಏಳು ಮಂದಿ ಪುತ್ರರಿದ್ದರು. ಅವರು ಆಳಿದ ಕ್ರೌಂಚದ್ವೀಪದ ಆಶ್ರಯದಲ್ಲಿದ್ದ ಭಾಗಗಳು ಮಂಗಳಕರವೂ ತಮ್ಮ ನಾಮ ನಿರ್ದೇಶಗಳಿಂದ ಅಂಕಿತಗಳೂ ಆಗಿದ್ದುವು.

೨೨. ಮಹಾಪರಾಕ್ರಮಿಯೂ ಕುಶದ್ವೀಪರಾಜನೂ ಆದ ಜ್ಯೋತಿಷ್ಮಂತನಿಗೆ ಏಳುಮಂದಿ ಮಕ್ಕಳು ಇದ್ದರು. ಅವರಲ್ಲಿ ಐದು ಮಂದಿಯು ಉದ್ಭೇದವೇಣುಮಾನ್ ಅಶ್ವರಥ ಲಂಬನ ಮತ್ತು ಧೃತಿ ಎಂಬ ಪವಿತ್ರನಾಮಾಂಕಿತರಾಗಿದ್ದರು.

ಷಷ್ಠಃ ಪ್ರಭಾಕರಶ್ಚಾಪಿ ಸಪ್ತಮಃ ಕಪಿಲಃ ಸ್ಮೃತಃ ।
ಸ್ವನಾಮಚಿಹ್ನತಶ್ಚಾತ್ರ ತಥಾ ವರ್ಷಾಣಿ ಸುವ್ರತಾಃ ॥ ೨೩ ॥

ಜ್ಞೇಯಾನಿ ಚ ತಥಾನ್ಯೇಷು ದ್ವೀಪೇಷ್ವೇವಂ ನಯೋ ಮತಃ ।
ಶಾಲ್ಮಲಿದ್ವೀಪನಾಥಸ್ಯ ಸುತಾಶ್ಚಾಸನ್ ವಪುಷ್ಮತಃ ॥ ೨೪ ॥

ಶ್ವೇತಶ್ಚ ಹರಿತಶ್ಚೈವ ಜೀಮೂತೋ ರೋಹಿತಸ್ತಥಾ ।
ವೈದ್ಯುತೋ ಮಾನಸಶ್ಚೈವ ಸಪ್ತಮಃ ಸುಪ್ರಭೋ ಮತಃ ॥ ೨೫ ॥

ಪ್ಲಕ್ಷದ್ವೀಪೇಶ್ವರಸ್ಯಾಪಿ ಸಪ್ತ ಮೇಧಾತಿಥೇಃ ಸುತಾಃ ।
ಜ್ಯೇಷ್ಠಃ ಶಾಂತಮಯಸ್ತೇಷಾಂ ಶಿಶಿರಸ್ತು ಸುಖೋದಯಃ ॥ ೨೬ ॥

---

೨೩. ಮತ್ತು ಆರನೆಯವನು ಪ್ರಭಾಕರನೆಂದೂ, ಏಳನೆಯವನು ಕಪಿಲನೆಂದೂ, ಸಂಜ್ಞೆಯಿಂದ ಸ್ಮರಿಸಲ್ಪಟ್ಟಿರುವರು. ವ್ರತ ನಿಯಮ ಅನುಷ್ಠಾನ ಪರರೇ! ಅವರವರ ವರ್ಷಖಂಡಗಳು ರಾಜನಾಮಗಳಿಂದ ಅಂಕಿತಗಳಾಗಿದ್ದುವು.

೨೪. ಹೀಗೆ ಇತರ ಸಮಸ್ತ ದ್ವೀಪಗಳಲ್ಲಿಯೂ ಆಯಾಯ ದ್ವೀಪಖಂಡಗಳು ಪ್ರಭು ನಾಮಾಂಕಿತಗಳಾಗಿ ಇವೆ-ಎಂಬುದು ನ್ಯಾಯಸಮ್ಮತವು. ಶಾಲ್ಮಲದ್ವೀಪದ ರಾಜನಾದ ವಪುಷ್ಮಂತನಿಗೆ ಏಳುಮಂದಿ ಪುತ್ರರಿದ್ದರು.

೨೫. ಅವರಿಗೆ ಶ್ವೇತ, ಹರಿತ, ಜೀಮೂತ, ರೋಹಿತ, ವೈದ್ಯುತ, ಮಾನಸ ಮತ್ತು ಸುಪ್ರಭ ಎಂಬುದಾಗಿ ಕ್ರಮವಾದ ಪವಿತ್ರನಾಮಾಂಕನಗಳಿದ್ದುವು.

೨೬. ಪ್ಲಕ್ಷದ್ವೀಪದ ರಾಜನಾದ ಮೇಧಾತಿಥಿಗೆ ಏಳುಮಂದಿ ಪುತ್ರರಿದ್ದರು. ಅವರಲ್ಲಿ ಶಾಂತಮಯ ಎಂಬ ಜೇಷ್ಠ ಪುತ್ರನೂ, ಶಿಶಿರ, ಸುಖೋದಯ ಎಂಬ ದ್ವಿತೀಯ ತೃತೀಯ ಪುತ್ರರೂ ಇದ್ದರು.

ಆನಂದಶ್ಚ ಶಿವಶ್ಚೈವ ಕ್ಷೇಮಕಶ್ಚ ಧ್ರುವಸ್ತಥಾ ।
ಪ್ಲಕ್ಷದ್ವೀಪಾದಿಕೇ ಜ್ಞೇಯಾಃ ಶಾಕದ್ವೀಪಾಂತಿಕೇಷು ಚ ॥ ೨೭ ॥

ವರ್ಣಾನಾಂ ಚ ವಿಭಾಗೇನ ಸ್ವಧರ್ಮೋ ಮುಕ್ತಯೇ ಮತಃ ।
ಜಂಬುದ್ವೀಪೇಶ್ವರಸ್ಯಾಪಿ ಪುತ್ರಾಶ್ಚಾಸನ್ಮಹಾಬಲಾಃ ॥ ೨೮ ॥

ಅಗ್ನೀಧ್ರಸ್ಯ ದ್ವಿಜಶ್ರೇಷ್ಠಾಸ್ತನ್ನಾಮಾನಿ ನಿಬೋಧತ ।
ನಾಭಿಃ ಕಿಂಪುರುಷಶ್ಚೈವ ತಥಾ ಹರಿರಿಲಾವೃತಃ ॥ ೨೯ ॥

ರಮ್ಯೋ ಹಿರಣ್ಮಾಂಶ್ಚ ಕುರುರ್ಭದ್ರಾಶ್ವಃ ಕೇತುಮಾಲಕಃ ।
ಜಂಬುದ್ವೀಪೇಶ್ವರೋ ರಾಜಾ ಸ ಚಾಗ್ನೀಧ್ರೋ ಮಹಾಮತಿಃ ॥ ೩೦ ॥

---

೨೭. ಮಿಕ್ಕ ನಾಲ್ಕುಮಂದಿಯು ಆನಂದ, ಶಿವ, ಕ್ಷೇಮ, ಧ್ರುವ ಎಂಬ ನಾಮಾಂಕಿತರಾಗಿದ್ದರು. ಪ್ಲಕ್ಷದ್ವೀಪ ಮೊದಲುಗೊಂಡು ಶಾಕದ್ವೀಪದವರೆಗೂ ಮುಕ್ತಿಸಾಧನವಾದ ಧರ್ಮವ್ಯವಸ್ಥೆಗಳಿದ್ದುವು.

೨೮. ಆ ದ್ವೀಪಗಳಲ್ಲಿ ವರ್ಣಗಳಿಗೆ ವಿಭಾಗದಿಂದ ಕೂಡಿದ ಸ್ವಧರ್ಮವು ಮುಕ್ತಿಸಾಧನವೆಂದು ಸಮ್ಮತವಾಗಿತ್ತು. ಜಂಬೂದ್ವೀಪದ ಪ್ರಭುವಾದ ಅಗ್ನೀಧ್ರನಿಗೆ ಮಹಾಬಲಿಷ್ಠರಾದ ಅನೇಕ ಪುತ್ರರಿದ್ದರು.

೨೯. ದ್ವಿಜೋತ್ತಮರೇ! ಅಗ್ನಿಧ್ರರಾಜನ ಪುತ್ರರ ನಾಮಾಂಕನಗಳನ್ನು ಕೇಳಿರಿ. ನಾಭಿ, ಕಿಂಪುರುಷ, ಹರಿ, ಇಲಾವೃತ ಎಂಬ ನಾಮಗಳಿಂದ ಕೆಲವರು ಪ್ರಸಿದ್ಧರಾಗಿದ್ದರು.

೩೦. ಮತ್ತೆ ಕೆಲವರು ರಮ್ಯ, ಹಿರಣ್ವಾನ್, ಕುರು, ಭದ್ರಾಶ್ವ ಮತ್ತು ಕೇತು ಮಾಲಕ ಎಂಬ ನಾಮಗಳಿಂದ ಅಂಕಿತರಾಗಿದ್ದರು. ಜಂಬೂದ್ವೀಪರಾಜನೂ ಮಹಾ ವಿವೇಕಿಯೂ ಆದ ಅಗ್ನೀಧ್ರನರ ಪತಿಯು ರಾಜ್ಯವನ್ನು ಪುತ್ರರಲ್ಲಿ ವಿಂಗಡಿಸಿ ಕೊಟ್ಟನು.

ವಿಭಜ್ಯ ನವಧಾ ತೇಭ್ಯೋ ಯಥಾನ್ಯಾಯಂ ದದೌ ಪುನಃ ।
ನಾಭೇಸ್ತು ದಕ್ಷಿಣಂ ವರ್ಷಂ ಹಿಮಾಹ್ವಂ ಪ್ರದದೌ ಪಿತಾ ॥ ೩೧ ॥

ಹೇಮಕೂಟಂ ತತೋ ವರ್ಷಂ ದದೌ ಕಿಂಪುರುಷಾಯ ಸಃ ।
ತೃತೀಯಂ ನಿಷಧಂ ವರ್ಷಂ ಹರಯೇ ದತ್ತವಾನ್ ಪಿತಾ ॥ ೩೨ ॥

ಇಲಾವೃತಾಯ ಪ್ರದದೌ ಮೇರುಮಧ್ಯಮಿಲಾವೃತಮ್ ।
ನೀಲಾದ್ರೇರಾವೃತಂ ವರ್ಷಂ ರಮ್ಯಾಯ ಪ್ರದದೌ ಪಿತಾ ॥ ೩೩ ॥

ಶ್ವೇತಂ ಯದುತ್ತರಂ ವರ್ಷಂ ಪಿತ್ರಾ ದತ್ತಂ ಹಿರಣ್ವತೇ ।
ಯದುತ್ತರಂ ಶೃಂಗವತೋ ವರ್ಷಂ ತತ್ಕುರವೇ ದದೌ ॥ ೩೪ ॥

---

೩೧. ತನ್ನ ದ್ವೀಪವನ್ನು ನ್ಯಾಯಸಮ್ಮತವಾಗಿ ಒಂಭತ್ತುಭಾಗವಾಗಿ ಮಾಡಿ ಅವುಗಳನ್ನು ಎಲ್ಲರಿಗೂ ಕೊಟ್ಟನು. ತಂದೆಯಾದ ಅಗ್ನೀಧ್ರನು ನಾಭಿ ಎಂಬ ಪುತ್ರನಿಗೆ ಹಿಮಾಲಯ ವರ್ಷವೆಂದು ಪ್ರಸಿದ್ಧವಾದ ದಕ್ಷಿಣ ವರ್ಷವನ್ನು ಕೊಟ್ಟನು.

೩೨. ಮತ್ತು ತಂದೆಯಾದ ಅಗ್ನೀಧ್ರನು ಕಿಂಪುರುಷನೆಂಬ ಪುತ್ರನಿಗೆ ಹೇಮ ಕೂಟವರ್ಷವನ್ನು ಕೊಟ್ಟನು. ಮತ್ತು ಮೂರನೆಯದಾದ ನಿಷಧವರ್ಷವನ್ನು ಹರಿ ಎಂಬ ಪುತ್ರನಿಗೆ ವಶಮಾಡಿ ಕೊಟ್ಟನು.

೩೩. ಮತ್ತು ಜನಕನಾದ ಅಗ್ನೀಧ್ರನು ಇಲಾವೃತನೆಂಬ ಪುತ್ರನಿಗೆ ಮೇರು ಗಿರಿಯ ಮಧ್ಯದಲ್ಲಿರುವ ಇಲಾವೃತಖಂಡವನ್ನೂ, ರಮ್ಯ ಎಂಬ ಪುತ್ರನಿಗೆ ನೀಲಾದ್ರಿ ಯಿಂದ ಮುಚ್ಚಿದ ನೀಲವರ್ಷವನ್ನೂ ಕೊಟ್ಟನು.

೩೪. ಶ್ವೇತ ಎಂದು ಪ್ರಸಿದ್ಧವಾದ ಉತ್ತರ ವರ್ಷವು ತಂದೆಯಿಂದ ಹಿರಣ್ವಾನ್ ಎಂಬ ಪುತ್ರನಿಗೆ ಕೊಡಲ್ಪಟ್ಟಿತು. ಮೇರುಪರ್ವತದ ಉತ್ತರವರ್ಷವನ್ನು ಅಗ್ನೀಧ್ರನು ಕುರು ಎಂಬ ಪುತ್ರನಿಗೆ ಕೊಟ್ಟನು.

ಮೇರೋಃ ಪೂರ್ವೇಣ ಯದ್ವರ್ಷಂ ಭದ್ರಾಶ್ವಾಯ ನ್ಯವೇದಯತ್ ।
ಗಂಧಮಾದನವರ್ಷಂ ತು ಕೇತುಮಾಲಾಯ ದತ್ತವಾನ್ ॥ ೩೫ ॥

ವರ್ಷೇಷ್ವೇತೇಷು ತಾನ್ ಪುತ್ರಾನಭ್ಯಷಿಂಚನ್ನರಾಧಿಪಃ ।
ಸಂಸಾರಾಸಾರತಾಂ ಜ್ಞಾತ್ವಾ ತಪಸ್ತಪ್ತುಂ ವನಂ ಗತಃ ॥ ೩೬ ॥

ಹಿಮಾಹ್ವಯಂ ತು ಯದ್ವರ್ಷಂ ನಾಭೇರಾಸೀನ್ಮಹಾತ್ಮನಃ ।
ತಸ್ಯರ್ಷಭೋಽಭವತ್ಪುತ್ರೋ ಮೇರುದೇವ್ಯಾಂ ಮಹಾದ್ಯುತಿಃ ॥ ೩೭ ॥

ಋಷಭಾದ್ಭರತೋ ಜಜ್ಞೇ ವೀರಃ ಪುತ್ರಶತಾಗ್ರಜಃ ।
ಸೋಽಭಿಷಿಚ್ಯರ್ಷಭಃ ಪುತ್ರಂ ಭರತಂ ಪೃಥಿವೀಪತಿಃ ॥ ೩೮ ॥

---

೩೫. ಮೇರುಪರ್ವತದ ಪೂರ್ವಭಾಗದ ವರ್ಷವನ್ನು ಭದ್ರಾಶ್ವನಿಗೆ ನಿವೇದಿಸಿದನು. ಹಾಗು ಗಂಧಮಾದನ ಎಂಬ ವರ್ಷವನ್ನು ಕೇತುಮಾಲ ಎಂಬ ಪುತ್ರನಿಗೆ ಕೊಟ್ಟನು.

೩೬. ಅಗ್ನೀಧ್ರರಾಜನು ಆಯಾಯ ವರ್ಷಖಂಡಗಳಲ್ಲಿ ತನ್ನ ಪುತ್ರರನ್ನು ಪಟ್ಟಾಭಿಷೇಕಮಾಡಿ ಸಂಸಾರದ ನಿಸ್ಸಾರತೆಯನ್ನು ಭಾವಿಸಿ ತಪಸ್ಸನ್ನು ಮಾಡಲು ಅರಣ್ಯಕ್ಕೆ ಹೊರಟುಹೋದನು.

೩೭. ಹಿಮಾಲಯವೆಂಬ ನಾಮಾಂಕಿತವಾದ ವರ್ಷಖಂಡಕ್ಕೆ ಅಧಿಪತಿಯೂ, ಮಹಾತ್ಮನೂ ಆದ ನಾಭಿರಾಜನಿಗೆ ಮೇರುದೇವೀ ಎಂಬ ರಾಣಿಯಲ್ಲಿ ಮಹಾತೇಜಸ್ವಿಯಾದ ಋಷಭ ಎಂಬ ಪುತ್ರನು ಜನಿಸಿದನು.

೩೮. ಆ ಋಷಭನಿಗೆ ವೀರನೂ, ನೂರುಮಂದಿ ಪುತ್ರರಿಗೆ ಅಗ್ರಜನೂ ಆದ ಭರತ ಎಂಬ ಪುತ್ರನು ಜನಿಸಿದನು. ಆ ಋಷಭರಾಜನು ತನ್ನ ಪುತ್ರನಾದ ಭರತನಿಗೆ ಪಟ್ಟಗಟ್ಟಿ ರಾಜ್ಯಾಶ್ರಮದಲ್ಲಿ ಕುಳ್ಳಿರಿಸಿದನು.

ವಾನಪ್ರಸ್ಥಾಶ್ರಮಂ ಗತ್ವಾ ತಪಸ್ತೇಪೇ ಯಥಾವಿಧಿ ।
ತಪಸಾ ಕರ್ಷಿತೋಽತ್ಯರ್ಥಂ ಕೃಶೋಽಯಮನಿಶಂ ತತಃ ॥ ೩೯ ॥

ಜ್ಞಾನಯೋಗರತೋ ಭೂತ್ವಾ ಮಹಾಪಾಶುಪತೋಽಭವತ್ ।
ಸುಮತಿರ್ಭರತಸ್ಯಾಪಿ ಪುತ್ರಃ ಪರಮಧಾರ್ಮಿಕಃ ॥ ೪೦ ॥

ಸುಮತೇಸ್ತೈಜಸಸ್ತಸ್ಮಾದಿಂದ್ರದ್ಯುಮ್ನೋ ಮಹಾದ್ಯುತಿಃ ।
ಪರಮೇಷ್ಠೀ ಸುತಸ್ತಸ್ಮಾತ್ ಪ್ರತೀಹಾರಸ್ತದನ್ವಯಃ ॥ ೪೧ ॥

ಪ್ರತಿಹರ್ತೇತಿ ವಿಖ್ಯಾತ ಉತ್ಪನ್ನಸ್ತಸ್ಯ ಚಾತ್ಮಜಃ ।
ಭವಸ್ತಸ್ಮಾದಥೋದ್ಗೀಥಃ ಪ್ರಸ್ತಾವಿಸ್ತತ್ಸುತೋಽಭವತ್ ॥ ೪೨ ॥

---

೩೯. ಮತ್ತು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ಯಥಾವಿಧಿಯಾಗಿ ತಪಸ್ಸನ್ನು ಆಚರಿಸಿದನು. ತಪಶ್ಚರ್ಯೆಯಿಂದ ಹೆಚ್ಚಾಗಿ ಸೆಳೆಯಲ್ಪಟ್ಟ ಆ ರಾಜನು ಹಗಲು ಮತ್ತು ರಾತ್ರಿವೇಳೆಗಳಲ್ಲಿ ಕ್ಷೀಣನಾಗುತ್ತ ಬಂದನು.

೪೦. ಮತ್ತು ಜ್ಞಾನಯೋಗದಲ್ಲಿ ನಿರತನಾಗಿ ಮಹಾ ಪಾಶುಪತನಾದನು. ಭರತನಿಗೆ ಪರಮಧಾರ್ಮಿಕನಾದ ಸುಮತಿ ಎಂಬ ಪುತ್ರನು ಹುಟ್ಟಿದನು.

೪೧. ಸುಮತಿಗೆ ತೈಜಸ ಎಂಬುವನೂ, ಅವನಿಗೆ ಮಹಾತೇಜಸ್ವಿಯಾದ ಇಂದ್ರದ್ಯುಮ್ನ ಎಂಬುವನೂ, ಅವನಿಗೆ ಪರಮೇಷ್ಠೀ ಎಂಬುವನೂ ಮತ್ತು ಅವನಿಗೆ ಪ್ರತೀಹಾರ ಎಂಬುವನೂ ಪುತ್ರರಾಗಿ ಆ ವಂಶದಲ್ಲಿ ಜನಿಸಿದರು.

೪೨. ಆ ಪ್ರತೀಹಾರನಿಗೆ ಪ್ರತಿಹರ್ತಾ ಎಂದು ಪ್ರಸಿದ್ಧನಾದ ಪುತ್ರನು ಹುಟ್ಟಿದನು. ಅವನಿಂದ ಭವ ಎಂಬ ಪುತ್ರನೂ, ತರುವಾಯ ಉದ್ಗೀಥ ಎಂಬ ಪುತ್ರನೂ, ಅವನಿಂದ ಪ್ರಸ್ತಾವಿ ಎಂಬ ಪುತ್ರನೂ ಜನಿಸಿದರು.

ಪೃಥುಸ್ತತಸ್ತತೋ ನಕ್ತೋ ನಕ್ತಸ್ಯಾಪಿ ಗಯಃ ಸ್ಮೃತಃ ।
ನರೋ ಗಯಸ್ಯ ತನಯಸ್ತಸ್ಯ ಭೂಯೋ ವಿರಾಡಭೂತ್ ॥ ೪೩ ॥

ತಸ್ಯ ಪುತ್ರೋ ಮಹಾವೀರ್ಯೋ ಧೀಮಾಂಸ್ತಸ್ಮಾದಜಾಯತ ।
ಧೀಮತೋಽಪಿ ತತಶ್ಚಾಭೂದ್ರೌವಣಸ್ತತ್ಸುತೋಽಭವತ್ ॥ ೪೪ ॥

ತ್ವಷ್ಟಾ ತ್ವಷ್ಟುಶ್ಚ ವಿರಜೋ ರಜಸ್ತಸ್ಮಾದಭೂತ್ಸುತಃ ।
ಶತಜಿದ್ರಥಜಿತ್ತಸ್ಯ ಜಜ್ಞೇ ಪುತ್ರಶತಂ ದ್ವಿಜಾಃ ॥ ೪೫ ॥

ತೇಷಾಂ ಪ್ರಧಾನೋ ಬಲವಾನ್ ವಿಶ್ವಜ್ಯೋತಿರಿತಿ ಸ್ಮೃತಃ ।
ಆರಾಧ್ಯ ದೇವಂ ಬ್ರಹ್ಮಾಣಂ ಕ್ಷೇಮಕಂ ನಾಮ ಪಾರ್ಥಿವಮ್ ॥ ೪೬ ॥

---

೪೩. ಪ್ರಸ್ತಾವಿಯ ಪುತ್ರನು ನಕ್ತ ಎಂಬ ನಾಮದಿಂದಲೂ, ನಕ್ತನ ಪುತ್ರನು ಗಯ ಎಂಬ ನಾಮದಿಂದಲೂ, ಗಯನ ಪುತ್ರನು ನರ ಎಂಬ ನಾಮದಿಂದಲೂ ಮತ್ತು ನರನ ಪುತ್ರನು ವಿರಾಟ್ ಎಂಬ ನಾಮದಿಂದಲೂ ಅಂಕಿತರಾಗಿದ್ದರು.

೪೪. ವಿರಾಟ್ ಎಂಬುವನಿಗೆ ಮಹಾವೀರ್ಯಶಾಲಿಯಾದ ಧೀಮಾನ್ ಎಂಬ ಪುತ್ರನೂ ಆ ಧೀಮಂತನಿಗೆ ರೌವಣ ಎಂಬ ಪುತ್ರನೂ ಜನಿಸಿದರು.

೪೫. ರೌವಣನಿಗೆ ತ್ವಷ್ಟ ಎಂಬುವನೂ, ಅವನಿಗೆ ವಿರಜ ಎಂಬುವನೂ, ಅವನಿಗೆ ರಜ ಎಂಬುವನೂ, ಅವನಿಗೆ ಶತಜಿತ್ ಎಂಬುವನೂ ಮತ್ತು ಅವನಿಗೆ ರಥಜಿತ್ ಎಂಬುವನೂ ಪುತ್ರರಾಗಿ ಜನಿಸಿದರು, ದ್ವಿಜರೇ! ರಥಜಿತನಿಗೆ ಒಂದುನೂರು ಮಂದಿ ಪುತ್ರರಿದ್ದರು.

೪೬. ಆ ನೂರುಮಂದಿ ಪುತ್ರರಲ್ಲಿ ಪ್ರಧಾನನೂ ಬಲಿಷ್ಠನೂ ಆದ ಪುತ್ರನು ವಿಶ್ವಜ್ಯೋತಿ ಎಂಬ ಹೆಸರಿನಿಂದ ಸ್ಮರಿಸಲ್ಪಟ್ಟಿದ್ದನು. ಅವನು ಬ್ರಹ್ಮದೇವನನ್ನು ಆರಾಧಿಸಿ ಕ್ಷೇಮಕರಾಜನೆಂದು ಪ್ರಸಿದ್ಧನಾದ ಪುತ್ರನನ್ನು ಹೊಂದಿದನು.

ಅಸೂತ ಪುತ್ರಂ ಧರ್ಮಜ್ಞಂ ಮಹಾಬಾಹುಮರಿಂದಮಮ್ ।
ಏತೇ ಪುರಸ್ತಾದ್ರಾಜಾನೋ ಮಹಾಸತ್ತ್ವಾ ಮಹೌಜಸಃ ॥ ೪೭ ॥

ಏಷಾಂ ವಂಶಪ್ರಸೂತೈಸ್ತು ಭುಕ್ತೇಯಂ ಪೃಥಿವೀ ಪುರಾ ॥ ೪೮ ॥

ಇತಿ ಶ್ರೀ ಕೂರ್ಮಪುರಾಣೇ ಚತ್ವಾರಿಂಶೋಽಧ್ಯಾಯಃ.

---

೪೭. ಆ ವಿಶ್ವಜ್ಯೋತಿಯ ಪುತ್ರನಾದ ಕ್ಷೇಮಕರಾಜನು ಧರ್ಮಜ್ಞನೂ ಮಹಾಬಾಹುಬಲಶಾಲಿಯೂ ಮತ್ತು ಶತ್ರುನಿಗ್ರಹಿಯೂ ಆಗಿದ್ದನು. ಹೀಗೆ ಮಹಾಸತ್ವವಂತರೂ ಮಹಾಬಲಶಾಲಿಗಳೂ ಆದ ಈ ರಾಜರು ಪೂರ್ವದಲ್ಲಿ ಭೂಮಿಯನ್ನು ಆಳಿರುವರು.

೪೮. ಹೀಗೆ ಹಿಂದೆ ವರ್ಣಿಸಿದ ಅನೇಕರಾಜರ ಮಹಾವಂಶಗಳಲ್ಲಿ ಹುಟ್ಟಿದ ರಾಜಪುತ್ರರಿಂದ ಈ ಸಮಸ್ತ ಭೂಮಂಡಲವು ಪೂರ್ವದಲ್ಲಿ ಧರ್ಮದಿಂದ ಆಳಲ್ಪಟ್ಟಿರುವುದು.

( ಕೂರ್ಮಪುರಾಣದಲ್ಲಿ ನಲವತ್ತನೆಯ ಅಧ್ಯಾಯವು ಮುಗಿದುದು )

ಶ್ರೀಃ

# ಕೂರ್ಮಪುರಾಣಂ



## ಏಕಚತ್ವಾರಿಂಶೋಽಧ್ಯಾಯಃ.

**ಸೂತ ಉವಾಚ :—**

**ಅತಃ ಪರಂ ಪ್ರವಕ್ಷ್ಯಾಮಿ ಸಂಕ್ಷೇಪೇಣ ದ್ವಿಜೋತ್ತಮಾಃ ।**
**ತ್ರೈಲೋಕ್ಯಸ್ಯಾಸ್ಯ ಮಾನಂ ವೋ ನ ಶಕ್ಯಂ ವಿಸ್ತರೇಣ ತು ॥ ೧ ॥**

**ಭೂರ್ಲೋಕೋಽಥ ಭುವರ್ಲೋಕಃ ಸ್ವರ್ಲೋಕೋಽಥ ಮಹಸ್ತಥಾ ।**
**ಜನಸ್ತಪಶ್ಚ ಸತ್ಯಂ ಚ ಲೋಕಾಸ್ತ್ವಂಡೋದ್ಭವಾಸ್ತಥಾ ॥ ೨ ॥**

---

## ನಲವತ್ತೊಂದನೆಯ ಅಧ್ಯಾಯವು.

೧. ಸೂತಮುನಿಯು ಹೀಗೆಂದು ಹೇಳಿದನು :—ದ್ವಿಜೋತ್ತಮರೇ! ಇನ್ನು ಮುಂದೆ ಈ ತ್ರಿಲೋಕದ ಪರಿಮಾಣವನ್ನು ನಿಮಗೆ ಸಂಕ್ಷೇಪವಾಗಿ ವರ್ಣಿಸುತ್ತೇನೆ. ಇದನು ವಿಸ್ತಾರವಾಗಿ ವರ್ಣಿಸುವುದು ಸಾಧ್ಯವಲ್ಲ.

೨. ಬ್ರಹ್ಮನ ಅಂಡದಿಂದ ಹುಟ್ಟಿರುವ ಸಪ್ತಲೋಕಗಳು ಭೂರ್ಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕಗಳೆಂದು ಪ್ರಸಿದ್ಧವಾಗಿವೆ.

ಸೂರ್ಯಾಚಂದ್ರಮಸೌ ಯಾವತ್ಕಿರಣೈರೇವ ಭಾಸತಃ ।
ತಾವದ್ಭೂಲೋಕ ಆಖ್ಯಾತಃ ಪುರಾಣೇ‌ऽದ್ವಿಜಪುಂಗವಾಃ ॥ ೩ ॥

ಯಾವತ್ಪ್ರಮಾಣೋ ಭೂಲೋಕೋ ವಿಸ್ತರಾತ್ಪರಿಮಂಡಲಾತ್ ।
ಭುವಲೋಕೋऽಪಿ ತಾವತ್ ಸ್ಯಾನ್ಮಂಡಲಾದ್ಭಾಸ್ಕರಸ್ಯ ತು ॥ ೪ ॥

ಊರ್ಧ್ವಂ ಯನ್ಮಂಡಲಂ ವ್ಯೋಮ್ನಿ ಧ್ರುವೋ ಯಾವದ್ವ್ಯವಸ್ಥಿತಃ ।
ಸ್ವರ್ಗಲೋಕಃ ಸಮಾಖ್ಯಾತಸ್ತತ್ರ ವಾಯೋಸ್ತು ನೇಮಯಃ ॥ ೫ ॥

ಆವಹಃ ಪ್ರವಹಶ್ಚೈವ ತಥೈವಾನುವಹಃ ಪುನಃ ।
ಸಂವಹೋ ವಿವಹಶ್ಚೈವ ತದೂರ್ಧ್ವಂ ಸ್ಯಾತ್ಪರಾವಹಃ ॥ ೬ ॥

---

೩. ದ್ವಿಜಶ್ರೇಷ್ಠರೇ ! ಸೂರ್ಯ ಚಂದ್ರರು ತಮ್ಮ ಕಿರಣ ಪ್ರಕಾಶದಿಂದ ಎಷ್ಟು ಭಾಗವನ್ನು ಪ್ರಕಾಶಪಡಿಸುವರೋ, ಅಷ್ಟು ಭಾಗವು ಭೂಲೋಕವೆಂದು ಪುರಾಣದಲ್ಲಿ ವಿವರಿಸಲ್ಪಟ್ಟಿದೆ.

೪. ಭೂಲೋಕವು ವಿಸ್ತಾರ ಮತ್ತು ವರ್ತುಲಾಕಾರದಲ್ಲಿ ಎಷ್ಟು ಪ್ರಮಾಣದಿಂದ ಕೂಡಿದೆಯೋ, ಸೂರ್ಯಮಂಡಲದ ಮೇಲುಗಡೆ ಇರುವ ಭುವರ್ಲೋಕವು ಅಷ್ಟು ಪ್ರಮಾಣದಿಂದ ಕೂಡಿರುವುದು.

೫. ಸೂರ್ಯಮಂಡಲದ ಮೇಲುಗಡೆಯಲ್ಲಿ ಆಕಾಶದ ಎಷ್ಟು ಅಂತರದಲ್ಲಿ ಧ್ರುವಮಂಡಲವು ವ್ಯವಸ್ಥೆಹೊಂದಿದೆಯೋ, ಆ ಭಾಗವು ಸ್ವರ್ಗಲೋಕವೆಂದು ಕರೆಯಲ್ಪಟ್ಟಿದೆ. ಅಲ್ಲಿ ವಾಯುವಿನ ಸಪ್ತವ್ಯೂಹಗಳು ಚಲಿಸುತ್ತಿವೆ.

೬. ವಾಯುವಿನ ಸ್ಕಂಧಗಳಲ್ಲಿ-ಆವಹ, ಪ್ರವಹ, ಅನುವಹ, ಸಂವಹ, ವಿವಹ, ಮತ್ತು ಪರಾವಹ ಎಂಬುದಾಗಿ ಮೊದಲನೆಯ ಆರು ಸ್ಕಂಧಗಳು ಪ್ರಖ್ಯಾತವಾಗಿವೆ.

ತಥಾ ಪರಿವಹಶ್ಚೈವ ವಾಯೋರ್ವೈ ಸಪ್ತನೇಮಯಃ ।
ಭೂಮೇರ್ಯೋಜನಲಕ್ಷೇ ತು ಭಾನೋರ್ವೈ ಮಂಡಲಂ ಸ್ಥಿತಮ್ ॥೭॥

ಲಕ್ಷೇ ದಿವಾಕರಸ್ಯಾಪಿ ಮಂಡಲಂ ಶಶಿನಃ ಸ್ಮೃತಮ್ ।
ನಕ್ಷತ್ರಮಂಡಲಂ ಕೃತ್ಸ್ನಂ ತಲ್ಲಕ್ಷೇಣ ಪ್ರಕಾಶತೇ ॥ ೮ ॥

ದ್ವಿಲಕ್ಷೇ ಹ್ಯಂತರೇ ವಿಪ್ರಾ ಬುಧೋ ನಕ್ಷತ್ರಮಂಡಲಾತ್ ।
ತಾವತ್ಪ್ರಮಾಣಭಾಗೇ ತು ಬುಧಸ್ಯಾಪ್ಯುಶನಾಃ ಸ್ಥಿತಃ ॥ ೯ ॥

ಅಂಗಾರಕೋಽಪಿ ಶುಕ್ರಸ್ಯ ತತ್ಪ್ರಮಾಣೇ ವ್ಯವಸ್ಥಿತಃ ।
ಲಕ್ಷದ್ವಯೇನ ಭೌಮಸ್ಯ ಸ್ಥಿತೋ ದೇವಪುರೋಹಿತಃ ॥ ೧೦ ॥

---

೭. ಹಾಗು ಪರಿವಹ ಎಂಬುದು ಸಪ್ತಮಸ್ಕಂಧವು. ಹೀಗೆ ವಾಯುವಿಗೆ ಸಪ್ತ ಸ್ಕಂಧಗಳು ಪ್ರಸಿದ್ಧವಾಗಿವೆ. ಭೂಮಿಗಿಂತ ಒಂದು ಲಕ್ಷಯೋಜನ ದೂರದಲ್ಲಿ ಸೂರ್ಯನ ಮಂಡಲವು ಪ್ರಕಾಶಮಾನವಾಗಿರುವುದು.

೮. ಸೂರ್ಯನ ಮಂಡಲಕ್ಕಿಂತ ಒಂದು ಲಕ್ಷಯೋಜನ ದೂರದಲ್ಲಿ ಚಂದ್ರ ಮಂಡಲದ ಸ್ಥಿತಿಯು ಸ್ಮರಿಸಲ್ಪಟ್ಟಿದೆ. ಅದಕ್ಕಿಂತ ಒಂದು ಲಕ್ಷಯೋಜನ ದೂರದಲ್ಲಿ ಸಂಪೂರ್ಣವಾದ ನಕ್ಷತ್ರಮಂಡಲವು ಪ್ರಕಾಶಿಸುತ್ತಿದೆ.

೯. ವಿಪ್ರರೇ! ನಕ್ಷತ್ರ ಮಂಡಲಕ್ಕಿಂತ ಎರಡು ಲಕ್ಷ ದೂರದ ಅಂತರದಲ್ಲಿ ಬುಧಗ್ರಹವಿರುವುದು. ಬುಧನ ಮಂಡಲಕ್ಕಿಂತ ಅಷ್ಟೇ ಪ್ರಮಾಣದ ದೂರದಲ್ಲಿ ಶುಕ್ರ ಗ್ರಹ ಮಂಡಲವು ಸ್ಥಿತಿಯನ್ನು ಹೊಂದಿದೆ.

೧೦. ಶುಕ್ರ ಮಂಡಲದಮೇಲೆ ಅದೇ ಪ್ರಮಾಣ ದೂರದಲ್ಲಿ ಅಂಗಾರಕ ಗ್ರಹವು ವ್ಯವಸ್ಥಿತವಾಗಿದೆ. ಅಂಗಾರಕ ಮಂಡಲಕ್ಕಿಂತ ಎರಡು ಲಕ್ಷ ಯೋಜನ ದೂರದಲ್ಲಿ ದೇವತೆಗಳ ಪುರೋಹಿತನಾದ ಬೃಹಸ್ಪತಿಯು ಇರುವನು.

ಸೌರಿರ್ದ್ವಿಲಕ್ಷೇಣ ಗುರೋರ್ಗ್ರಹಾಣಾಮಥ ಮಂಡಲಾತ್ ।
ಸಪ್ತರ್ಷಿಮಂಡಲಂ ತಸ್ಮಾಲ್ಲಕ್ಷಮಾತ್ರೇ ಪ್ರಕಾಶತೇ ॥ ೧೧ ॥

ಋಷೀಣಾಂ ಮಂಡಲಾದೂರ್ಧ್ವಂ ಲಕ್ಷಮಾತ್ರೇ ಸ್ಥಿತೋ ಧ್ರುವಃ ।
ತತ್ರ ಧರ್ಮಃ ಸ ಭಗವಾನ್ ವಿಷ್ಣುರ್ನಾರಾಯಣಃ ಸ್ಥಿತಃ ॥ ೧೨ ॥

ನವಯೋಜನಸಾಹಸ್ರೋ ವಿಷ್ಕಂಭಃ ಸವಿತುಃ ಸ್ಮೃತಃ ।
ತ್ರಿಗುಣಸ್ತಸ್ಯ ವಿಸ್ತಾರೋ ಮಂಡಲಸ್ಯ ಪ್ರಮಾಣತಃ ॥ ೧೩ ॥

ದ್ವಿಗುಣಃ ಸೂರ್ಯವಿಸ್ತಾರಾದ್ವಿಸ್ತಾರಃ ಶಶಿನಃ ಸ್ಮೃತಃ ।
ತುಲ್ಯಸ್ತಯೋಸ್ತು ಸ್ವರ್ಭಾನುರ್ಭೂತ್ವಾ ತಾಸುಪಸರ್ಪತಿ ॥ ೧೪ ॥

---

೧೧. ಬೃಹಸ್ಪತಿ ಮಂಡಲಕ್ಕಿಂತ ಎರಡು ಲಕ್ಷ ಯೋಜನ ದೂರದಲ್ಲಿ ಶನಿ ಗ್ರಹವು ಇರುವುದು. ಹೀಗೆ ಗ್ರಹಗಳ ಮಂಡಲದ ಮೇಲ್ಭಾಗದಲ್ಲಿ ಒಂದು ಲಕ್ಷ ಯೋಜನ ದೂರದಲ್ಲಿ ಸಪ್ತರ್ಷಿ ಮಂಡಲವು ಪ್ರಕಾಶಿಸುವುದು.

೧೨. ಸಪ್ತರ್ಷಿ ಮಂಡಲದ ಮೇಲ್ಭಾಗದಲ್ಲಿ ಲಕ್ಷಯೋಜನ ದೂರದಲ್ಲಿ ಧ್ರುವ ಮಂಡಲವು ಇರುವುದು. ಅಲ್ಲಿ ಪೂಜ್ಯನೂ, ವ್ಯಾಪಕನೂ, ಧರ್ಮ ಮೂರ್ತಿಯೂ ಆದ ಶ್ರೀಮನ್ನಾರಾಯಣನು ಇರುವನು.

೧೩. ಸೂರ್ಯಮಂಡಲದ ವಿಷ್ಕಂಭ ಪರಿಮಾಣವು ಒಂಭತ್ತು ಸಹಸ್ರ ಯೋಜನ ಪರಿಮಿತವಾಗಿ ಸ್ಮರಿಸಲ್ಪಟ್ಟಿದೆ. ಆ ಮಂಡಲದ ಪರಿಮಾಣಕ್ಕಿಂತ ಅದರ ವಿಸ್ತಾರವು ತ್ರಿಗುಣಿತವಾಗಿರುವುದು.

೧೪. ಸೂರ್ಯಮಂಡಲದ ವಿಸ್ತಾರಕ್ಕಿಂತ ದ್ವಿಗುಣವಾಗಿ ಚಂದ್ರ ಮಂಡಲದ ವಿಸ್ತಾರವು ವರ್ಣಿಸಲ್ಪಟ್ಟಿದೆ. ಆ ಸೂರ್ಯ ಚಂದ್ರರಿಗೆ ರಾಹುವು ತುಲ್ಯಪ್ರಮಾಣನಾಗಿ ಆ ಸೂರ್ಯ ಚಂದ್ರರನ್ನು ಸಂಧಿಸುತ್ತಾನೆ.

ಉದ್ಧೃತ್ಯ ಪೃಥಿವೀಚ್ಛಾಯಾಂ ನಿರ್ಮಿತೋ ಮಂಡಲಾಕೃತಿಃ ।
ಸ್ವರ್ಭಾನೋಸ್ತು ಬೃಹತ್ ಸ್ಥಾನಂ ತೃತೀಯಂ ಯತ್ತಮೋಮಯಮ್॥

ಚಂದ್ರಸ್ಯ ಷೋಡಶೋ ಭಾಗೋ ಭಾರ್ಗವಸ್ಯ ವಿಧೀಯತೇ ।
ಭಾರ್ಗವಾತ್ಪಾದಹೀನಸ್ತು ವಿಜ್ಞೇಯೋ ವೈ ಬೃಹಸ್ಪತಿಃ ॥ ೧೬ ॥

ಬೃಹಸ್ಪತೇಃ ಪಾದಹೀನೌ ಭೌಮಸೌರಾವುಭೌ ಸ್ಮೃತೌ ।
ವಿಸ್ತಾರಾನ್ಮಂಡಲಾಚ್ಚೈವ ಪಾದಹೀನಸ್ತಯೋರ್ಬುಧಃ ॥ ೧೭ ॥

ತಾರಾನಕ್ಷತ್ರರೂಪಾಣಿ ವಪುಷ್ಮಂತೀಹ ಯಾನಿ ವೈ ।
ಬುಧೇನ ತಾನಿ ತುಲ್ಯಾನಿ ವಿಸ್ತಾರಾನ್ಮಂಡಲಾತ್ತಥಾ ॥ ೧೮ ॥

---

೧೫. ಪೃಥಿವಿಯ ಛಾಯೆಯನ್ನು ಸಂಗ್ರಹಿಸಿ ಮಂಡಲಾಕಾರವಾಗಿ ರಾಹು ಗ್ರಹವು ನಿರ್ಮಿಸಲ್ಪಟ್ಟಿರುವುದು. ಆ ರಾಹುವಿನ ಅಂಧಕಾರಮಯವಾದ ದೊಡ್ಡ ಸ್ಥಾನವು ಮೂರನೆಯದಾಗಿರುವುದು.

೧೬. ಚಂದ್ರಮಂಡಲದ ಪ್ರಮಾಣದಲ್ಲಿ ಹದಿನಾರನೆಯ ಒಂದು ಭಾಗವು ಶುಕ್ರಮಂಡಲಕ್ಕೆ ಇರುವುದೆಂದು ಹೇಳಲ್ಪಟ್ಟಿದೆ. ಬೃಹಸ್ಪತಿಯು ಶುಕ್ರಮಂಡಲದ ಪ್ರಮಾಣದಲ್ಲಿ ಒಂದು ಪಾದಾಂಶದಿಂದ ನ್ಯೂನನಾಗಿ ತಿಳಿಯಲ್ಪಡಬೇಕು.

೧೭. ಹಾಗೆ ವಿಸ್ತಾರ ಮತ್ತು ವರ್ತುಲಾಕಾರಗಳಲ್ಲಿ ಅಂಗಾರಕ, ಶನೈಶ್ಚರ ರಿಬ್ಬರೂ ಬೃಹಸ್ಪತಿಯ ಪರಿಮಾಣದಲ್ಲಿ ಪಾದಾಂಶದಲ್ಲಿ ನ್ಯೂನರಾಗಿರುವರು. ಬುಧನು ಅಂಗಾರಕ ಶನೈಶ್ಚರರಿಗಿಂತ ಪಾದಾಂಶ ಮಾತ್ರದಿಂದ ನ್ಯೂನನಾಗಿರುವನು.

೧೮. ತಾರಕೆ ಅಥವಾ ನಕ್ಷತ್ರರೂಪದ ಆಕಾರಗಳನ್ನು ಧರಿಸಿದ ಯಾವ ಮಂಡಲಗಳಿವೆಯೋ, ಅವೆಲ್ಲವೂ ವಿಸ್ತಾರಮಂಡಲಗಳ ಪ್ರಮಾಣದಲ್ಲಿ ಬುಧಗ್ರಹನಿಗೆ ತುಲ್ಯವಾಗಿರುವುವು.

ತಾರಾನಕ್ಷತ್ರರೂಪಾಣಿ ಹೀನಾನಿ ತು ಪರಸ್ಪರಮ್ ।
ಶತಾನಿ ಪಂಚಚತ್ವಾರಿ ತ್ರೀಣಿ ದ್ವೇ ಚೈವ ಯೋಜನೇ ॥ ೧೯ ॥

ಪೂರ್ವಾಪರಾನುಕೃಷ್ಟಾನಿ ತಾರಕಾಮಂಡಲಾನಿ ತು ।
ಯೋಜನಾದ್ಯರ್ಧಮಾತ್ರಾಣಿ ತೇಭ್ಯೋ-ಹ್ರಸ್ವಂ ನ ವಿದ್ಯತೇ ॥ ೨೦ ॥

ಉಪರಿಷ್ಟಾತ್ತ್ರಯಸ್ತೇಷಾಂ ಗ್ರಹಾ ವೈ ದೂರಸರ್ಪಿಣಃ ।
ಸೌರೋಽಂಗಿರಾಶ್ಚ ವಕ್ರಶ್ಚ ಜ್ಞೇಯೋ ಮಂದವಿಚಾರಣಃ ॥ ೨೧ ॥

ತೇಭ್ಯೋಽಧಸ್ತಾಚ್ಚ ಚತ್ವಾರಃ ಪುನರನ್ಯೇ ಮಹಾಗ್ರಹಾಃ ।
ಸೂರ್ಯಃ ಸೋಮೋ ಬುಧಶ್ಚೈವ ಭಾರ್ಗವಶ್ಚೈವ ಶೀಘ್ರಗಾಃ ॥೨೨॥

---

೧೯. ತಾರಕೆ ಮತ್ತು ನಕ್ಷತ್ರರೂಪವಾದ ಮಂಡಲಗಳು ಅನ್ಯೋನ್ಯವಾಗಿ ಪ್ರಮಾಣಗಳಿಂದ ಹೀನವಾಗುತ್ತ ಬಂದು ಐವತ್ತುನೂರು ಯೋಜನಗಳ ದೂರದಲ್ಲಿ ಪ್ರಕಾಶಿಸುತ್ತಿರುವುವು.

೨೦. ಪೂರ್ವ ಅಪರ ಭಾಗಗಳಿಂದ ಸೆಳೆಯಲ್ಪಟ್ಟಂತಿರುವ ನಕ್ಷತ್ರಗಳು ಯೋಜನ ಮೊದಲುಗೊಂಡು ಅರ್ಧಯೋಜನಮಾತ್ರ ಪ್ರಮಾಣದಿಂದ ಕೂಡಿವೆ. ಅದಕ್ಕಿಂತಲೂ ಹ್ರಸ್ವವಾದ ಮಂಡಲವು ಇರುವುದಿಲ್ಲ.

೨೧. ಆ ನಕ್ಷತ್ರಮಂಡಲಗಳ ಮೇಲ್ಭಾಗದಲ್ಲಿ ಬಹುದೂರದಲ್ಲಿ ಸಂಚರಿಸುವ ಶನೈಶ್ಚರ ಬೃಹಸ್ಪತಿ ಮತ್ತು ಅಂಗಾರಕ ಗ್ರಹರು ಮಂದವಾದ ಗತಿಯುಳ್ಳವರೆಂದು ತಿಳಿಯಲ್ಪಡಬೇಕು.

೨೨. ಆ ಮೂರು ಗ್ರಹಗಳಿಗಿಂತ ಕೆಳಭಾಗದಲ್ಲಿರುವ ಸೂರ್ಯ, ಸೋಮ, ಬುಧ ಮತ್ತು ಶುಕ್ರ ಎಂಬ ಇತರ ನಾಲ್ಕು ಮಹಾಗ್ರಹಗಳು ಶೀಘ್ರವಾದ ಗತಿಯುಳ್ಳವರಾಗಿರುವರು.

ದಕ್ಷಿಣಾಯನಮಾರ್ಗಸ್ಥೋ ಯದಾ ಚರತಿ ರಶ್ಮಿಮಾನ್ ।
ತದಾ ಪೂರ್ವಗ್ರಹಾಣಾಂ ವೈ ಸೂರ್ಯೋಽಧಸ್ತಾತ್ಪ್ರಸರ್ಪತಿ ॥ ೨೩ ॥

ವಿಸ್ತೀರ್ಣಂ ಮಂಡಲಂ ಕೃತ್ವಾ ತಸ್ಯೋರ್ಧ್ವಂ ಚರತೇ ಶಶೀ ।
ನಕ್ಷತ್ರಮಂಡಲಂ ಕೃತ್ಸ್ನಂ ಸೋಮಾದೂರ್ಧ್ವಂ ಪ್ರಸರ್ಪತಿ ॥ ೨೪ ॥

ನಕ್ಷತ್ರೇಭ್ಯೋ ಬುಧಶ್ಚೋರ್ಧ್ವಂ ಬುಧಾದೂರ್ಧ್ವಂ ತು ಭಾರ್ಗವಃ ।
ವಕ್ರಸ್ತು ಭಾರ್ಗವಾದೂರ್ಧ್ವಂ ವಕ್ರಾದೂರ್ಧ್ವಂ ಬೃಹಸ್ಪತಿಃ ॥ ೨೫ ॥

ತಸ್ಮಾಚ್ಛನೈಶ್ಚರೋಽಪ್ಯೂರ್ಧ್ವಂ ತಸ್ಮಾತ್ ಸಪ್ತರ್ಷಿಮಂಡಲಮ್ ।
ಋಷೀಣಾಂ ಚೈವ ಸಪ್ತಾನಾಂ ಧ್ರುವಶ್ಚೋರ್ಧ್ವಂ ವ್ಯವಸ್ಥಿತಃ ॥ ೨೬ ॥

---

೨೩. ಸೂರ್ಯನು ಯಾವ ಸಮಯದಲ್ಲಿ ದಕ್ಷಿಣಾಯನ ಮಾರ್ಗದಲ್ಲಿ ಸಂಚರಿಸುವನೋ, ಆಗ ಪೂರ್ವ ಗ್ರಹಗಳ ಕೆಳಭಾಗದಲ್ಲಿ ಸೂರ್ಯನು ನಡೆಯುತ್ತಲಿರುವನು.

೨೪. ಆಗ ಚಂದ್ರನು ತನ್ನ ಮಂಡಲವನ್ನು ಹೆಚ್ಚು ವಿಸ್ತೀರ್ಣವನ್ನಾಗಿಮಾಡಿ ಸೂರ್ಯನ ಮೇಲ್ಭಾಗದಲ್ಲಿ ಸಂಚರಿಸುವನು. ಸಂಪೂರ್ಣವಾದ ನಕ್ಷತ್ರಮಂಡಲವು ಚಂದ್ರಮಂಡಲದ ಮೇಲ್ಭಾಗದಲ್ಲಿ ಸಂಚರಿಸುವುದು.

೨೫. ನಕ್ಷತ್ರಮಂಡಲದಮೇಲೆ ಬುಧಗ್ರಹವೂ, ಬುಧಗ್ರಹದ ಮೇಲೆ ಶುಕ್ರ ಗ್ರಹವೂ, ಶುಕ್ರ ಗ್ರಹದಮೇಲೆ ಅಂಗಾರಕ ಗ್ರಹವೂ, ಅಂಗಾರಕ ಗ್ರಹದ ಮೇಲ್ಭಾಗದಲ್ಲಿ ಬೃಹಸ್ಪತಿ ಗ್ರಹವೂ ಸಂಚರಿಸುವರು.

೨೬. ಬೃಹಸ್ಪತಿಗ್ರಹಕ್ಕಿಂತ ಮೇಲ್ಭಾಗದಲ್ಲಿ ಶನಿಗ್ರಹವೂ, ಶನಿಗ್ರಹಮಂಡಲಕ್ಕಿಂತ ಮೇಲೆ ಸಪ್ತರ್ಷಿಮಂಡಲವೂ, ಸಪ್ತರ್ಷಿಮಂಡಲದ ಮೇಲುಭಾಗದಲ್ಲಿ ಧ್ರುವಮಂಡಲವೂ ಪ್ರಕಾಶಿಸುವುವು.

ಯೋಜನಾನಾರಿ ಸಹಸ್ರಾಣಿ ಭಾಸ್ಕರಸ್ಯ ರಥೋ ನವ ।
ಈಷಾದಂಡಸ್ತಥಾ ತಸ್ಯ ದ್ವಿಗುಣೋ ದ್ವಿಜಸತ್ತಮಾಃ ॥ ೨೭ ॥

ಸಾರ್ಧಕೋಟಿಸ್ತಥಾ ಸಪ್ತ ನಿಯುತಾನ್ಯಧಿಕಾನಿ ತು ।
ಯೋಜನಾನಾಂ ತು ತಸ್ಯಾಕ್ಷಸ್ತತ್ರ ಚಕ್ರಂ ಪ್ರತಿಷ್ಠಿತಮ್ ॥ ೨೮ ॥

ತ್ರಿನಾಭಿಸಪ್ತೇ ಪಂಚಾರೇ ಷಣ್ನೇಮಿನ್ಯಕ್ಷಯಾತ್ಮಕೇ ।
ಸಂವತ್ಸರಮಯಂ ಕೃತ್ಸ್ನಂ ಕಾಲಚಕ್ರಂ ಪ್ರತಿಷ್ಠಿತಮ್ ॥ ೨೯ ॥

ಚತ್ವಾರಿಂಶತ್ಸಹಸ್ರಾಣಿ ದ್ವಿತೀಯಾಕ್ಷೋ ವ್ಯವಸ್ಥಿತಃ ।
ಪಂಚಾಶಯಾನಿ ಸಾರ್ಧಾನಿ ಯೋಜನಾನಿ ದ್ವಿಜೋತ್ತಮಾಃ ॥ ೩೦ ॥

---

೨೭. ದ್ವಿಜಶ್ರೇಷ್ಠರೇ ! ಸೂರ್ಯನ ರಥವು ಒಂಭತ್ತು ಸಹಸ್ರಯೋಜನ ಪ್ರಮಾಣಗಳಿಂದ ಕೂಡಿರುವುದು. ಅದರ ಈಷಾದಂಡವು ದ್ವಿಗುಣವಾಗಿ ಸ್ಮರಿಸಲ್ಪಟ್ಟಿದೆ.

೨೮. ಒಂದು ಕೋಟಿ ಐವತ್ತು ಲಕ್ಷದ ಏಳು ನಿಯುತಗಳಷ್ಟು ಯೋಜನ ಪ್ರಮಾಣದಲ್ಲಿ ರಥದ ಅಕ್ಷದಂಡವಿರುವುದು. ಅದರಲ್ಲಿ ಚಕ್ರವು ಪ್ರತಿಷ್ಠೆಹೊಂದಿರುವುದು.

೨೯. ಮೂರು ನಾಭಿಗಳಿಂದಲೂ, ಐದು ಅರಗಳಿಂದಲೂ, ಆರು ನೇಮಿಗಳಿಂದಲೂ ಕೂಡಿದ ಅಕ್ಷಯಸ್ವರೂಪವಾದ ಸೂರ್ಯರಥದ ಚಕ್ರದಲ್ಲಿ ಸಂವತ್ಸರಾತ್ಮಕವಾದ ಸಂಪೂರ್ಣ ಕಾಲಚಕ್ರವು ಪ್ರತಿಷ್ಠಿತವಾಗಿದೆ.

೩೦. ದ್ವಿಜಶ್ರೇಷ್ಠರೇ ! ನಲವತ್ತೈದೂವರೆ ಸಹಸ್ರ ಯೋಜನಗಳ ಮಹಾಪ್ರಮಾಣದಲ್ಲಿ ಇರುವ ಎರಡನೆಯ ಅಕ್ಷದಂಡವು ಸೂರ್ಯನ ರಥದಲ್ಲಿ ವ್ಯವಸ್ಥಿತವಾಗಿದೆ, ಎಂದು ತಿಳಿಯಬೇಕು.

ಅಕ್ಷಪ್ರಮಾಣಮುಭಯೋಃ ಪ್ರಮಾಣಂ ತದ್ಯುಗಾರ್ಧಯೋಃ ।
ಹ್ರಸ್ವೋಽಕ್ಷಸ್ತದ್ಯುಗಾರ್ಧೇನ ಧ್ರುವಾಧಾರೋ ರಥಸ್ಯ ತು ॥ ೩೧ ॥

ದ್ವಿತೀಯೇಽಕ್ಷೇ ತು ತಚ್ಚಕ್ರಂ ಸಂಸ್ಥಿತಂ ಮಾನಸಾಚಲೇ ।
ಹಯಾಶ್ಚ ಸಪ್ತ ಛಂದಾಂಸಿ ತನ್ನಾಮಾನಿ ನಿಬೋಧತ ॥ ೩೨ ॥

ಗಾಯತ್ರೀ ಚ ಬೃಹತ್ಯುಷ್ಣಿಕ್ ಜಗತೀ ಪಂಕ್ತಿರೇವ ಚ ।
ಅನುಷ್ಟುಪ್ ತ್ರಿಷ್ಟುಬಪ್ಯುಕ್ತಾ ಛಂದಾಂಸಿ ಹರಯೋ ಹರೇಃ ॥ ೩೩ ॥

ಮಾನಸೋಪರಿ ಮಾಹೇಂದ್ರೀ ಪ್ರಾಚ್ಯಾಂ ದಿಶಿ ಮಹಾಪುರೀ ।
ದಕ್ಷಿಣಾಯಾಂ ಯಮಸ್ಯಾಥ ವರುಣಸ್ಯ ತು ಪಶ್ಚಿಮೇ ॥ ೩೪ ॥

---

೩೧. ಆ ಅಕ್ಷದಂಡಗಳ ಪ್ರಮಾಣವು ಎರಡು ಅರ್ಧಯುಗಗಳ ಪ್ರಮಾಣವಾಗಿರುವುದು. ರಥದ ಧ್ರುವಮಂಡಲದ ಆಧಾರವಾಗಿ ಹ್ರಸ್ವವಾದ ಅಕ್ಷದಂಡವು ಅರ್ಧಯುಗರೂಪವಾಗಿರುವುದು.

೩೨. ಎರಡನೆಯ ಅಕ್ಷದಂಡವೆಂಬ ಮಾನಸ ಪರ್ವತದಲ್ಲಿ ಆ ಚಕ್ರವು ಸ್ಥಿತಿಯನ್ನು ಹೊಂದಿದೆ. ಆ ರಥದಲ್ಲಿ ಏಳು ಛಂದಸ್ಸುಗಳು ಅಶ್ವರೂಪವಾಗಿವೆ. ಅವುಗಳ ಹೆಸರನ್ನು ಕೇಳಿರಿ.

೩೩. ಗಾಯತ್ರೀ, ಬೃಹತೀ, ಉಷ್ಣಿಕ್, ಜಗತೀ, ಪಂಕ್ತಿ ಮತ್ತು ತ್ರಿಷ್ಟುಪ್ ಎಂಬ ಸಪ್ತ ಛಂದಸ್ಸುಗಳು ಸೂರ್ಯನ ರಥದಲ್ಲಿ ಸಪ್ತಾಶ್ವರೂಪಗಳಿಂದ ಬದ್ಧವಾಗಿವೆ.

೩೪. ಮಾನಸಗಿರಿಯ ಮೇಲುಗಡೆಯಲ್ಲಿ ಪೂರ್ವದಿಕ್ಕಿನಲ್ಲಿ ಮಹೇಂದ್ರನ ಮಹಾನಗರವು ಇರುವುದು. ದಕ್ಷಿಣ ದಿಕ್ಕಿನಲ್ಲಿ ಯಮನ ಮಹಾ ನಗರವೂ, ಪಶ್ಚಿಮ ದಿಕ್ಕಿನಲ್ಲಿ ವರುಣನ ಮಹಾ ನಗರಿಯೂ ಇರುವುವು.

ಉತ್ತರೇಷು ಚ ಸೋಮಸ್ಯ ತನ್ನಾಮಾನಿ ನಿಬೋಧತ ।
ಅಮರಾವತೀ ಸಂಯಮನೀ ಸುಖಾ ಚೈವ ವಿಭಾವರೀ ॥ ೩೫ ॥

ಕಾಷ್ಠಾಗತೋ ದಕ್ಷಿಣತಃ ಕ್ಷಿಪ್ತೇಷುರಿವ ಸರ್ಪತಿ ।
ಜ್ಯೋತಿಷಾಂ ಚಕ್ರಮಾದಾಯ ದೇವದೇವಃ ಪಿತಾಮಹಃ ॥ ೩೬ ॥

ದಿವಸಸ್ಯ ರವಿರ್ಮಧ್ಯೇ ಸರ್ವಕಾಲಂ ವ್ಯವಸ್ಥಿತಃ ।
ಸಪ್ತದ್ವೀಪೇಷು ವಿಪ್ರೇಂದ್ರಾ ನಿಶಾರ್ಧಸ್ಯ ಚ ಸಮ್ಮುಖಃ ॥ ೩೭ ॥

ಉದಯಾಸ್ತಮನೇ ಚೈವ ಸರ್ವಕಾಲಂ ತು ಸಮ್ಮುಖೇ ।
ದಿಶಾಸ್ವಶೇಷಾಸು ತಥಾ ವಿಪ್ರೇಂದ್ರಾ ವಿದಿಶಾಸು ಚ ॥ ೩೮ ॥

---

೩೫. ಹಾಗೂ ಉತ್ತರದಿಕ್ಕಿನಲ್ಲಿ ಕುಬೇರನ ಮಹಾನಗರಿಯು ಇರುವುದು. ಅವುಗಳ ಹೆಸರುಗಳನ್ನು ಕೇಳಿರಿ. ಅಮರಾವತಿ ಸಂಯಮನೀ ಸುಖಾ ಮತ್ತು ವಿಭಾವರೀ ಎಂದು ಆ ನಗರಗಳು ನಾಮಾಂಕಿತಗಳಾಗಿವೆ.

೩೬. ದೇವೋತ್ತಮನೂ, ಜಗತ್ಪಿತಾಮಹರೂಪನೂ ಆದ ಸೂರ್ಯನು ದಕ್ಷಿಣ ಭಾಗದಲ್ಲಿ ದಿಕ್ಕನ್ನು ಹೊಂದಿದವನಾಗಿ ಜ್ಯೋತಿರ್ಮಂಡಲವನ್ನು ವಶಮಾಡಿಕೊಂಡು ಪ್ರಯೋಗಿಸಿದ ಬಾಣದಂತೆ ನಡೆಯುವನು.

೩೭. ಹಗಲಿನ ಮಧ್ಯದಲ್ಲಿ ಸರ್ವಕಾಲದಲ್ಲಿಯೂ ಸೂರ್ಯನು ಸಪ್ತದ್ವೀಪಗಳಲ್ಲಿಯೂ ವ್ಯವಸ್ಥಿತವಾಗಿರುವನು. ವಿಪ್ರೇಂದ್ರರೇ! ಅರ್ಧರಾತ್ರಿಯ ಸಮಯದಲ್ಲಿ ಸೂರ್ಯನು ಸಮ್ಮುಖವಾಗಿರುವನು.

೩೮. ವಿಪ್ರೇಂದ್ರರೆ! ಸಮಸ್ತ ದಿಕ್ಕುಗಳಲ್ಲಿಯೂ ಹಾಗು ವಿದಿಕ್ಕುಗಳಲ್ಲಿಯೂ ಸೂರ್ಯನ ಉದಯ ಮತ್ತು ಅಸ್ತಮಯಗಳು ಸರ್ವಕಾಲಗಳಲ್ಲಿಯೂ ಸಮ್ಮುಖಗಳಾಗಿರುತ್ತವೆ.

ಕುಲಾಲಚಕ್ರಪರ್ಯಂತಂ ಭ್ರಮತ್ಯೇಷ ಯಥೇಶ್ವರಃ ।
ಕರೋತ್ಯೇಷ ಯಥಾ ರಾತ್ರಿಂ ವಿಮುಂಚನ್ಮೇದಿನೀಂ ದ್ವಿಜಾಃ ॥ ೩೯ ॥

ದಿವಾಕರಕರೈರೇತತ್ಪೂರಿತಂ ಭುವನತ್ರಯಮ್ ।
ತ್ರೈಲೋಕ್ಯಂ ಕಥಿತಂ ಸದ್ಭಿರ್ಲೋಕಾನಾಂ ಮುನಿಪುಂಗವಾಃ ॥ ೪೦ ॥

ಆದಿತ್ಯಮೂಲಮಖಿಲಂ ತ್ರೈಲೋಕ್ಯಂ ನಾತ್ರ ಸಂಶಯಃ ।
ಭವತ್ಯಸ್ಮಾಜ್ಜಗತ್ಸರ್ವಂ ಸದೇವಾಸುರಮಾನುಷಮ್ ॥ ೪೧ ॥

ರುದ್ರೇಂದ್ರೋಪೇಂದ್ರಚಂದ್ರಾಣಾಂ ವಿಪ್ರೇಂದ್ರಾಣಾಂ ದಿವೌಕಸಾಮ್ ।
ದ್ಯುತಿಮಾನ್ ದ್ಯುತಿಮತ್ ಕೃತ್ಸ್ನಮಜಯತ್ಸಾರ್ವಲೌಕಿಕಮ್ ॥ ೪೨ ॥

---

೩೯. ದ್ವಿಜೋತ್ತಮರೆ ! ನಿಯಾಮಕನಾದ ಸೂರ್ಯನು ಕುಲಾಲನ ಚಕ್ರದ ರೀತಿಯಲ್ಲಿ ಸುತ್ತುವನು. ಮತ್ತು ಭೂಮಂಡಲವನ್ನು ಬಿಟ್ಟು ಹಗಲು ಮತ್ತು ರಾತ್ರಿ ಕಾಲವನ್ನು ನಿರ್ಮಿಸುವನು.

೪೦. ಮುನಿಶ್ರೇಷ್ಠರೆ ! ಪ್ರಸಿದ್ಧವಾದ ಮೂರು ಭುವನಗಳು ಸೂರ್ಯನ ರಶ್ಮಿಗಳಿಂದ ಪೂರ್ಣವಾಗಿವೆ. ಹೀಗೆ ಲೋಕ ಸನ್ನಿವೇಶಕ್ರಮದಲ್ಲಿ ಸಾಧುಗಳಿಂದ ಮೂರು ಲೋಕಗಳು ಕಥಿತವಾಗಿವೆ.

೪೧. ಸಕಲ ತ್ರೈಲೋಕ್ಯವು ಆದಿತ್ಯನನ್ನು ಮೂಲವನ್ನಾಗಿಟ್ಟುಕೊಂಡು ತನ್ನ ಸ್ಥಿತಿಯನ್ನು ಹೊಂದಿದೆ. ಎಂಬ ವಿಷಯದಲ್ಲಿ ಸಂದೇಹವಿಲ್ಲ. ದೇವ-ಅಸುರ-ಮಾನುಷರಿಂದ ಕೂಡಿದ ಸಮಸ್ತ ಜಗತ್ತು ಆದಿತ್ಯನಿಂದ ನಡೆಯುವುದು.

೪೨. ರುದ್ರ-ಇಂದ್ರ-ಉಪೇಂದ್ರ-ಚಂದ್ರ ಮುಂತಾದ ದೇವತೆಗಳು ಮತ್ತು ವಿಪ್ರೇಂದ್ರರಲ್ಲಿರುವ ಸಮಸ್ತ ಲೋಕಗಳ ಸಂಪೂರ್ಣ ತೇಜೋಭಾಗವನ್ನು ತೇಜೋಮಯನಾದ ಸೂರ್ಯನು ಜಯಿಸಿರುವನು.

ಸರ್ವಾತ್ಮಾ ಸರ್ವಲೋಕೇಶೋ ಮಹಾದೇವಃ ಪ್ರಜಾಪತಿಃ ।
ಸೂರ್ಯ ಏಷ ತು ಲೋಕಸ್ಯ ಮೂಲಂ ಪರಮದೈವತಮ್ ॥೪೩॥

ದ್ವಾದಶಾನ್ಯೇ ತಥಾದಿತ್ಯಾ ದೇವಾಸ್ತೇ ಯೇಽಧಿಕಾರಿಣಃ ।
ನಿರ್ವಹಂತಿ ವದಂತ್ಯಸ್ಯ ತದಂಶಾ ವಿಷ್ಣುಮೂರ್ತಯಃ ॥ ೪೪ ॥

ಸರ್ವೇ ನಮಸ್ಯಂತಿ ಸಹಸ್ರಬಾಹುಂ
ಗಂಧರ್ವಯಕ್ಷೋರಗಕಿನ್ನರಾದ್ಯಾಃ ।
ಯಜಂತಿ ಯಜ್ಞೈರ್ವಿವಿಧೈರ್ಮುನೀಂದ್ರಾ-
ಶ್ಛಂದೋಮಯಂ ಬ್ರಹ್ಮಮಯಂ ಪುರಾಣಮ್ ॥ ೪೫ ॥

ಇತಿ ಶ್ರೀ ಕೂರ್ಮಪುರಾಣೇ ಏಕಚತ್ವಾರಿಂಶೋಽಧ್ಯಾಯಃ.

---

೪೩. ಸರ್ವಾತ್ಮಕನೂ, ಸಮಸ್ತಲೋಕಾಧಿಪತಿಯೂ, ಮಹಾದೇವನೂ, ಪ್ರಜಾಪಾಲಕನೂ -ಆದ ಸೂರ್ಯನು ಈ ಲೋಕಕ್ಕೆ ಮೂಲಭೂತನಾಗಿರುವನು. ಸೂರ್ಯನೇ ಪರಮದೇವತೆಯು.

೪೪. ಸೂರ್ಯದೇವನಿಗಿಂತ ಬೇರೆಯಾಗಿ ದ್ವಾದಶಾದಿತ್ಯರೆಂದು ಯಾವ ಅಧಿಕಾರಿ ದೇವತೆಗಳು ಪ್ರಸಿದ್ಧರಾಗಿರುವರೊ, ಅವರು ವಿಷ್ಣುವಿನ ಮೂರ್ತಿಸ್ವರೂಪರೂ ನಾರಾಯಣನ ಅಂಶಾತ್ಮಕರೂ ಆಗಿ ತಮ್ಮ ಅಧಿಕಾರವನ್ನು ನೆರವೇರಿಸುವರು.

೪೫. ಸಹಸ್ರ ಬಾಹುಗಳುಳ್ಳವನೂ, ಛಂದೋಮಯನೂ, ಪುರಾಣ ಬ್ರಹ್ಮಸ್ವರೂಪನೂ ಆದ ಆದಿತ್ಯನನ್ನು ಗಂಧರ್ವ, ಯಕ್ಷ, ಉರಗ, ಕಿನ್ನರ ಮುಂತಾದ ಸಮಸ್ತ ಪ್ರಜೆಗಳು ನಮಸ್ಕರಿಸುವರು. ಹಾಗು ಮುನೀಂದ್ರರು ವಿವಿಧವಾದ ಯಜ್ಞಕರ್ಮಗಳಿಂದ ಪೂಜಿಸುವರು.

( ಕೂರ್ಮಪುರಾಣದಲ್ಲಿ ನಲವತ್ತೊಂದನೆಯ ಅಧ್ಯಾಯವು ಸಮಾಪ್ತವು )

---

ಶ್ರೀಃ

# ಕೂರ್ಮ ಪುರಾಣಂ

---

## ದ್ವಿಚತ್ವಾರಿಂಶೋಽಧ್ಯಾಯಃ.

**ಸೂತ ಉವಾಚ :—**

**ಸ ರಥೋಽಧಿಷ್ಠಿತೋ ದೇವೈರಾದಿತ್ಯೈರ್ಮುನಿಭಿಸ್ತಥಾ ।**
**ಗಂಧರ್ವೈರಪ್ಸರೋಭಿರ್ಶ್ಚ ಗ್ರಾಮಣೀಸರ್ಪರಾಕ್ಷಸೈಃ ॥ ೧ ॥**

**ಧಾತಾರ್ಯಮಾ ಚ ಮಿತ್ರಶ್ಚ ವರುಣಃ ಶಕ್ರ ಏವ ಚ ।**
**ವಿವಸ್ವಾನಥ ಪೂಷಾ ಚ ಪರ್ಜನ್ಯಶ್ಚಾಂಶುರೇವ ಚ । ॥ ೨ ॥**

---

## ನಲವತ್ತೆರಡನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :—ಸೂರ್ಯದೇವನ ಆ ರಥವು ದೇವತೆ, ಆದಿತ್ಯ, ಮುನಿ, ಗಂಧರ್ವ, ಅಪ್ಸರಾಂಗನೆ, ಗ್ರಾಮಣೀ, ಸರ್ಪ ಮತ್ತು ರಾಕ್ಷಸರಿಂದ ವ್ಯಾಪಿಸಲ್ಪಟ್ಟಿದೆ.

೨. ಧಾತಾ, ಅರ್ಯಮಾ, ಮಿತ್ರ, ವರುಣ, ಶಕ್ರ, ವಿವಸ್ವಾನ್, ಪೂಷ, ಪರ್ಜನ್ಯ ಮತ್ತು ಅಂಶು ಎಂಬುವರು ದ್ವಾದಶಾದಿತ್ಯರಲ್ಲಿ ಸೇರಿದ ಕೆಲವು ಮೂರ್ತಿಗಳಾಗಿರುವರು.

ಭಗಸ್ತ್ವಷ್ಟಾ ಚ ವಿಷ್ಣುಶ್ಚ ದ್ವಾದಶೈತೇ ದಿವಾಕರಾಃ ।
ಆಪ್ಯಾಯಯತಿ ವೈ ಭಾನುರ್ವಸಂತಾದಿಷು ವೈ ಕ್ರಮಾತ್ ॥ ೩ ॥

ಪುಲಸ್ತ್ಯಃ ಪುಲಹಶ್ಚಾತ್ರಿರ್ವಸಿಷ್ಠಶ್ಚಾಂಗಿರಾ ಭೃಗುಃ ।
ಭರದ್ವಾಜೋ ಗೌತಮಶ್ಚ ಕಶ್ಯಪಃ ಕ್ರತುರೇವ ಚ ॥ ೪ ॥

ಜಮದಗ್ನಿಃ ಕೌಶಿಕಶ್ಚ ಮುನಯೋ ಬ್ರಹ್ಮವಾದಿನಃ ।
ಸ್ತುವಂತಿ ದೇವಂ ವಿವಿಧೈಶ್ಛಂದೋಭಿಸ್ತೇ ಯಥಾಕ್ರಮಮ್ ॥ ೫ ॥

ರಥಕೃಚ್ಚ ರಥೌಜಾಶ್ಚ ರಥಚಿತ್ರಃ ಸುಬಾಹುಕಃ ।
ರಥಸ್ವನೋಽಥ ವರುಣಃ ಸುಷೇಣಃ ಸೇನಜಿತ್ತಥಾ ॥ ೬ ॥

---

೩. ಮತ್ತು ಭಗ, ತ್ವಷ್ಟಾ, ವಿಷ್ಣು ಎಂಬುವರು ಸೇರಿ ದ್ವಾದಶಾದಿತ್ಯರೆಂದು ಪ್ರಸಿದ್ಧರಾಗಿರುವರು. ಇವರು ಕ್ರಮವಾಗಿ ವಸಂತ ಮುಂತಾದ ಋತು ಸಮಯಗಳಲ್ಲಿ ಪ್ರಪಂಚವನ್ನು ಆಪ್ಯಾಯನಮಾಡುವರು.

೪. ಪುಲಸ್ತ್ಯ, ಪುಲಹ, ಅತ್ರಿ, ವಸಿಷ್ಠ, ಅಂಗಿರಾ, ಭೃಗು, ಭರದ್ವಾಜ, ಗೌತಮ,ಕಶ್ಯಪ ಮತ್ತು ಕ್ರತು ಎಂಬುವರು ಸೂರ್ಯನ ರಥದಲ್ಲಿರುವವರಲ್ಲಿ ಕೆಲವರು ಬ್ರಹ್ಮವಾದಿ ಮುನಿಗಳಾಗಿರುವರು.

೫. ಜಮದಗ್ನಿ, ಭರದ್ವಾಜ ಎಂಬುವರು ಸೇರಿ ಹನ್ನೆರಡು ಮಂದಿ ಬ್ರಹ್ಮವಾದಿ ಮುನಿಗಳು ಕ್ರಮವಾಗಿ ವಿವಿಧವಾದ ಛಂದೋಮಯಮಂತ್ರಗಳಿಂದ ಸೂರ್ಯನಾರಾಯಣದೇವನನ್ನು ಸ್ತುತಿಸುತ್ತಾರೆ

೬. ಸೂರ್ಯನ ರಶ್ಮಿಸಂಗ್ರಹವನ್ನುಮಾಡುವ ಗ್ರಾಮಣಿಗಳಲ್ಲಿ ರಥಕೃತ್, ರಥೌಜ, ರಥಚಿತ್ರ, ಸುಬಾಹುಕ, ರಥಸ್ವನ, ವರುಣ, ಸುಷೇಣ ಮತ್ತು ಸೇನಜಿತ್ ಎಂಬುವರು ಕೆಲವರಾಗಿರುವರು.

ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ಕೃತಜಿತ್ಸತ್ಯಜಿತ್ತಥಾ ।
ಗ್ರಾಮಣ್ಯೋ ದೇವದೇವಸ್ಯ ಕುರ್ವತೇಽಭೀಷುಸಂಗ್ರಹಮ್ ॥ ೭ ॥

ಅಥ ಹೇತಿಃ ಪ್ರಹೇತಿಶ್ಚ ಪೌರುಷೇಯೋ ವಧಸ್ತಥಾ ।
ಸರ್ಪೋ ವ್ಯಾಘ್ರಸ್ತಥಾಪಶ್ಚ ವಾತೋ ವಿದ್ಯುದ್ದಿವಾಕರಃ ॥ ೮ ॥

ಬ್ರಹ್ಮೋಪೇತಶ್ಚ ವಿಪ್ರೇಂದ್ರಾ ಯಜ್ಞೋಪೇತಸ್ತಥೈವ ಚ ।
ರಾಕ್ಷಸಪ್ರವರಾ ಹ್ಯೇತೇ ಪ್ರಯಾಂತಿ ಪುರತಃ ಕ್ರಮಾತ್ ॥ ೯ ॥

ವಾಸುಕಿಃ ಕಂಕನೀಲಶ್ಚ ತಕ್ಷಕಃ ಸರ್ಪಪುಂಗವಃ ।
ಏಲಾಪತ್ರಃ ಶಂಖಪಾಲಸ್ತಥೈರಾವತಸಂಜ್ಞಿತಃ ॥ ೧೦ ॥

---

೭. ಮತ್ತೆ ಕೆಲವರು ತಾರ್ಕ್ಷ್ಯ, ಅರಿಷ್ಟನೇಮಿ, ಕೃತಜಿತ್, ಸತ್ಯಜಿತ್ ಎಂಬ ನಾಮಾಂಕಿತರಾಗಿರುವರು. ಈ ಹನ್ನೆರಡುಮಂದಿ ಗ್ರಾಮಣಿಗಳು ದೇವೋತ್ತಮನಾದ ಸೂರ್ಯನ ರಶ್ಮಿಸಂಗ್ರಹವನ್ನು ಮಾಡುತ್ತಿರುವರು.

೮. ಹೇತಿ, ಪ್ರಹೇತಿ, ಪೌರುಷೇಯ, ವಧ, ಸರ್ಪ, ವ್ಯಾಘ್ರ, ಅಪ್, ವಾತ, ವಿದ್ಯುತ್, ದಿವಾಕರ-ಎಂಬುವರು ಸೂರ್ಯನ ಮುಂಭಾಗದಲ್ಲಿ ಕ್ರಮವಾಗಿ ನಡೆಯುವ ರಾಕ್ಷಸರಲ್ಲಿ ಕೆಲವರಾಗಿರುವರು.

೯. ವಿಪ್ರೇಂದ್ರರೆ! ಮತ್ತೆ ಇಬ್ಬರು ಬ್ರಹ್ಮೋಪೇತ, ಯಜ್ಞೋಪೇತರೆಂದು ಪ್ರಸಿದ್ಧರಾಗಿರುವರು, ಈ ಹನ್ನೆರಡುಮಂದಿ ರಾಕ್ಷಸಪ್ರವರರು ಕ್ರಮವಾಗಿ ಸೂರ್ಯ ದೇವನ ಮುಂಭಾಗದಲ್ಲಿ ಪ್ರಯಾಣಮಾಡುವರು.

೧೦. ಸೂರ್ಯರಥವನ್ನು ವಹನಮಾಡುವ ಸರ್ಪಗಳಲ್ಲಿ ಕೆಲವು ಸರ್ಪಗಳು ವಾಸುಕಿ, ಕಂಕನೀಲ, ತಕ್ಷಕ, ಸರ್ಪಪುಂಗವ, ಏಲಾಪುತ್ರ, ಶಂಖಪಾಲ ಮತ್ತು ಐರಾವತ-ಎಂಬ ನಾಮಾಂಕಿತಗಳಾಗಿವೆ.

ಧನಂಜಯೋ ಮಹಾಪದ್ಮಸ್ತಥಾ ಕರ್ಕೋಟಕೋ ದ್ವಿಜಾಃ ।
ಕಂಬಲೋಽಶ್ವತರಶ್ಚೈವ ವಹಂತ್ಯೇನಂ ಯಥಾಕ್ರಮಮ್ ॥ ೧೧ ॥

ತುಂಬುರುರ್ನಾರದೋ ಹಾಹಾ ಹೂಹೂರ್ವಿಶ್ವಾವಸುಸ್ತಥಾ ।
ಉಗ್ರಸೇನೋಽಥ ಸುರುಚಿರರ್ವಾವಸುಸ್ತಥಾಪರಃ ॥ ೧೨ ॥

ಚಿತ್ರಸೇನಸ್ತಥೋರ್ಣಾಯುರ್ಧೃತರಾಷ್ಟ್ರೋ ದ್ವಿಜೋತ್ತಮಾಃ ।
ಸೂರ್ಯವರ್ಚಾ ದ್ವಾದಶೈತೇ ಗಂಧರ್ವಾ ಗಾಯನಾ ವರಾಃ ॥ ೧೩ ॥

ಗಾಯಂತಿ ಗಾನೈರ್ವಿವಿಧೈರ್ಭಾನುಂ ಷಡ್ಜಾದಿಭಿಃ ಕ್ರಮಾತ್ ।
ಕ್ರತುಸ್ಥಲಾಪ್ಸರೋವರ್ಯಾ ತಥಾನ್ಯಾ ಪುಂಜಿಕಸ್ಥಲಾ ॥ ೧೪ ॥

---

೧೧. ದ್ವಿಜರೆ ! ಧನಂಜಯ, ಮಹಾಪದ್ಮ, ಕರ್ಕೋಟಕ, ಕಂಬಲ ಮತ್ತು ಅಶ್ವತರ ಎಂಬ ಸರ್ಪಗಳು ಸೇರಿ ದ್ವಾದಶ ಸರ್ಪಗಳು ಸೂರ್ಯದೇವನ ರಥವನ್ನು ಕ್ರಮವಾಗಿ ವಹನ ಮಾಡುತ್ತವೆ.

೧೨. ತುಂಬುರು, ನಾರದ, ಹಾಹಾ, ಹೂಹೂ, ವಿಶ್ವಾವಸು, ಉಗ್ರಸೇನ, ಸುರುಚಿ ಮತ್ತು ಅರ್ವಾವಸು ಎಂಬುವರು ಕೆಲವರು ಸೂರ್ಯನ ರಥದಲ್ಲಿರುವ ಗಾಯಕರಾದ ಗಂಧರ್ವರಾಗಿರುವರು.

೧೩. ದ್ವಿಜೋತ್ತಮರೆ ! ಮತ್ತೆ ಕೆಲವರು ಚಿತ್ರಸೇನ, ಊರ್ಣಾಯು, ಧೃತರಾಷ್ಟ್ರ ಮತ್ತು ಸೂರ್ಯವರ್ಚ ಎಂಬ ನಾಮಾಂಕಿತರಾಗಿರುವರು, ಈ ಹನ್ನೆರಡು ಮಂದಿಯು ಆದಿತ್ಯನ ಶ್ರೇಷ್ಠ ಗಾಯಕರಾಗಿರುವರು.

೧೪. ಇವರು ಷಡ್ಜಾದಿಸ್ವರಗಳಿಂದ ಕೂಡಿದ ವಿವಿಧವಾದ ಗಾನಗಳಿಂದ ಕ್ರಮವಾಗಿ ಆದಿತ್ಯನನ್ನು ಗಾನಮಾಡುವರು, ಸೂರ್ಯರಥದಲ್ಲಿರುವ ಅಪ್ಸರಾಂಗನೆಯರಲ್ಲಿ ಕ್ರತುಸ್ಥಲಾ, ಪುಂಜಿಕಸ್ಥಲಾ ಎಂಬ ಉತ್ತಮಾಂಗನೆಯರು ಸೇರಿರುವರು.

ಮೇನಕಾ ಸಹಜನ್ಯಾ ಚ ಪ್ರಮ್ಲೋಚಾ ಚ ದ್ವಿಜೋತ್ತಮಾಃ ।
ಅನುಮ್ಲೋಚಾ ಚ ವಿಶ್ವಾಚೀ ಘೃತಾಚೀ ಚೋರ್ವಶೀ ತಥಾ ॥ ೧೫ ॥

ಅನ್ಯಾ ಚ ಪೂರ್ವಚಿತ್ತಿಃ ಸ್ಯಾದ್ರಂಭಾ ಚೈವ ತಿಲೋತ್ತಮಾ ।
ತಾಂಡವೈರ್ವಿವಿಧೈರೇನಂ ವಸಂತಾದಿಷು ವೈ ಕ್ರಮಾತ್ ॥ ೧೬ ॥

ತೋಷಯಂತಿ ಮಹಾದೇವಂ ಭಾನುಮಾತ್ಮಾನಮವ್ಯಯಮ್ ।
ಏವಂ ದೇವಾ ವಸಂತ್ಯರ್ಕೇ ದ್ವೌ ದ್ವೌ ಮಾಸೌ ಕ್ರಮೇಣ ತು ॥ ೧೭ ॥

ಸೂರ್ಯಮಾಪ್ಯಾಯಯಂತ್ಯೇತೇ ತೇಜಸಾ ತೇಜಸಾಂ ನಿಧಿಮ್ ।
ಗ್ರಥಿತೈಸ್ತೈರ್ವಚೋಭಿಸ್ತು ಸ್ತುವಂತಿ ಮುನಯೋ ರವಿಮ್ ॥ ೧೮ ॥

---

೧೫. ದ್ವಿಜೋತ್ತಮರೆ! ಹಾಗು ಮೇನಕಾ, ಸಹಜನ್ಯಾ ಪ್ರಮ್ಲೋಚಾ, ಅನುಮ್ಲೋಚಾ, ವಿಶ್ವಾಚೀ, ಘೃತಾಚೀ, ಊರ್ವಶೀ ಎಂಬುವರು ಮತ್ತೆ ಕೆಲವರು ಅಪ್ಸರಾಂಗನೆಯರಾಗಿರುವರು.

೧೬. ಮತ್ತು ಪೂರ್ವಚಿತ್ತಿ, ರಂಭಾ, ತಿಲೋತ್ತಮಾ ಎಂಬುವರು ಸೇರಿ ಹನ್ನೆರಡು ಮಂದಿ ಅಪ್ಸರಃ ಸ್ತ್ರೀಯರು ವಸಂತಾದಿ ಮಾಸಗಳಲ್ಲಿ ಕ್ರಮವಾಗಿ ವಿವಿಧ ನೃತ್ಯಗಳನ್ನು ಆಡುವರು.

೧೭. ಮಹಾದೇವನೂ, ಅವ್ಯಯನೂ ಆದ ಸೂರ್ಯದೇವನನ್ನು ಹಿಂದೆ ಹೇಳಿದ ದೇವಾದಿಗಳು ಸಂತೋಷಪಡಿಸುವರು. ಹೀಗೆ ಈ ದೇವತೆಗಳು ಕ್ರಮವಾಗಿ ಎರಡು ಮಾಸಗಳವರೆಗೆ ಸೂರ್ಯಮಂಡಲದಲ್ಲಿ ವಾಸಮಾಡುವರು.

೧೮. ತೇಜೋನಿಧಿಯಾದ ಸೂರ್ಯನನ್ನು ಹಿಂದೆ ಹೇಳಿದ ದೇವತೆಗಳು ತಮ್ಮ ತೇಜಃಪುಂಜದಿಂದ ಆಪ್ಯಾಯನ ಮಾಡುವರು. ಮುನಿಗಳು ತಮ್ಮಿಂದ ರಚಿತವಾದ ಸ್ತುತಿ ವಚನಗಳಿಂದ ಸೂರ್ಯನನ್ನು ಸ್ತುತಿಮಾಡುವರು.

ಗಂಧರ್ವಾಪ್ಸರಸಶ್ಚೈನಂ ನೃತ್ಯಗೇಯೈರುಪಾಸತೇ ।
ಗ್ರಾಮಣೀಯಕ್ಷಭೂತಾನಿ ಕುರ್ವತೇಽಭೀಷುಸಂಗ್ರಹಮ್ ॥ ೧೯ ॥

ಸರ್ಪಾ ವಹಂತಿ ದೇವೇಶಂ ಯಾತುಧಾನಾಃ ಪ್ರಯಾಂತಿ ಚ ।
ವಾಲಖಿಲ್ಯಾ ನಯಂತ್ಯಸ್ತಂ ಪರಿವಾರ್ಯೋದಯಾದ್ರವಿಮ್ ॥ ೨೦ ॥

ಏತೇ ತಪಂತಿ ವರ್ಷಂತಿ ಭಾಂತಿ ವಾಂತಿ ಸೃಜಂತಿ ತು ।
ಭೂತಾನಾಮಶುಭಂ ಕರ್ಮ ವ್ಯಪೋಹಂತೀತಿ ಕೀರ್ತಿತಾಃ ॥ ೨೧ ॥

ಏತೇ ಸಹೈವ ಸೂರ್ಯೇಣ ಭ್ರಮಂತಿ ದಿವಿ ಭಾನುಗಾಃ ।
ವಿಮಾನೇ ಚ ಸ್ಥಿತಾ ನಿತ್ಯಂ ವಿಮಾನೇ ವಾತರಂಹಸಿ ॥ ೨೨ ॥

---

೧೯. ಗಂಧರ್ವ ಮತ್ತು ಅಪ್ಸರಃ ಸ್ತ್ರೀಯರು ಗಾನ-ನೃತ್ಯಗಳಿಂದ ಸೂರ್ಯ ದೇವನನ್ನು ಉಪಾಸನೆ ಮಾಡುತ್ತಾರೆ, ಗ್ರಾಮಣೀ-ಯಕ್ಷ-ಭೂತಗಳು ಸೂರ್ಯನ ರಶ್ಮಿಸಂಗ್ರಹವನ್ನು ಮಾಡುವರು.

೨೦. ಸರ್ಪಗಳು ದೇವೇಶ್ವರನಾದ ಸೂರ್ಯನನ್ನು ವಹನ ಮಾಡುತ್ತವೆ. ರಾಕ್ಷಸರು ಪುರೋಭಾಗದಲ್ಲಿ ಪ್ರಯಾಣಮಾಡುವರು, ಮತ್ತು ವಾಲಖಿಲ್ಯಮುನಿಗಳು ಸುತ್ತುವರಿದು ನಿಂತು ಸೂರ್ಯನನ್ನು ಉದಯಾಚಲದಿಂದ ಅಸ್ತಮಯಕ್ಕೆ ಒಯ್ಯುವರು.

೨೧. ಈ ವಾಲಖಿಲ್ಯರು ತಪಿಸುವುದು, ವರ್ಷಿಸುವುದು, ಪ್ರಕಾಶಿಸುವುದು, ಬೀಸುವುದು,ಸೃಷ್ಟಿಸುವುದು ಮತ್ತು ಭೂತಗಳ ಪಾಪಕರ್ಮಗಳನ್ನು ನಾಶಪಡಿಸುವುದು ಎಂಬ ಅನೇಕ ಕ್ರಿಯೆಗಳನ್ನು ನೆರವೇರಿಸುವರೆಂದು ಕೀರ್ತಿಸಲ್ಪಟ್ಟಿರುವರು.

೨೨. ಇವರು ಇಷ್ಟಾನುಸಾರವಾಗಿ ಹೋಗುವ, ಗಾಳಿಯಂತೆ ವೇಗವುಳ್ಳ ವಿಮಾನದಲ್ಲಿ ಕುಳಿತುಕೊಂಡವರಾಗಿ ಆಕಾಶದಲ್ಲಿ ಸೂರ್ಯಕಿರಣಗಳಲ್ಲಿ ಸೇರಿದವರಾಗಿ ಸೂರ್ಯನೊಡನೆ ಭ್ರಮಿಸುತ್ತಿರುವರು.

ವರ್ಷಂತಶ್ಚ ತಪಂತಶ್ಚ ಹ್ಲಾದಯಂತಶ್ಚ ವೈ ಕ್ರಮಾತ್ ।
ಗೋಪಾಯಂತೀಹ ಭೂತಾನಿ ಸರ್ವಾಣೀಹ ಯುಗಕ್ರಮಾತ್ ॥ ೨೩ ॥

ಏತೇಷಾಮೇವ ದೇವಾನಾಂ ಯಥಾವೀರ್ಯಂ ಯಥಾತಪಃ ।
ಯಥಾಯೋಗಂ ಯಥಾಸತ್ತ್ವಂ ಸ ಏಷ ತಪತಿ ಪ್ರಭುಃ ॥ ೨೪ ॥

ಅಹೋರಾತ್ರವ್ಯವಸ್ಥಾನಕಾರಣಂ ಸ ಪ್ರಜಾಪತಿಃ ।
ಪಿತೃದೇವಮನುಷ್ಯಾದೀನ್ ಸ ಸದಾಪ್ಯಾಯಯದ್ರವಿಃ ॥ ೨೫ ॥

ತತ್ರ ದೇವೋ ಮಹಾದೇವೋ ಭಾಸ್ವಾನ್ ಸಾಕ್ಷಾನ್ಮಹೇಶ್ವರಃ ।
ಭಾಸತೇ ವೇದವಿದುಷಾಂ ನೀಲಗ್ರೀವಃ ಸನಾತನಃ ॥ ೨೬ ॥

---

೨೩. ಮತ್ತು ಯುಗಗಳ ಕ್ರಮದಿಂದ ವೃಷ್ಟಿ, ತಾಪಗಳನ್ನು ಉಂಟುಮಾಡಿ ಆಹ್ಲಾದವನ್ನು ಕೊಡುತ್ತ ಸರ್ವಭೂತಗಳನ್ನು ಪರಿಪಾಲಿಸುವರು.

೨೪. ಈ ದೇವತೆಗಳ ವೀರ್ಯ, ತಪಸ್ಸು, ಯೋಗಶಕ್ತಿ, ಸತ್ತ್ವಗಳನ್ನು ಅನುಸರಿಸಿ ಅದಕ್ಕೆ ಅನುಗುಣವಾಗಿ ಪ್ರಭುವಾದ ಸೂರ್ಯನು ತಪಿಸುತ್ತಿರುವನು.

೨೫. ಅಹಸ್ಸು-ರಾತ್ರಿಗಳೆಂಬ ಕಾಲವಿಭಾಗ ವ್ಯವಸ್ಥೆಗೆ ಕಾರಣನೂ ಪ್ರಜಾಪಾಲಕನೂ ಆದ ಆ ಸೂರ್ಯದೇವನು ಪಿತೃ-ದೇವ-ಮನುಷ್ಯ ಮುಂತಾದ ಪ್ರಜೆಗಳನ್ನು ಯಾವಾಗಲೂ ಪೋಷಿಸುವನು.

೨೬. ಆ ಸೂರ್ಯಮಂಡಲದಲ್ಲಿ ನೀಲಕಂಠನೂ, ಸನಾತನನೂ, ಮಹಾದೇವನೂ, ಪ್ರಕಾಶಮಯನೂ ಆದ ಸಾಕ್ಷಾತ್ ಮಹೇಶ್ವರನು ವೇದಜ್ಞರಿಗೆ ಪ್ರತ್ಯಕ್ಷನಾಗಿ ಪ್ರಕಾಶಿಸುವನು.

ಸ ಏಷ ದೇವೋ ಭಗವಾನ್ ಪರಮೇಷ್ಠೀ ಪ್ರಜಾಪತಿಃ ।
ಸ್ಥಾನಂ ತದ್ವಿದುರಾದಿತ್ಯೇ ವೇದಜ್ಞಾ ವೇದವಿಗ್ರಹಾಃ ॥ ೨೭ ॥

ಇತಿ ಶ್ರೀ ಕೂರ್ಮಪುರಾಣೇ ದ್ವಿಚತ್ವಾರಿಂಶೋಽಧ್ಯಾಯಃ.

---

೨೭. ಭಗವಂತನೂ, ಪರಮಸ್ಥಾನದಲ್ಲಿರುವವನೂ, ಪ್ರಜಾಪಾಲಕನೂ ಆದ ಸ್ವಾಮಿಯು ಸೂರ್ಯಬಿಂಬವೆಂಬ ಸ್ಥಾನದಲ್ಲಿರುವನೆಂದು ವೇದಜ್ಞರೂ ವೇದ ಮೂರ್ತಿಗಳೂ ಆದ ಮಹಾತ್ಮರು ಅರಿತಿರುವರು.

( ಕೂರ್ಮಪುರಾಣದಲ್ಲಿ ನಲವತ್ತೆರಡನೆಯ ಅಧ್ಯಾಯವು ಸಮಾಪ್ತವು )



ಶ್ರೀಃ

# ಕೂರ್ಮಪುರಾಣಂ

## ತ್ರಿಚತ್ವಾರಿಂಶೋಽಧ್ಯಾಯಃ

**ಸೂತ ಉವಾಚ :—**

**ಏವಮೇಷ ಮಹಾದೇವೋ ದೇವದೇವಃ ಪಿತಾಮಹಃ ।**
**ಕರೋತಿ ನಿಯತಂ ಕಾಲಂ ಕಾಲಾತ್ಮಾ ಹ್ಯೈಶ್ವರೀ ತನುಃ ॥ ೧ ॥**

**ತಸ್ಯ ಯೇ ರಶ್ಮಯೋ ವಿಪ್ರಾಃ ಸರ್ವಲೋಕಪ್ರದೀಪಕಾಃ ।**
**ತೇಷಾಂ ಶ್ರೇಷ್ಠಾಃ ಪುನಃ ಸಪ್ತ ರಶ್ಮಯೋ ಗೃಹಮೇಧಿನಃ ॥ ೨ ॥**

---

## ನಲವತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಈ ರೀತಿಯಾಗಿ ದೇವತೆಗಳ ದೇವತೆಯೂ, ಮಹಾದೇವನೂ, ಪಿತಾಮಹರೂಪಿಯೂ, ಕಾಲಾತ್ಮಕನೂ ಆದ ಈಶ್ವರನ ಮೂರ್ತಿಯು ನಿಯತವಾಗಿ ಕಾಲಪರಿಣಾಮವನ್ನು ರಚಿಸುತ್ತಾನೆ.

೨. ವಿಪ್ರರೆ! ಆ ಆದಿತ್ಯನ ರಶ್ಮಿಗಳು ಸಮಸ್ತ ಲೋಕಗಳನ್ನು ಪ್ರಕಾಶ ಪಡಿಸುತ್ತವೆ. ಅವುಗಳಲ್ಲಿ ಗ್ರಹಗಳಿಗೆ ಕಾರಣವಾದ ಸಪ್ತರಶ್ಮಿಗಳು ಶ್ರೇಷ್ಠವೆಂದೆನಿಸಿ ಕೊಂಡಿವೆ.

ಸುಷುಮ್ನೋ ಹರಿಕೇಶಶ್ಚ ವಿಶ್ವಕರ್ಮಾ ತಥೈವ ಚ ।
ವಿಶ್ವಶ್ರವಾಃ ಪುನಶ್ಚಾನ್ಯಃ ಸಂಯದ್ವಸುರತಃ ಪರಃ ॥ ೩ ॥

ಅರ್ವಾವಸುರಿತಿ ಖ್ಯಾತಃ ಸ್ವರಕಃ ಸಪ್ತ ಕೀರ್ತಿತಾಃ ।
ಸುಷುಮ್ನಃ ಸೂರ್ಯರಶ್ಮಿಸ್ತು ಪುಷ್ಣಾತಿ ಶಿಶಿರದ್ಯುತಿಮ್ ॥ ೪ ॥

ತಿರ್ಯಗೂರ್ಧ್ವಪ್ರಚಾರೋಽಸೌ ಸುಷುಮ್ನಃ ಪರಿಪಠ್ಯತೇ ।
ಹರಿಕೇಶಸ್ತು ಯಃ ಪ್ರೋಕ್ತೋ ರಶ್ಮಿರ್ನಕ್ಷತ್ರಪೋಷಕಃ ॥ ೫ ॥

ವಿಶ್ವಕರ್ಮಾ ತಥಾ ರಶ್ಮಿರ್ಬುಧಂ ಪುಷ್ಣಾತಿ ಸರ್ವದಾ ।
ವಿಶ್ವಶ್ರವಾಸ್ತು ಯೋ ರಶ್ಮಿಃ ಶುಕ್ರಂ ಪುಷ್ಣಾತಿ ನಿತ್ಯದಾ ॥ ೬ ॥

---

೩. ಪ್ರಧಾನವಾದ ಆ ಸಪ್ತರಶ್ಮಿಗಳಲ್ಲಿ ಕೆಲವು ಸುಷುಮ್ನ, ಹರಿಕೇಶ, ವಿಶ್ವಕರ್ಮ, ವಿಶ್ವಶ್ರವ ಮತ್ತು ಸಂಯದ್ವಸುರತ ಎಂಬ ಪವಿತ್ರ ನಾಮಗಳಿಂದ ಅಂಕಿತವಾಗಿವೆ.

೪. ಮತ್ತೆ ಎರಡು ಅರ್ವಾವಸು ಸ್ವರಕ ಎಂಬ ನಾಮಗಳಿಂದ ಪ್ರಖ್ಯಾತಿಯನ್ನು ಹೊಂದಿವೆ. ಹೀಗೆ ಇವೆಲ್ಲವೂ ಪ್ರಧಾನವಾದ ಸಪ್ತರಶ್ಮಿಗಳು. ಇವುಗಳಲ್ಲಿ ಸುಷುಮ್ನ ಎಂಬ ಸೂರ್ಯನ ರಶ್ಮಿಯು ಶೀತಕಿರಣನಾದ ಚಂದ್ರನನ್ನು ಪರಿಪೋಷಿಸುತ್ತದೆ.

೫. ಸುಷುಮ್ನ ಸೂರ್ಯರಶ್ಮಿಯು ಊರ್ಧ್ವ ಮತ್ತು ತಿರ್ಯಗ್ಭಾಗಗಳಲ್ಲಿ ಪ್ರಚಾರವುಳ್ಳದಾಗಿ ಕೀರ್ತಿಸಲ್ಪಟ್ಟಿದೆ. ಹರಿಕೇಶವೆಂದು ಹಿಂದೆ ಹೇಳಲ್ಪಟ್ಟ ಸೂರ್ಯ ರಶ್ಮಿಯು ನಕ್ಷತ್ರಮಂಡಲದ ಪೋಷಕವಾಗಿದೆ.

೬. ವಿಶ್ವಕರ್ಮಾ ಎಂಬ ಸೂರ್ಯರಶ್ಮಿಯು ಸರ್ವಕಾಲಗಳಲ್ಲಿಯೂ ಬುಧ ಗ್ರಹವನ್ನು ಪೋಷಿಸುವುದು. ಹಾಗೆ ವಿಶ್ವಶ್ರವಾ ಎಂಬ ರಶ್ಮಿಯು ಯಾವಾಗಲೂ ಶುಕ್ರಗ್ರಹವನ್ನು ಪೋಷಿಸುವುದು.

ಸಂಯದ್ವಸುರಿತಿ ಖ್ಯಾತೋ ಯಃ ಪುಷ್ಣಾತಿ ಸ ಲೋಹಿತಮ್ ।
ಬೃಹಸ್ಪತಿಂ ಸುಪುಷ್ಣಾತಿ ರಶ್ಮಿರರ್ವಾವಸುಃ ಪ್ರಭುಃ ॥ ೭ ॥

ಶನೈಶ್ಚರಂ ಪ್ರಪುಷ್ಣಾತಿ ಸಪ್ತಮಸ್ತು ಸ್ವರಸ್ತಥಾ ।
ಏವಂ ಸೂರ್ಯಪ್ರಭಾವೇಣ ಸರ್ವಾ ನಕ್ಷತ್ರತಾರಕಾಃ ॥ ೮ ॥

ವರ್ಧಂತೇ ವರ್ಧಿತಾ ನಿತ್ಯಂ ನಿತ್ಯಮಾಪ್ಯಾಯಯಂತಿ ಚ ।
ದಿವ್ಯಾನಾಂ ಪಾರ್ಥಿವಾನಾಂ ಚ ನೈಶಾನಾಂ ಚೈವ ನಿತ್ಯಶಃ ॥ ೯ ॥

ಅದಾನಾನ್ನಿತ್ಯಮಾದಿತ್ಯಸ್ತೇಜಸಾಂ ತಮಸಾಮಪಿ ।
ಆದತ್ತೇ ಸ ತು ನಾಡೀನಾಂ ಸಹಸ್ರೇಣ ಸಮಂತತಃ ॥ ೧೦ ॥

---

೭. ಸಂಯದ್ವಸು ಎಂದು ಪ್ರಖ್ಯಾತವಾದ ಸೂರ್ಯರಶ್ಮಿಯು ಅಂಗಾರಕ ಗ್ರಹವನ್ನು ಪೋಷಿಸುತ್ತದೆ. ಹಾಗೆ ಸಮರ್ಥವಾದ ಅರ್ವಾಸುರಶ್ಮಿಯು ಬೃಹಸ್ಪತಿಯನ್ನು ಪೋಷಿಸುತ್ತದೆ.

೮. ಸಪ್ತಮವಾದ ಸ್ವರಕ ಎಂಬ ಸೂರ್ಯರಶ್ಮಿಯು ಶನೈಶ್ಚರ ಗ್ರಹವನ್ನು ಪೋಷಿಸುತ್ತದೆ. ಹೀಗೆಯೇ ಸೂರ್ಯನ ಪ್ರಭಾವದಿಂದ ಎಲ್ಲಾ ನಕ್ಷತ್ರ ಮತ್ತು ತಾರಕೆಗಳು ವೃದ್ಧಿಹೊಂದುತ್ತವೆ.

೯. ಹಾಗೆ ವೃದ್ಧಿ ಹೊಂದಿಸಲ್ಪಟ್ಟ ನಕ್ಷತ್ರ ತಾರಕೆಗಳು ಯಾವಾಗಲೂ ಜಗತ್ತನ್ನು ಆಪ್ಯಾಯನಗೊಳಿಸುತ್ತವೆ. ಸೂರ್ಯನು ದಿವ್ಯ, ಪಾರ್ಥಿವ ಮತ್ತು ರಾತ್ರಿ ಕಾಲಗಳ ತೇಜಸ್ಸುಗಳನ್ನು ಯಾವಾಗಲೂ ಸ್ವೀಕರಿಸುವುವು.

೧೦. ಸೂರ್ಯನು ಸುತ್ತಲೂ ಇರುವ ತನ್ನ ಸಹಸ್ರನಾಡೀ ರಶ್ಮಿಗಳಿಂದ ತೇಜಸ್ಸು ಮತ್ತು ತಮಸ್ಸುಗಳನ್ನು ಯಾವಾಗಲೂ ಸ್ವೀಕರಿಸುವುದರಿಂದ ಆದಿತ್ಯ ಎಂಬ ಅನ್ವರ್ಥನಾಮವನ್ನು ಹೊಂದಿರುವನು.

ನಾದೇಯಂ ಚೈವ ಸಾಮುದ್ರಂ ಕೌಪ್ಯಂ ಚೈವ ಸಹಸ್ರದೃಕ್ ।
ಸ್ಥಾವರಂ ಜಂಗಮಂ ಚೈವ ಯಚ್ಚ ಕುಲ್ಯಾದಿಕಂ ಪಯಃ ॥ ೧೧ ॥

ತಸ್ಯ ರಶ್ಮಿಸಹಸ್ರಂ ತು ಶೀತವರ್ಷೋಷ್ಣನಿಸ್ರವಮ್ ।
ತಾಸಾಂ ಚತುಃಶತಾ ನಾಡ್ಯೋ ವರ್ಷಂತೇ ಚಿತ್ರಮೂರ್ತಯಃ ॥ ೧೨ ॥

ಚಂದ್ರಗಾಶ್ಚೈವ ಗಾಹಾಶ್ಚ ಕಾಂಚನಾಃ ಶಾತನಾಸ್ತಥಾ ।
ಅಮೃತಾ ನಾಮತಃ ಸರ್ವಾ ರಶ್ಮಯೋ ವೃಷ್ಟಿಸರ್ಜನಾಃ ॥ ೧೩ ॥

ಹಿಮೋದ್ಧತಾಶ್ಚ ತಾ ನಾಡ್ಯೋ ರಶ್ಮಯೋ ನಿಸ್ಸೃತಾಃ ಪುನಃ ।
ರೇಷ್ಯೋ ಮೇಷ್ಯಶ್ಚ ವಾಸ್ಯಶ್ಚ ಹ್ರಾದಿನ್ಯಃ ಸರ್ಜನಾಸ್ತಥಾ ॥ ೧೪ ॥

---

೧೧. ಸಹಸ್ರ ರಶ್ಮಿಗಳಿಂದ ಕೂಡಿದ ಸೂರ್ಯನು ನದೀ - ಸಮುದ್ರ - ಕೂಪ-ಕಾಲುವೆ ಮುಂತಾದ ಜಲಾಶಯಗಳಲ್ಲಿರುವ ಸ್ಥಾವರ ಮತ್ತು ಜಂಗಮವಾದ ನೀರನ್ನು ಸ್ವೀಕರಿಸುವನು.

೧೨. ಸೂರ್ಯನ ಸಹಸ್ರ ರಶ್ಮಿಗಳು ಹಿಮ, ವೃಷ್ಟಿ ಮತ್ತು ಮತ್ತು ಉಷ್ಣಗಳನ್ನು ಸುರಿಸುವವು. ಅವುಗಳಲ್ಲಿ ನಾಲ್ಕುನೂರು ನಾಡಿಗಳು ವಿಚಿತ್ರವಾದ ಮೂರ್ತಿಯುಳ್ಳವುಗಳಾಗಿ ವೃಷ್ಟಿಯನ್ನು ಸುರಿಸುತ್ತವೆ.

೧೩. ವೃಷ್ಟಿಯನ್ನು ಸುರಿಸುವ ಸಮಸ್ತ ಸೂರ್ಯರಶ್ಮಿಗಳು ಚಂದ್ರಗಾ ಗಾಹ, ಕಾಂಚನ, ಶಾತನ ಮತ್ತು ಅಮೃತ ಎಂಬ ಪವಿತ್ರವಾದ ನಾಮಗಳಿಂದ ಕರೆಯಲ್ಪಡುತ್ತವೆ.

೧೪. ಹಾಗೂ ಆ ನಾಡಿಗಳು ಕೆಲವು ಹಿಮವನ್ನು ಸುರಿಸುತ್ತಾ ಪ್ರಸರಿಸಿಕೊಂಡಿವೆ. ಆ ರಶ್ಮಿಗಳು ರೇಷ್ಯ, ಮೇಷ್ಯ, ವಾಸ್ಯ, ಹ್ರಾದಿನೀ ಮತ್ತು ಸರ್ಜನ ಎಂಬ ನಾಮಗಳಿಂದ ಕೂಡಿವೆ.

ಚಂದ್ರಾಸ್ತಾ ನಾಮತಃ ಸರ್ವಾಃ ಪೀತಾಸ್ತಾಃ ಸ್ಯುರ್ಗಭಸ್ತಯಃ ।
ಶುಕ್ಲಾಶ್ಚ ಕುಂಕುಮಾಶ್ಚೈವ ಗಾವೋ ವಿಶ್ವಭೃತಸ್ತಥಾ ॥ ೧೫ ॥

ಶುಕ್ಲಾಸ್ತಾ ನಾಮತಃ ಸರ್ವಾಸ್ತ್ರಿವಿಧಾ ಘರ್ಮಸರ್ಜನಾಃ ।
ಸಮಂ ಬಿಭರ್ತಿ ತಾಭಿಃ ಸ ಮನುಷ್ಯಪಿತೃದೇವತಾಃ ॥ ೧೬ ॥

ಮನುಷ್ಯಾನೋಷಧೇನೇಹ ಸ್ವಧಯಾ ಚ ಪಿತ್ಯಾನಪಿ ।
ಅಮೃತೇನ ಸುರಾನ್ ಸರ್ವಾಂಸ್ತ್ರೀಂಸ್ತ್ರಿಭಿಸ್ತರ್ಪಯತ್ಯಸೌ ॥ ೧೭ ॥

ವಸಂತೇ ಗ್ರೀಷ್ಮಕೇ ಚೈವ ಷಡ್ಭಿಃ ಸ ತಪತಿ ಪ್ರಭುಃ ।
ಶರದ್ಯಪಿ ಚ ವರ್ಷಾಸು ಚತುರ್ಭಿಃ ಸಂಪ್ರವರ್ಷತಿ ॥ ೧೮ ॥

---

೧೫. ಮತ್ತು ಆ ರಶ್ಮಿಗಳು ಚಂದ್ರ ಎಂಬ ನಾಮಾಂಕಿತವಾಗಿಯೂ, ಪೀತ ವರ್ಣವುಳ್ಳವುಗಳಾಗಿಯೂ ಇವೆ. ಮತ್ತೆ ಕೆಲವು ಉಷ್ಣವನ್ನು ಕೊಡುವ ರಶ್ಮಿಗಳು ಶುಕ್ಲ, ಕುಂಕುಮ, ಗೋ, ವಿಶ್ವಭೃತ ಎಂಬ ಹೆಸರಿನಿಂದ ಪ್ರಖ್ಯಾತವಾಗಿವೆ.

೧೬. ಅವೆಲ್ಲವೂ ಶುಕ್ಲನಾಮಾಂಕಿತಗಳೂ ಮೂರು ವಿಧಗಳೂ ಆಗಿ ಉಷ್ಣವನ್ನು ಸೃಜಿಸುತ್ತವೆ ಸೂರ್ಯನು ಆ ರಶ್ಮಿಗಳಿಂದ ಮನುಷ್ಯ, ಪಿತೃ ಮತ್ತು ದೇವತೆಗಳನ್ನು ಒಂದೇ ವಿಧವಾಗಿ ಪೋಷಿಸುತ್ತಾನೆ.

೧೭. ಸೂರ್ಯನು ಓಷಧದಿಂದ ಮನುಷ್ಯರನ್ನೂ, ಸ್ವಧಾ ದ್ರವ್ಯದಿಂದ ಪಿತೃ ದೇವತೆಗಳನ್ನೂ, ಅಮೃತದಿಂದ ಸಮಸ್ತದೇವತೆಗಳನ್ನೂ ಪೋಷಿಸುತ್ತಾ ಮೂರು ಗಣಗಳನ್ನು ತೃಪ್ತಿಪಡಿಸುವನು.

೧೮. ವಸಂತ - ಗ್ರೀಷ್ಮಋತುಗಳಲ್ಲಿ ಸಮರ್ಥನಾದ ಸೂರ್ಯನು ಆರು ರಶ್ಮಿಗಳಿಂದ ತಪಿಸುತ್ತಾನೆ. ಶರದೃತು ವರ್ಷ ಋತುಗಳಲ್ಲಿ ನಾಲ್ಕು ರಶ್ಮಿಗಳಿಂದ ವೃಷ್ಟಿಯನ್ನು ಸುರಿಸುತ್ತಾನೆ.

**ಹೇಮಂತೇ ಶಿಶಿರೇ ಚೈವ ಹಿಮಮುತ್ಸೃಜತಿ ತ್ರಿಭಿಃ ।**
**ವರುಣೋ ಮಾಘಮಾಸೇ ತು ಸೂರ್ಯಃ ಪೂಷಾ ತು ಫಾಲ್ಗುನೇ॥೧೯॥**

**ಚೈತ್ರೇ ಮಾಸಿ ಸ ದೇವೇಶೋ ಧಾತಾ ವೈಶಾಖತಾಪನಃ ।**
**ಜ್ಯೇಷ್ಠೇ ಮಾಸೇ ಭವೇದಿಂದ್ರ ಆಷಾಢೇ ತಪತೇ ರವಿಃ ॥ ೨೦ ॥**

**ವಿವಸ್ವಾನ್ ಶ್ರಾವಣೇ ಮಾಸಿ ಪ್ರೌಷ್ಠಪದ್ಯಾಂ ಭಗಃ ಸ್ಮೃತಃ ।**
**ಪರ್ಜನ್ಯಶ್ಚಾಶ್ವಿನೇ ಮಾಸಿ ಕಾರ್ತಿಕೇ ಮಾಸಿ ಭಾಸ್ಕರಃ ॥ ೨೧ ॥**

**ಮಾರ್ಗಶೀರ್ಷೇ ಭವೇನ್ಮಿತ್ರಃ ಪೌಷೇ ವಿಷ್ಣುಃ ಸನಾತನಃ ।**
**ಪಂಚರಶ್ಮಿಸಹಸ್ರಾಣಿ ವರುಣಸ್ಯಾರ್ಕಕರ್ಮಣಿ ॥ ೨೨ ॥**

---

೧೯. ಹೇಮಂತ ಮತ್ತು ಶಿಶಿರ ಋತುಗಳಲ್ಲಿ ಮೂರು ರಶ್ಮಿಗಳಿಂದ ಹಿಮವನ್ನು ಸುರಿಸುತ್ತಾನೆ. ಮಾಘಮಾಸದಲ್ಲಿ ವರುಣನೂ ಫಾಲ್ಗುಣ ಮಾಸದಲ್ಲಿ ಪೂಷದೇವತೆಯೂ ಆದಿತ್ಯಾಧಿಕಾರದಲ್ಲಿ ಇರುವರು.

೨೦. ಚೈತ್ರಮಾಸದಲ್ಲಿ ದೇವೇಶ್ವರನಾದ ಧಾತಾ ಎಂಬುವನೂ ವೈಶಾಖ ಮಾಸದಲ್ಲಿ ಅರ್ಯಮ ಎಂಬುವನೂ ಜೇಷ್ಠಮಾಸದಲ್ಲಿ ಇಂದ್ರನೂ ಆಷಾಢದಲ್ಲಿ ರವಿ ಎಂಬುವನೂ ಆದಿತ್ಯನ ಕಾರ್ಯವನ್ನು ನೆರವೇರಿಸುವರು.

೨೧. ಶ್ರಾವಣಮಾಸದಲ್ಲಿ ವಿವಸ್ವಾನ್ ಎಂಬುವನೂ, ಭಾದ್ರಪದ ಮಾಸದಲ್ಲಿ ಭಗ ಎಂಬುವನೂ ಆಶ್ವಯುಜ ಮಾಸದಲ್ಲಿ ಪರ್ಜನ್ಯ ಎಂಬುವನೂ ಕಾರ್ತಿಕ ಮಾಸದಲ್ಲಿ ಭಾಸ್ಕರ ಎಂಬುವನೂ ಆದಿತ್ಯರೆಂದು ಸ್ಮರಿಸಲ್ಪಟ್ಟಿರುವರು.

೨೨. ಮಾರ್ಗಶೀರ್ಷಮಾಸದಲ್ಲಿ ಮಿತ್ರನೂ ಪುಷ್ಯಮಾಸದಲ್ಲಿ ಸನಾತನನಾದ ವಿಷ್ಣುವೂ ಆದಿತ್ಯಾಧಿಕಾರದಲ್ಲಿ ಇರುವರು. ವರುಣನು ಸೂರ್ಯನ ಕರ್ಮವನ್ನು ನಡೆಸುವಾಗ ಐದು ಸಹಸ್ರ ರಶ್ಮಿಗಳು ಇರುವುವು.

ಷಡ್ಭಿಃ ಸಹಸ್ರೈಃ ಪೂಷಾ ತು ದೇವೇಶಃ ಸಪ್ತಭಿಸ್ತಥಾ ।
ಧಾತಾಷ್ಟಭಿಃ ಸಹಸ್ರೈಸ್ತು ನವಭಿಶ್ಚ ಶತಕ್ರತುಃ ॥ ೨೩ ॥

ವಿವಸ್ವಾನ್ ದಶಭಿಃ ಪಾತಿ ಪಾತ್ಯೇಕಾದಶಭಿರ್ಭಗಃ ।
ಸಪ್ತಭಿಸ್ತಪತೇ ಮಿತ್ರಸ್ತ್ವಷ್ಟಾ ಚೈವಾಷ್ಟಭಿಸ್ತಪೇತ್ ॥ ೨೪ ॥

ಅರ್ಯಮಾ ದಶಭಿಃ ಪಾತಿ ಪರ್ಜನ್ಯೋ ನವಭಿಸ್ತಥಾ ।
ಷಡ್ಭೀ ರಶ್ಮಿಸಹಸ್ರೈಸ್ತು ವಿಷ್ಣುಸ್ತಪತಿ ವಿಶ್ವಧೃಕ್ ॥ ೨೫ ॥

ವಸಂತೇ ಕಪಿಲಃ ಸೂರ್ಯೋ ಗ್ರೀಷ್ಮೇ ಕಾಂಚನಸಪ್ರಭಃ ।
ಶ್ವೇತೋ ವರ್ಷಾಸು ವಿಜ್ಞೇಯಃ ಪಾಂಡುರಃ ಶರದಿ ಪ್ರಭುಃ ॥ ೨೬ ॥

---

೨೩. ಪೂಷದೇವತೆಯು ಆರು ಸಹಸ್ರ ರಶ್ಮಿಗಳಿಂದಲೂ ದೇವೇಶನು ಏಳು ಸಹಸ್ರ ರಶ್ಮಿಯಿಂದಲೂ ಧಾತೃದೇವನು ಎಂಟು ಸಹಸ್ರ ರಶ್ಮಿಯಿಂದಲೂ ಮತ್ತು ಇಂದ್ರನು ಒಂಭತ್ತು ಸಹಸ್ರ ರಶ್ಮಿಯಿಂದಲೂ ಸ್ವಕರ್ಮವನ್ನು ರಚಿಸುವರು.

೨೪. ವಿವಸ್ವಂತನು ಹತ್ತು ಸಹಸ್ರ ರಶ್ಮಿಗಳಿಂದಲೂ ಭಗದೇವನು ಹನ್ನೊಂದು ಸಹಸ್ರ ರಶ್ಮಿಗಳಿಂದಲೂ ಮಿತ್ರದೇವನು ಏಳು ಸಹಸ್ರ ರಶ್ಮಿಗಳಿಂದಲೂ ತ್ವಷ್ಟೃ ದೇವನು ಎಂಟು ಸಹಸ್ರ ರಶ್ಮಿಗಳಿಂದಲೂ ತಪಿಸುವನು.

೨೫. ಅರ್ಯಮಾದಿತ್ಯನು ಹತ್ತು ಸಹಸ್ರ ರಶ್ಮಿಗಳಿಂದಲೂ ಪರ್ಜನ್ಯಾದಿತ್ಯನು ಒಂಭತ್ತು ಸಹಸ್ರ ರಶ್ಮಿಗಳಿಂದಲೂ ಪ್ರಪಂಚವನ್ನು ಧರಿಸಿದ ವಿಷ್ಣು ಆದಿತ್ಯನು ಆರು ಸಹಸ್ರ ರಶ್ಮಿಗಳಿಂದಲೂ ತಪಿಸುತ್ತಿರುವನು.

೨೬. ಪ್ರಭುವಾದ ಸೂರ್ಯನು ವಸಂತಮಾಸದಲ್ಲಿ ಕಪಿಲವರ್ಣನೂ, ಗ್ರೀಷ್ಮ ಋತುವಿನಲ್ಲಿ ಸುವರ್ಣ ವರ್ಣವುಳ್ಳವನೂ, ವರ್ಷ ಋತುವಿನಲ್ಲಿ ಶ್ವೇತವರ್ಣನೂ, ಶರದೃತುವಿನಲ್ಲಿ ಪಾಂಡುವರ್ಣನೂ ಆಗಿರುವನೆಂದು ತಿಳಿಯಬೇಕು.

ಹೇಮಂತೇ ತಾಮ್ರವರ್ಣಃ ಸ್ಯಾಚ್ಛಿಶಿರೇ ಲೋಹಿತೋ ರವಿಃ ।
ಓಷಧೀಷು ಬಲಾನ್ ಧತ್ತೇ ಸ್ವಧಾಮಪಿ ಪಿತೃಷ್ವಥ ॥ ೨೭ ॥

ಸೂರ್ಯೋಽಮರೇಷ್ವಮೃತಂ ತು ತ್ರಯಂ ತ್ರಿಷು ನಿಯಚ್ಛತಿ ।
ಅನ್ಯೇ ಚಾಷ್ಟೌ ಗ್ರಹಾ ಜ್ಞೇಯಾಃ ಸೂರ್ಯೇಣಾಧಿಷ್ಠಿತಾ ದ್ವಿಜಾಃ॥೨೮॥

ಚಂದ್ರಮಾಃ ಸೋಮಪುತ್ರಶ್ಚ ಶುಕ್ರಶ್ಚೈವ ಬೃಹಸ್ಪತಿಃ ।
ಭೌಮೋ ಮಂದಸ್ತಥಾ ರಾಹುಃ ಕೇತುಮಾನಪಿ ಚಾಷ್ಟಮಃ ॥ ೨೯ ॥

ಸರ್ವೇ ಧ್ರುವೇ ನಿಬದ್ಧಾ ವೈ ಗ್ರಹಾಸ್ತೇ ವಾತರಶ್ಮಿಭಿಃ ।
ಭ್ರಾಮ್ಯಮಾಣಾ ಯಥಾಯೋಗಂ ಭ್ರಮಂತ್ಯನುದಿವಾಕರಮ್ ॥ ೩೦ ॥

---

೨೭. ಹೇಮಂತ ಋತುವಿನಲ್ಲಿ ತಾಮ್ರವರ್ಣನೂ ಶಿಶಿರ ಋತುವಿನಲ್ಲಿ ಲೋಹಿತವರ್ಣನೂ ಆಗಿರುವನು. ಮತ್ತು ಆ ಸೂರ್ಯನು ಸಸ್ಯಗಳಲ್ಲಿ ಬಲವನ್ನೂ ಪಿತೃದೇವತೆಗಳಲ್ಲಿ ಸ್ವಧಾ ಭಾಗವನ್ನೂ ಅರ್ಪಿಸುವನು.

೨೮. ಸೂರ್ಯನು ದೇವತೆಗಳಲ್ಲಿ ಅಮೃತವನ್ನು ಅರ್ಪಿಸುವನು. ಹೀಗೆ ಮೂರು ಗಣಗಳಲ್ಲಿ ಮೂರು ವಿಧವಾದ ಆಹಾರವನ್ನು ಅರ್ಪಿಸುತ್ತಾನೆ. ದ್ವಿಜರೇ ! ಮಿಕ್ಕ ಎಂಟು ಮಹಾಗ್ರಹಗಳು ಸೂರ್ಯನಿಂದ ಅಧಿಕರಿಸಲ್ಪಟ್ಟಿರುವರೆಂದು ತಿಳಿಯ ಬೇಕು.

೨೯. ಆ ಎಂಟು ಗ್ರಹಗಳೂ ಈ ರೀತಿಯಾಗಿ ಪ್ರಸಿದ್ಧರಾಗಿರುವರು. ಚಂದ್ರ, ಬುಧ, ಶುಕ್ರ, ಬೃಹಸ್ಪತಿ, ಅಂಗಾರಕ, ಶನೈಶ್ಚರ, ರಾಹು ಮತ್ತು ಕೇತು ಎಂಬುದಾಗಿ ಎಂಟು ಗ್ರಹಗಳು ಪ್ರಸಿದ್ಧರಾಗಿರುವರು.

೩೦. ಈ ಸಮಸ್ತ ಗ್ರಹಗಳೂ ವಾಯುರೂಪವಾದ ರಶ್ಮಿಗಳಿಂದ ಧ್ರುವ ಮಂಡಲದಲ್ಲಿ ಬಂಧಿಸಿದವರಾಗಿ ಸುತ್ತುತ್ತಾ ಪ್ರಸಂಗಾನುಗುಣವಾಗಿ ಸೂರ್ಯನನ್ನು ಹಿಂಬಾಲಿಸಿ ಭ್ರಮಿಸುವರು.

ಅಲಾತಚಕ್ರವದ್ಭ್ರಾಂತಿ ವಾತಚಕ್ರೇರಿತಾಸ್ತಥಾ ।
ಯಸ್ಮಾದ್ವಹತಿ ತಾನ್ ವಾಯುಃ ಪ್ರವಹಸ್ತೇನ ಸ ಸ್ಮೃತಃ ॥ ೩೧ ॥

ರಥಸ್ತ್ರಿಚಕ್ರಃ ಸೋಮಸ್ಯ ಕುಂದಾಭಾಸ್ತಸ್ಯ ವಾಜಿನಃ ।
ವಾಮದಕ್ಷಿಣತೋ ಯುಕ್ತಾ ದಶ ತೇನ ಕ್ಷಪಾಕರಃ ॥ ೩೨ ॥

ವೀಥ್ಯಾಶ್ರಯಾಣಿ ಚರತಿ ನಕ್ಷತ್ರಾಣಿ ರವಿರ್ಯಥಾ ।
ಹ್ರಾಸವೃದ್ಧೀ ತು ವಿಪ್ರೇಂದ್ರಾ ಧ್ರುವಾಧಾರಾಣಿ ಸರ್ವದಾ ॥ ೩೩ ॥

ಸ ಸೋಮಃ ಶುಕ್ಲಪಕ್ಷೇ ತು ಭಾಸ್ಕರೇ ಪರಿತಃ ಸ್ಥಿತೇ ।
ಆಪೂರ್ಯತೇ ಪರಸ್ಯಾಂತೇ ಸತತಂ ಚೈವ ತಾಃ ಪ್ರಭಾಃ ॥ ೩೪

---

೩೧. ಆ ಗ್ರಹಗಳು ಗಾಳಿಯ ಚಕ್ರದಿಂದ ಪ್ರೇರೇಪಿಸಲ್ಪಟ್ಟವುಗಳಾಗಿ ಅಲಾತ (ಕೊಳ್ಳಿ) ಚಕ್ರದಂತೆ ನಡೆಯುತ್ತವೆ. ವಾಯುವು ಆ ಗ್ರಹಗಳನ್ನು ವಹಿಸುವುದರಿಂದ ಪ್ರವಹ ಎಂದು ಅನ್ವರ್ಥನಾಮದಿಂದ ಸ್ಮರಿಸಲ್ಪಟ್ಟಿದೆ.

೩೨. ಚಂದ್ರನ ರಥವು ಮೂರು ಚಕ್ರಗಳಿಂದಲೂ ಕುಂದಪುಷ್ಪದ ಕಾಂತಿಯಿಂದಲೂ ಪ್ರಕಾಶಿಸುವುದು. ಆ ರಥದ ಎಡಬಲ ಪಾರ್ಶ್ವಗಳಲ್ಲಿ ಹತ್ತು ಅಶ್ವಗಳು ಕಟ್ಟಲ್ಪಟ್ಟಿವೆ.

೩೩. ಚಂದ್ರನು ಆ ರಥದಿಂದ ಸೂರ್ಯನಂತೆ ವೀಥಿಯನ್ನು ಅವಲಂಬಿಸಿರುವ ನಕ್ಷತ್ರ ಮಂಡಲವನ್ನು ಸುತ್ತುತ್ತಿರುವನು. ವಿಪ್ರೋತ್ತಮರೇ! ಚಂದ್ರನ ಹ್ರಾಸ ಮತ್ತು ವೃದ್ಧಿಗಳು ಯಾವಾಗಲೂ ಧ್ರುವಮಂಡಲದ ಆಧಾರದಲ್ಲಿರುವುವು.

೩೪. ಆ ಚಂದ್ರನು ಶುಕ್ಲಪಕ್ಷದಲ್ಲಿ ಸೂರ್ಯನು ಪರಭಾಗದಲ್ಲಿರುತ್ತಿರಲು ಪರಭಾಗದ ಅಂತಿಮಾವಧಿಯಲ್ಲಿ ಯಾವಾಗಲೂ ತನ್ನ ಎಲ್ಲಾ ಕಲೆಗಳಿಂದ ಪೂರ್ಣನಾಗುತ್ತಾನೆ.

ಕ್ಷೀಣಂ ಪೀತಂ ಸುರೈಃ ಸೋಮಮಾಪ್ಯಾಯಯತಿ ನಿತ್ಯದಾ ।
ಏಕೇನ ರಶ್ಮಿನಾ ವಿಪ್ರಾಃ ಸುಷುಮ್ನಾಖ್ಯೇನ ಭಾಸ್ಕರಃ ॥ ೩೫ ॥

ಏಷಾ ಸೂರ್ಯಸ್ಯ ವೀರ್ಯೇಣ ಸೋಮಸ್ಯಾಪ್ಯಾಯಿತಾ ತನುಃ ।
ಪೌರ್ಣಮಾಸ್ಯಾಂ ಸ ದೃಶ್ಯೇತ ಸಂಪೂರ್ಣೋ ದಿವಸಕ್ರಮಾತ್ ॥ ೩೬ ॥

ಸಂಪೂರ್ಣಮರ್ಧಮಾಸೇನ ತಂ ಸೋಮಮಮೃತಾತ್ಮಕಮ್ ।
ಪಿಬಂತಿ ದೇವತಾ ವಿಪ್ರಾ ಯತಸ್ತೇಽಮೃತಭೋಜನಾಃ ॥ ೩೭ ॥

ತತಃ ಪಂಚದಶೇ ಭಾಗೇ ಕಿಂಚಿಚ್ಛಿಷ್ಟೇ ಕಲಾತ್ಮಕೇ ।
ಅಪರಾಹ್ಣೇ ಪಿತೃಗಣಾ ಜಘನ್ಯಂ ಪರ್ಯುಪಾಸತೇ ॥ ೩೮ ॥

೩೫. ವಿಪ್ರರೇ ! ದೇವತೆಗಳು ಚಂದ್ರಕಲೆಗಳನ್ನು ಪಾನಮಾಡಿದ್ದರಿಂದ ಕ್ಷೀಣನಾಗಿರುವ ಚಂದ್ರನನ್ನು ಯಾವಾಗಲೂ ಸೂರ್ಯನು ಸುಷುಮ್ನ ಎಂಬ ತನ್ನ ಒಂದು ರಶ್ಮಿಯಿಂದ ವೃದ್ಧಿಗೊಳಿಸುವನು.

೩೬. ಹೀಗೆ ಸೂರ್ಯನ ತೇಜಸ್ಸಿನಿಂದ ವೃದ್ಧಿಹೊಂದಿಸಲ್ಪಟ್ಟ ಚಂದ್ರನ ಮೂರ್ತಿಯು ದಿವಸ ಕ್ರಮದಿಂದ ಪೂರ್ಣವಾಗಿ ಪೌರ್ಣಮಾಸೀ ತಿಥಿಯಲ್ಲಿ ಪೂರ್ಣ ಮಂಡಲದಿಂದ ಕಾಣಿಸುವನು.

೩೭. ವಿಪ್ರರೇ ! ಸಂಪೂರ್ಣವೂ, ಅಮೃತಮಯವೂ ಆದ ಚಂದ್ರ ಮಂಡಲವನ್ನು ಅಮೃತಾಹಾರವನ್ನು ಭುಂಜಿಸುವ ದೇವತೆಗಳು ಅರ್ಧಮಾಸಕಾಲದಲ್ಲಿ ಸಂಪೂರ್ಣವಾಗಿ ಪಾನಮಾಡುವರು.

೩೮. ತರುವಾಯ ಹದಿನೈದನೆಯ ಒಂದು ಅಂಶವಾದ ಕಲಾಮಾತ್ರ ಭಾಗವು ಸ್ವಲ್ಪವಾಗಿ ಮಿಕ್ಕಿರಲು ಅಪರಾಹ್ಣ ಸಮಯದಲ್ಲಿ ಪಿತೃದೇವತೆಗಳ ಗಣವು ದೇವತೆಗಳ ಭೋಗಾನಂತರದಲ್ಲಿ ಸೇವಿಸುವುದು.

**ಪಿಬಂತಿ ದ್ವಿಲವಂ ಕಾಲಂ ಶಿಷ್ಟಾ ತಸ್ಯ ಕಲಾ ತು ಯಾ ।**
**ಸುಧಾಮೃತಮಯೀಂ ಪುಣ್ಯಾಂ ತಾಮಿಂದೋರಮೃತಾತ್ಮಿಕಾಮ್ ॥೩೯॥**

**ನಿಃಸೃತಂ ತದಮಾವಾಸ್ಯಾಂ ಗಭಸ್ತಿಭ್ಯಃ ಸ್ವಧಾಮೃತಮ್ ।**
**ಮಾಸತೃಪ್ತಿಮವಾಶ್ಯಂತಿ ಪಿತರಃ ಸಂತಿ ನಿರ್ವೃತಾಃ ॥ ೪೦ ॥**

**ನ ಸೋಮಸ್ಯ ವಿನಾಶಃ ಸ್ಯಾತ್ ಸುಧಾ ಚ್ಚೈವ ಸುಪೀಯತೇ ।**
**ಏವಂ ಸೂರ್ಯನಿಮಿತ್ತೋಽಸ್ಯ ಕ್ಷಯೋ ವೃದ್ಧಿಶ್ಚ ಸತ್ತಮಾಃ ॥ ೪೧ ॥**

**ಸೋಮಪುತ್ರಸ್ಯ ಚಾಷ್ಟಾಭಿರ್ವಾಜಿಭಿರ್ವಾಯುವೇಗಿಭಿಃ ।**
**ವಾರಿಜೈಃ ಸ್ಯಂದನೋ ಯುಕ್ತಸ್ತೇನಾಸೌ ಯಾತಿ ಸರ್ವತಃ ॥ ೪೨ ॥**

---

೩೯. ಎರಡು ಲವಗಳಕಾಲದಲ್ಲಿ ಪಿತೃಗಳು ಚಂದ್ರನ ಸ್ವಧಾಮಯವೂ, ಪವಿತ್ರವೂ ಅಮೃತಮಯವೂ ಆದ ಕಲೆಯನ್ನು ಪಾನಮಾಡುತ್ತಾರೆ.

೪೦. ಅಮಾವಾಸ್ಯಾ ತಿಥಿಯಲ್ಲಿ ಚಂದ್ರಕಿರಣಗಳಿಂದ ಪ್ರಸರಿಸಿದ ಸ್ವಧಾರೂಪವಾದ ಅಮೃತವು ಪಿತೃದೇವತೆಗಳಿಗೆ ಒಂದು ಮಾಸದವರೆಗೆ ತೃಪ್ತಿಯನ್ನು ಉಂಟುಮಾಡುತ್ತದೆ. ಆದರಿಂದ ಪಿತೃದೇವತೆಗಳು ತೃಪ್ತರಾಗುವರು.

೪೧. ಸಾಧುಶ್ರೇಷ್ಠರೇ! ಚಂದ್ರಮಂಡಲಕ್ಕೆ ನಾಶವು ಸಂಭವಿಸುವುದಿಲ್ಲ. ಅಲ್ಲಿದ್ದ ಅಮೃತವು ಪಾನಮಾಡಲ್ಪಡುತ್ತದೆ. ಹೀಗೆ ಚಂದ್ರನ ವೃದ್ಧಿ-ಕ್ಷಯಗಳು ಸೂರ್ಯನಿಮಿತ್ತವಾಗಿರುವುವು.

೪೨. ಚಂದ್ರನ ಪುತ್ರನಾದ ಬುಧನ ರಥವು ನೀರಿನಲ್ಲಿ ಹುಟ್ಟಿದ ವಾಯುವೇಗವುಳ್ಳ ಎಂಟು ಅಶ್ವಗಳಿಂದ ಬಂಧಿಸಲ್ಪಟ್ಟಿದೆ. ಅಂತಹ ರಥದಿಂದ ಬುಧನು ಎಲ್ಲ ಕಡೆಗಳಲ್ಲಿಯೂ ಸಂಚರಿಸುತ್ತಾನೆ.

ಶುಕ್ರಸ್ಯ ಭೂಮಿಜೈರಶ್ವೈಃ ಸ್ಯಂದನೋ ದಶಭಿರ್ವೃತಃ ।
ಅಷ್ಟಾಭಿಶ್ಚಾಪಿ ಭೌಮಸ್ಯ ರಥೋ ಹೈಮಃ ಸುಶೋಭನಃ ॥ ೪೩ ॥

ಬೃಹಸ್ಪತೇ ರಥೋಽಷ್ಟಾಶ್ವಃ ಸ್ಯಂದನೋ ಹೇಮನಿರ್ಮಿತಃ ।
ರಥೋ ರೂಪ್ಯಮಯೋಽಷ್ಟಾಶ್ವೋ ಮಂದಸ್ಯಾಯಸನಿರ್ಮಿತಃ ॥ ೪೪ ॥

ಸ್ವರ್ಭಾನೋರ್ಭಾಸ್ಕರಾರೇಶ್ಚ ತಥಾಷ್ಟಾಭಿರ್ಹಯೈರ್ವೃತಃ ।
ಏತೇ ಮಹಾಗ್ರಹಾಣಾಂ ವೈ ಸಮಾಖ್ಯಾತಾ ರಥಾಶ್ಚ ವೈ ॥ ೪೫ ॥

ಸರ್ವೇ ಧ್ರುವೇ ಮಹಾಭಾಗಾ ನಿಬದ್ಧಾ ವಾಯುರಶ್ಮಿಭಿಃ ।
ಗ್ರಹರ್ಕ್ಷತಾರಾಧಿಷ್ಣ್ಯಾನಿ ಧ್ರುವೇ ಬದ್ಧಾನ್ಯಶೇಷತಃ ॥ ೪೬ ॥

---

೪೩. ಶುಕ್ರಗ್ರಹದ ರಥವು ಭೂಮಿಯಲ್ಲಿ ಹುಟ್ಟಿದ ಹತ್ತು ಅಶ್ವಗಳಿಂದ ಬಂಧಿಸಲ್ಪಟ್ಟಿದೆ. ಅಂಗಾರಕನ ರಥವು ಸುವರ್ಣಮಯವೂ, ಮಂಗಳಕರವೂ ಮತ್ತು ಎಂಟು ಅಶ್ವಗಳಿಂದ ಕೂಡಿರುವುದೂ ಆಗಿದೆ.

೪೪. ಬೃಹಸ್ಪತಿಯ ರಥವು ಸುವರ್ಣದಿಂದ ರಚಿತವಾದುದೂ, ಎಂಟು ಅಶ್ವಗಳಿಂದ ಕೂಡಿರುವುದೂ ಆಗಿದೆ. ಶನೈಶ್ಚರನ ರಥವು ರಜತವಿಕಾರವೂ, ಎಂಟು ಅಶ್ವಗಳಿಂದ ಕೂಡಿದುದೂ ಆಗಿದೆ.

೪೫. ರಾಹು ಮತ್ತು ಕೇತು ಗ್ರಹಗಳಿಗೆ ಎಂಟು ಕುದುರೆಗಳಿಂದ ಕೂಡಿದ ಕಬ್ಬಿಣದ ರಥಗಳು ಇರುತ್ತವೆ. ಹೀಗೆ ಆಯಾಯ ಮಹಾಗ್ರಹಗಳಿಗೆ ವಿವಿಧವಾದ ರಥಗಳು ಹೇಳಲ್ಪಟಿವೆ.

೪೬. ಮಹಾಭಾಗ್ಯಶಾಲಿಗಳೆ ! ಎಲ್ಲಾ ರಥಗಳೂ ವಾಯುಮಯವಾದ ರಶ್ಮಿಗಳಿಂದ ಧ್ರುವಮಂಡಲದಲ್ಲಿ ಕಟ್ಟಲ್ಪಟ್ಟಿವೆ. ಧ್ರುವಮಂಡಲದಲ್ಲಿ ಕಟ್ಟಲ್ಪಟ್ಟಿರುವ ಎಲ್ಲಾ ಗ್ರಹ, ನಕ್ಷತ್ರ, ತಾರಕೆಗಳ ಮಂಡಲಗಳು ಸುತ್ತುತ್ತಿರುತ್ತವೆ.

ಭ್ರಮಂತಿ ಭ್ರಾಮಯಂತ್ಯೇನಂ ಸರ್ವಾಣ್ಯನಿಲರಶ್ಮಿಭಿಃ ॥ ೪೭ ॥

ಇತಿ ಶ್ರೀ ಕೂರ್ಮಪುರಾಣೇ ತ್ರಿಚತ್ವಾರಿಂಶತ್ತಮೋಽಧ್ಯಾಯಃ.

---

೪೭. ಈ ಧ್ರುವ ಮಂಡಲದಲ್ಲಿ ವಾಯುವೆಂಬ ರಶ್ಮಿಗಳಿಂದ ಕಟ್ಟಲ್ಪಟ್ಟಿರುವ ನಕ್ಷತ್ರ-ಗ್ರಹ- ತಾರಕೆಗಳ ಅನೇಕಮಂಡಲಗಳು ಸುತ್ತುತ್ತಲಿದ್ದು ತಮಗೆ ಆಧಾರವಾಗಿರುವ ಧ್ರುವ ಮಂಡಲವನ್ನು ಸಂತತವಾಗಿ ಸುತ್ತಿಸುತ್ತವೆ.

( ಕೂರ್ಮ ಪುರಾಣದಲ್ಲಿ ನಲವತ್ತಮೂರನೆಯ ಅಧ್ಯಾಯವು ಮುಗಿದುದು. )

---

ಶ್ರೀಃ

# ಕೂರ್ಮಪುರಾಣಂ



## ಚತುಶ್ಚತ್ವಾರಿಂಶತ್ತಮೋಽಧ್ಯಾಯಃ.

**ಸೂತ ಉವಾಚ :—**

ಧ್ರುವಾದೂರ್ಧ್ವಂ ಮಹರ್ಲೋಕಃ ಕೋಟಿಯೋಜನವಿಸ್ತೃತಃ ।
ಕಲ್ಪಾಧಿಕಾರಿಣಸ್ತತ್ರ ಸಂಸ್ಥಿತಾ ದ್ವಿಜಪುಂಗವಾಃ ॥ ೧ ॥

ಜನಲೋಕೋ ಮಹರ್ಲೋಕಾತ್ತಥಾ ಕೋಟಿದ್ವಯಾತ್ಮಕಃ ।
ಸನಕಾದ್ಯಾಸ್ತಥಾ ತತ್ರ ಸಂಸ್ಥಿತಾ ಬ್ರಹ್ಮಣಃ ಸುತಾಃ ॥ ೨ ॥

---

## ನಲವತ್ತನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು:- ದ್ವಿಜಶ್ರೇಷ್ಠರಾದ ಮುನಿಗಳೇ! ಧ್ರುವಮಂಡಲದ ಮೇಲುಗಡೆ ಒಂದುಕೋಟಿಯೋಜನ ವಿಸ್ತಾರವುಳ್ಳ ಮಹರ್ಲೋಕ ವಿರುವುದು. ಅಲ್ಲಿ ಆಯಾಯ ಕಲ್ಪದ ಅಧಿಕಾರಿಗಳು ವಾಸಮಾಡುವರು.

೨. ಆ ಮಹರ್ಲೋಕಕ್ಕಿಂತ ಎರಡುಕೋಟಿ ವಿಸ್ತಾರವುಳ್ಳ ಜನಲೋಕವು ಇರುವುದು. ಅಲ್ಲಿ ಬ್ರಹ್ಮದೇವನ ಮಾನಸಪುತ್ರರಾದ ಸನಕ ಮುಂತಾದ ಮಹರ್ಷಿಗಳು ವಾಸಮಾಡುತ್ತಾರೆ.

ಜನಲೋಕಾತ್ತಪೋಲೋಕಃ ಕೋಟಿತ್ರಯಸಮನ್ವಿತಃ ।
ವೈರಾಜಾಸ್ತತ್ರ ವೈ ದೇವಾಃ ಸ್ಥಿತಾ ದಾಹವಿವರ್ಜಿತಾಃ ॥ ೩ ॥

ಪ್ರಾಜಾಪತ್ಯಾತ್ ಸತ್ಯಲೋಕಃ ಕೋಟಿಷಟ್ಕೇನ ಸಂಯುತಃ ।
ಅಪುನರ್ಮಾರಕೋ ನಾಮ ಬ್ರಹ್ಮಲೋಕಸ್ತು ಸ ಸ್ಮೃತಃ ॥ ೪ ॥

ಅತ್ರ ಲೋಕಗುರುರ್ಬ್ರಹ್ಮಾ ವಿಶ್ವಾತ್ಮಾ ವಿಶ್ವಭಾವನಃ ।
ಆಸ್ತೇ ಸ ಯೋಗಿಭಿರ್ನಿತ್ಯಂ ಪೀತ್ವಾ ಯೋಗಾಮೃತಂ ಪರಮ್ ॥ ೫ ॥

ವಸಂತಿ ಯತಯಃ ಶಾಂತಾ ನೈಷ್ಠಿಕಾ ಬ್ರಹ್ಮಚಾರಿಣಃ ।
ಯೋಗಿನಸ್ತಾಪಸಾಃ ಸಿದ್ಧಾ ಜಾಪಕಾಃ ಪರಮೇಷ್ಠಿನಃ ॥ ೬ ॥

---

೩. ಜನಲೋಕದ ಮೇಲುಭಾಗದಲ್ಲಿ ತಪೋಲೋಕವು ಮೂರುಕೋಟಿ ವಿಸ್ತಾರದಿಂದ ಕೂಡಿದೆ. ಅಲ್ಲಿ ದಾಹ, ದುಃಖಗಳಿಂದ ವರ್ಜಿತರಾದ ವೈರಾಜ ಎಂಬ ದೇವತೆಗಳು ವಾಸಮಾಡುವರು.

೪. ಪ್ರಾಜಾಪತ್ಯವೆಂಬ ತಪೋಲೋಕದಮೇಲೆ ಸತ್ಯಲೋಕವು ಆರುಕೋಟಿ ಯೋಜನ ವಿಸ್ತಾರದಿಂದ ಕೂಡಿದೆ ಆ ಬ್ರಹ್ಮಲೋಕವು ಅಪುನರ್‌ಮಾರಕ (ಪುನರ್ ಮರಣಶೂನ್ಯವು.) ಎಂಬ ಹೆಸರಿನಿಂದ ಸ್ಮರಿಸಲ್ಪಟ್ಟಿದೆ.

೫. ಈ ಸತ್ಯಲೋಕದಲ್ಲಿ ಲೋಕಗಳಿಗೆ ಗುರುವೂ, ವಿಶ್ವರೂಪಿಯೂ, ವಿಶ್ವಕ್ಕೆ ಕಾರಣನೂ ಆದ ಬ್ರಹ್ಮದೇವನು ಯೋಗಿಗಳೊಡನೆ ಉತ್ತಮವಾದ ಯೋಗಾಮೃತ ವನ್ನು ಪಾನಮಾಡಿ ವಾಸಮಾಡುತ್ತಿರುವನು.

೬. ಅಲ್ಲಿ ಶಾಂತರಾದ ಯತಿಗಳೂ, ನೈಷ್ಠಿಕರಾದ ಬ್ರಹ್ಮಚಾರಿಗಳೂ, ತಪೋ ನಿರತರಾದ ಯೋಗಿಗಳೂ, ಸಿದ್ಧರೂ, ಜಪಮಾಡುವವರೂ ಮುಂತಾದ ಪರಮಪದದ ವಾಸಕ್ಕೆ ಅರ್ಹರಾದವರೂ, ವಾಸಮಾಡುತ್ತಿರುವರು.

ದ್ವಾರಂ ತದ್ಯೋಗಿನಾಮೇಕಂ ಗಚ್ಛತಾಂ ಪರಮಂ ಪದಮ್ ।
ತತ್ರ ಗತ್ವಾ ನ ಶೋಚಂತಿ ಸ ವಿಷ್ಣುಃ ಸ ಚ ಶಂಕರಃ ॥ ೭॥

ಸೂರ್ಯಕೋಟಿಪ್ರತೀಕಾಶಂ ಪುರಂ ತಸ್ಯ ದುರಾಸದಮ್ ।
ನ ಮೇ ವರ್ಣಯಿತುಂ ಶಕ್ಯಂ ಜ್ವಾಲಾಮಾಲಾಸಮಾಕುಲಮ್ ॥ ೮ ॥

ತತ್ರ ನಾರಾಯಣಸ್ಯಾಪಿ ಭವನಂ ಬ್ರಹ್ಮಣಃ ಪುರೇ ।
ಶೇತೇ ತತ್ರ ಹರಿಃ ಶ್ರೀಮಾನ್ ಯೋಗೀ ಮಾಯಾಮಯಃ ಪರಃ॥ ೯ ॥

ಸ ವಿಷ್ಣುಲೋಕಃ ಕಥಿತಃ ಪುನರಾವೃತ್ತಿವರ್ಜಿತಃ ।
ಯಾಂತಿ ತತ್ರ ಮಹಾತ್ಮಾನೋ ಯೇ ಪ್ರಪನ್ನಾ ಜನಾರ್ದನಮ್ ॥೧೦॥

---

೭. ಪರಮ ಪದವಿಯನ್ನು ಕುರಿತುಹೋಗುವ ಯೋಗಿಗಳಿಗೆ ಆ ಸತ್ಯ ಲೋಕವು ಒಂದೇ ದ್ವಾರವು. ಅಲ್ಲಿಗೆ ಹೋದವರು ಮತ್ತೆ ಶೋಚಿಸುವುದಿಲ್ಲ. ಆ ಲೋಕಾಧಿಪತಿಯಾದ ಬ್ರಹ್ಮದೇವನೇ ವಿಷ್ಣುವು ಮತ್ತು ಅವನೇ ಶಂಕರನು.

೮. ಕೋಟಿ ಸಂಖ್ಯೆಯ ಸೂರ್ಯಬಿಂಬಗಳಿಗೆ ಸಮಾನವೂ ಜ್ವಾಲಾಮಾಲೆಗಳಿಂದ ಪೂರ್ಣವೂ, ಹೊಂದಲು ಅಶಕ್ಯವೂ ಆದ ಆ ಸತ್ಯಲೋಕವನ್ನು ವರ್ಣಿಸಲು ನನಗೆ ಶಕ್ತಿ ಇಲ್ಲ.

೯. ಆ ಬ್ರಹ್ಮಪುರದಲ್ಲಿ ಶ್ರೀಮನ್ನಾರಾಯಣನ ಮಂದಿರವು ಇರುವುದು. ಆದರಲ್ಲಿ ಮಾಯಾವಿಯೂ, ಪರಮಪುರುಷನೂ, ಕಾಂತಿಯುಕ್ತನೂ ಮತ್ತು ಯೋಗಿಯೂ ಆದ ಶ್ರೀ ಹರಿಯು ಶಯನಮಾಡಿರುವನು.

೧೦. ಅದು ಪುನರಾವರ್ತಿಯಿಂದ ರಹಿತವಾದ ವಿಷ್ಣುಲೋಕವೆಂದು ಕರೆಯಲ್ಪಟ್ಟಿದೆ. ಜನಾರ್ದನಸ್ವಾಮಿಯನ್ನು ಶರಣುಹೊಂದಿದ ಮಹಾತ್ಮರು ಆ ವಿಷ್ಣುಲೋಕಕ್ಕೆ ಹೋಗುತ್ತಾರೆ.

ಊರ್ಧ್ವಂ ತದ್ಬ್ರಹ್ಮಸದನಾತ್ ಪುರಂ ಜ್ಯೋತಿರ್ಮಯಂ ಶುಭಮ್ ।
ವಹ್ನಿನಾ ಚ ಪರಿಕ್ಷಿಪ್ತಂ ತತ್ರಾಸ್ತೇ ಭಗವಾನ್ ಹರಃ ॥ ೧೧ ॥

ದೇವ್ಯಾ ಸಹ ಮಹಾದೇವಶ್ಚಿಂತ್ಯಮಾನೋ ಮನೀಷಿಭಿಃ ।
ಯೋಗಿಭಿಃ ಶತಸಾಹಸ್ರೈರ್ಭೂತೈ ರುದ್ರೈಶ್ಚ ಸಂವೃತಃ ॥ ೧೨ ॥

ತತ್ರ ತೇ ಯಾಂತಿ ನಿರತಾ ಭಕ್ತಾ ವೈ ಬ್ರಹ್ಮಚಾರಿಣಃ ।
ಮಹಾದೇವಪರಾಃ ಶಾಂತಾಸ್ತಾಪಸಾಃ ಸತ್ಯವಾದಿನಃ ॥ ೧೩ ॥

ನಿರ್ಮಮಾ ನಿರಹಂಕಾರಾಃ ಕಾಮಕ್ರೋಧವಿವರ್ಜಿತಾಃ ।
ದ್ರಕ್ಷ್ಯಂತಿ ಬ್ರಾಹ್ಮಣಾ ಯುಕ್ತಾ ರುದ್ರಲೋಕಃ ಸ ವೈ ಸ್ಮೃತಃ ॥ ೧೪ ॥

---

೧೧. ಆ ಬ್ರಹ್ಮನ ಮಂದಿರದ ಮೇಲುಗಡೆಯಲ್ಲಿ ಜ್ಯೋತಿರ್ಮಯವೂ, ಮಂಗಳಕರವೂ, ಅಗ್ನಿಜ್ವಾಲೆಯಿಂದ ಸುತ್ತಲ್ಪಟ್ಟಿದ್ದೂ ಆದ ಒಂದು ನಗರವು ಇರುವುದು. ಅದರಲ್ಲಿ ಪೂಜ್ಯನಾದ ಶಂಕರನು ವಾಸಮಾಡುತ್ತಿರುವನು.

೧೨. ಜ್ಞಾನಿಗಳಿಂದಲೂ, ಯೋಗಿಗಳಿಂದಲೂ ಧ್ಯಾನಿಸಲ್ಪಡುತ್ತಿರುವ ಶತಸಹಸ್ರಾದಿ ಅನೇಕ ಸಂಖ್ಯೆಯ ಭೂತ-ರುದ್ರಗಳಿಂದ ಸೇವಿಸಲ್ಪಟ್ಟ ಮಹಾದೇವನು ಅಲ್ಲಿ ಪಾರ್ವತೀದೇವಿಯೊಡನೆ ವಿಹರಿಸುತ್ತಿರುವನು.

೧೩. ಅಲ್ಲಿ ಬ್ರಹ್ಮಚರ್ಯವ್ರತಧಾರಿಗಳೂ, ಮಹಾದೇವಪರರೂ, ಶಾಂತರೂ. ತಪಸ್ವಿಗಳೂ, ಸತ್ಯವಾದಿಗಳೂ ಮತ್ತು ಶಿವಭಕ್ತಿನಿರತರೂ ಆದ ಮಹಾತ್ಮರು ಹೋಗುತ್ತಾರೆ.

೧೪. ಮಮತ್ವಶೂನ್ಯರೂ, ಅಹಂಕಾರವರ್ಜಿತರೂ, ಕಾಮಕ್ರೋಧರಹಿತರೂ ಆದ ಬ್ರಾಹ್ಮಣರು ಆ ಲೋಕವನ್ನು ಸಾಕ್ಷಾತ್ಕರಿಸುವರು. ಅದು ರುದ್ರಲೋಕವೆಂದು ಸ್ಮರಿಸಲ್ಪಟ್ಟಿದೆ.

ಏತೇ ಸಪ್ತ ಮಹಾಲೋಕಾಃ ಪೃಥಿವ್ಯಾಃ ಪರಿಕೀರ್ತಿತಾಃ ।
ಮಹಾತಲಾದಯಶ್ಚಾಧಃ ಪಾತಾಲಾಃ ಸಂತಿ ವೈ ದ್ವಿಜಾಃ ॥ ೧೫ ॥

ಮಹಾತಲಂ ಚ ಪಾತಾಲಂ ಸರ್ವರತ್ನೋಪಶೋಭಿತಮ್ ।
ಪ್ರಾಸಾದೈರ್ವಿವಿಧೈಃ ಶುಭ್ರೈರ್ದೇವತಾಯತನೈರ್ಯುತಮ್ ॥ ೧೬ ॥

ಅನಂತೇನ ಚ ಸಂಯುಕ್ತಂ ಮುಚುಕುಂದೇನ ಧೀಮತಾ ।
ನೃಪೇಣ ಬಲಿನಾ ಚೈವ ಪಾತಾಲಂ ಸ್ವರ್ಗವಾಸಿನಾ ॥ ೧೭ ॥

ಶೈಲಂ ರಸಾತಲಂ ವಿಪ್ರಾಃ ಶಾರ್ಕರಂ ಹಿ ತಲಾತಲಮ್ ।
ಪೀತಂ ಸುತಲಮಿತ್ಯುಕ್ತಂ ವಿತಲಂ ವಿದ್ರುಮಪ್ರಭಮ್ ॥ ೧೮ ॥

---

೧೫. ದ್ವಿಜರೇ ! ಭೂಲೋಕದಿಂದ ಮೇಲುಭಾಗದ ಈ ಸಪ್ತ ಮಹಾಲೋಕಗಳು ಕೀರ್ತಿಸಲ್ಪಟ್ಟಿವೆ. ಮಹಾತಲ ಮುಂತಾದ ಸಪ್ತ ಪಾತಾಳ ಲೋಕಗಳು ಕೆಳಭಾಗದಲ್ಲಿವೆ.

೧೬. ಅವುಗಳಲ್ಲಿ ಮಹಾತಲ ಎಂಬ ಪಾತಾಳಲೋಕವು ಎಲ್ಲ ಜಾತಿಯ ರತ್ನಗಳಿಂದ ಶೋಭಿಸಲ್ಪಟ್ಟಿದ್ದೂ, ಅನೇಕ ಪ್ರಾಸಾದ, ಶುಭ್ರವಾದ ದೇವಾಲಯಗಳಿಂದ ಕೂಡಿರುವುದೂ ಆಗಿದೆ.

೧೭. ಆ ಲೋಕವು ಆದಿಶೇಷನಿಂದಲೂ, ಜ್ಞಾನಿಯಾದ ಮುಚುಕುಂದನಿಂದಲೂ, ಸ್ವರ್ಗಲೋಕವಾಸಿಯಾದ ಬಲಿರಾಜನಿಂದಲೂ ಕೂಡಿಕೊಂಡಿದೆ.

೧೮. ವಿಪ್ರರೇ ! ರಸಾತಲವು ಶಿಲಾಮಯವೂ, ತಲಾತಲವು ಶರ್ಕರಾ ಎಂಬ ಸೂಕ್ಷ್ಮಪರ್ತುಲಾಕಾರಶಿಲಾಮಯವೂ, ಪೀತವರ್ಣವುಳ್ಳದ್ದೂ, ವಿತಲವು ಹವಳದ ಕಾಂತಿಯುಳ್ಳದ್ದೂ ಆಗಿದೆ- ಎಂದು ಹೇಳಲ್ಪಟ್ಟಿದೆ.

ಸಿತಂ ಚ ವಿತಲಂ ಪ್ರೋಕ್ತಂ ತಲಂ ಚೈವ ಸಿತೇತರಮ್ ।
ಸುಪರ್ಣೇನ ಮುನಿಶ್ರೇಷ್ಠಾಸ್ತಥಾ ವಾಸುಕಿನಾ ಶುಭಮ್ ॥ ೧೯ ॥

ರಸಾತಲಮಿತಿ ಖ್ಯಾತಂ ತಥಾನ್ಯೈಶ್ಚ ನಿಷೇವಿತಮ್ ।
ವಿರೋಚನಹಿರಣ್ಯಾಕ್ಷತಾರಕಾದ್ಯೈಶ್ಚ ಸೇವಿತಮ್ ॥ ೨೦ ॥

ತಲಾತಲಮಿತಿ ಖ್ಯಾತಂ ಸರ್ವಶೋಭಾಸಮನ್ವಿತಮ್ ।
ವೈನತೇಯಾದಿಭಿಶ್ಚೈವ ಕಾಲನೇಮಿಪುರೋಗಮೈಃ ॥ ೨೧ ॥

ಪೂರ್ವದೇವೈಃ ಸಮಾಕೀರ್ಣಂ ಸುತಲಂ ಚ ತಥಾಪರೈಃ ।
ವಿತಲಂ ಯವನಾದ್ಯೈಶ್ಚ ತಾರಕಾಗ್ನಿಮುಖೈಸ್ತಥಾ ॥ ೨೨ ॥

---

೧೯. ಹಾಗೂ ವಿತಲ ಲೋಕವು ಬಿಳಿಗೂ, ತಲಲೋಕವು ಕಪ್ಪಾಗಿಯೂ, ಇರುವುದಾಗಿ ಹೇಳಲ್ಪಟ್ಟಿದೆ. ಮುನಿಶ್ರೇಷ್ಠರೇ ! ಶುಭಕರವಾದ ರಸಾತಲವು ಗರುಡನಿಂದಲೂ, ವಾಸುಕಿ ಸರ್ಪದಿಂದಲೂ ಕೂಡಿಕೊಂಡಿದೆ.

೨೦. ಮತ್ತು ವಿರೋಚನ, ಹಿರಣ್ಯಾಕ್ಷ, ತಾರಕ ಮುಂತಾದ ಮಹಾಸುರರಿಂದಲೂ ಹಾಗೂ ಅನೇಕ ಇತರ ಸರ್ಪಗಳಿಂದಲೂ ಸೇವಿಸಲ್ಪಟ್ಟಿದೆ. ಎಂದು ಪ್ರಸಿದ್ಧವಾಗಿದೆ.

೨೧. ತಲಾತಲವೆಂದು ಪ್ರಸಿದ್ಧವಾದ ಲೋಕವು ಅನೇಕ ಶೋಭೆಗಳಿಂದ ಕೂಡಿರುವುದೂ, ವೈನತೇಯ ಮುಂತಾದವರಿಂದಲೂ ಕಾಲನೇಮಿ ಮುಂತಾದವರಿಂದಲೂ ಸೇವಿಸಲ್ಪಟ್ಟಿರುವುದೂ ಆಗಿದೆ.

೨೨. ಆ ತಲಾತಲವು ಅನೇಕ ರಾಕ್ಷಸರಿಂದ ಪೂರ್ಣವಾಗಿರುವಂತೆ ಸುತಲ ಲೋಕವು ಮಿಕ್ಕ ಅನೇಕ ರಾಕ್ಷಸರಿಂದಕೂಡಿದೆ. ವಿತಲಲೋಕವು ಯವನ-ತಾರಕ ಅಗ್ನಿಮುಖ ಮುಂತಾದ ಅನೇಕ ಮಂದಿರಾಕ್ಷಸರಿಂದ ಪೂರ್ಣವಾಗಿದೆ.

ಜಂಭಕಾದ್ಯೈಸ್ತಥಾ ನಾಗೈಃ ಪ್ರಹ್ರಾದೇನಾಸುರೇಣ ಚ ।
ವಿತಲಂ ಚೈವ ವಿಖ್ಯಾತಂ ಕಂಬಲಾಹೀಂದ್ರಸೇವಿತಮ್ ॥ ೨೩ ॥

ಮಹಾಜಂಭೇನ ವೀರೇಣ ಹಯಗ್ರೀವೇಣ ಧೀಮತಾ ।
ಶಂಕುಕರ್ಣೇನ ಸಂಭಿನ್ನಂ ತಥಾ ನಮುಚಿಪೂರ್ವಕೈಃ ॥ ೨೪ ॥

ತಥಾನ್ಯೈರ್ವಿವಿಧೈರ್ನಾಗೈಸ್ತಲಂ ಚೈವ ಸುಶೋಭನಮ್ ।
ತೇಷಾಮಧಸ್ತಾನ್ನರಕಾಃ ಕೂರ್ಮಾದ್ಯಾಃ ಪರಿಕೀರ್ತಿತಾಃ ॥ ೨೫ ॥

ಪಾಪಿನಸ್ತೇಷು ಪಚ್ಯಂತೇ ನ ತೇ ವರ್ಣಯಿತುಂ ಕ್ಷಮಾಃ ।
ಪಾತಾಲಾನಾಮಧಶ್ಚಾಸ್ತೇ ಶೇಷಾಖ್ಯಾ ವೈಷ್ಣವೀ ತನುಃ ॥ ೨೬ ॥

---

೨೩. ಮತ್ತು ಆ ವಿತಲವೆಂದು ಪ್ರಸಿದ್ಧವಾದ ಲೋಕವು ಜಂಭಕ ಮುಂತಾದ ಸರ್ಪಗಳಿಂದಲೂ ಪ್ರಹ್ಲಾದನೆಂಬ ಅಸುರನಿಂದೂ ಕಂಬಲ ಎಂಬ ನಾಗೇಂದ್ರನಿಂದಲೂ ಸೇವಿಸಲ್ಪಟ್ಟಿರುವುದು.

೨೪. ಮಹಾಜಂಭ, ಶಂಕುಕರ್ಣ ಎಂಬ ಸರ್ಪಗಳಿಂದಲೂ, ಜ್ಞಾನಿಯಾದ ಹಯಗ್ರೀವಾಸುರನಿಂದಲೂ, ನಮುಚಿ ಮುಂತಾದ ಇತರ ರಾಕ್ಷಸರಿಂದಲೂ ವಿತಲ ಲೋಕವು ಪೂರ್ಣವಾಗಿದೆ.

೨೫. ಮತ್ತು ಮಂಗಳಕರವಾದ ತಲಲೋಕವು ಇನ್ನೂ ಇತರ ಅನೇಕವಿಧ ಸರ್ಪಗಳಿಂದ ಕೂಡಿಕೊಂಡಿದೆ. ಆ ಪಾತಾಳಲೋಕಗಳ ಕೆಳಭಾಗದಲ್ಲಿ ಕೂರ್ಮ ಮುಂತಾದ ಅನೇಕ ನರಕಗಳು ಕೀರ್ತಿಸಲ್ಪಟ್ಟಿವೆ.

೨೬. ಆ ನರಕಗಳಲ್ಲಿ ಅನೇಕ ಪಾಪಿಜನರು ಯಾತನೆಯನ್ನು ಅನುಭವಿಸುತ್ತಾರೆ. ಅದನ್ನು ವರ್ಣಿಸುವುದು ಶಕ್ಯವಲ್ಲ. ಪಾತಾಳಗಳ ಕೆಳಭಾಗದಲ್ಲಿ ಆದಿಶೇಷನೆಂಬ ಹೆಸರುಳ್ಳ ವಿಷ್ಣುಮೂರ್ತಿಯು ವಾಸಮಾಡಿರುವನು.

ಕಾಲಾಗ್ನಿರುದ್ರೋ ಯೋಗಾತ್ಮಾ ನಾರಸಿಹ್ಮೋಽಪಿ ಮಾಧವಃ ।
ಯೋಽನಂತಃ ಪಠ್ಯತೇ ದೇವೋ ನಾಗರೂಪೀ ಜನಾರ್ದನಃ ॥ ೨೭ ॥

ತದಾಧಾರಮಿದಂ ಸರ್ವಂ ಸ ಕಾಲಾಗ್ನಿಂ ಸಮಾಶ್ರಿತಃ ।
ತಮಾವಿಶ್ಯ ಮಹಾಯೋಗೀ ಕಾಲಸ್ತದ್ವದನೋಷಿತಃ ॥ ೨೮ ॥

ವಿಷಜ್ವಾಲಾಮಯಶ್ಚೇಶೋ ಜಗತ್ಸಂಹರತಿ ಸ್ವಯಮ್ ।
ಸಹಸ್ರಮಾರಿಪ್ರತಿಮಃ ಸಂಹರ್ತಾ ಶಂಕರೋ ಭವಃ । ॥ ೨೯ ॥

ತಾಮಸೀ ಶಾಂಭವೀ ಮೂರ್ತಿಃ ಕಾಲೋ ಲೋಕಪ್ರಕಾಲನಃ ॥ ೩೦ ॥

ಇತಿ ಶ್ರೀ ಕೂರ್ಮಪುರಾಣೇ ಚತುಶ್ಚತ್ವಾರಿಂಶತ್ತಮೋಽಧ್ಯಾಯಃ.

---

೨೭. ಅಲ್ಲಿಯೋಗಸ್ವರೂಪಿಯಾದ ಕಾಲಾಗ್ನಿರುದ್ರನೂ ನರಸಿಹ್ಮಸ್ವರೂಪನಾದ ವಿಷ್ಣುವೂ ವಾಸಮಾಡಿರುವರು. ಆ ವಿಷ್ಣುವು ಸರ್ಪದ ರೂಪದಿಂದ ಅನಂತಸ್ವಾಮಿ ಎಂದು ಹೇಳಲ್ಪಡುವನು.

೨೮. ಈ ಸಮಸ್ತ ಜಗತ್ತು ಅನಂತನ ಆಧಾರದಲ್ಲಿ ನಿಂತಿದೆ. ಆ ಅನಂತಶೇಷನು ಕಾಲಾಗ್ನಿರೂಪವನ್ನು ಆಶ್ರಯಿಸಿರುವನು. ಮಹಾಯೋಗಿಯಾದ ಕಾಲಮೂರ್ತಿಯು ಆದಿಶೇಷನನ್ನು ಆವೇಶಮಾಡಿ ಅವನ ಮುಖದಲ್ಲಿ ವಾಸಮಾಡುವನು.

೨೯. ಆ ವಿಷದ ಜ್ವಾಲಾಮಯನಾದ ಈಶ್ವರನು ತಾನೇ ಸಮಸ್ತ ಜಗತ್ತನ್ನು ಸಂಹರಿಸುವನು. ಸಹಸ್ರಾರು ಮಾರಕಮೂರ್ತಿಯುಳ್ಳವನೂ, ಸರ್ವಜಗತ್ಕಾರಣನೂ ಆದ ಶಂಕರನು ಸಂಹಾರಕನಾಗಿರುವನು.

೩೦. ಆ ಶಂಭುವಿನ ಮೂರ್ತಿಯು ತಮೋಗುಣ ಪೂರ್ಣವಾಗಿದೆ. ಅಂತಹ ಕಾಲಮೂರ್ತಿಯು ಲೋಕಗಳನ್ನು ಸಂಹರಿಸುವುದು.

( ಕೂರ್ಮಪುರಾಣದಲ್ಲಿ ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ

## ಪಂಚಚತ್ವಾರಿಂಶತ್ತಮೋಽಧ್ಯಾಯಃ.

ಸೂತ ಉವಾಚ :—

ಏತದ್ಬ್ರಹ್ಮಾಂಡಮಾಖ್ಯಾತಂ ಚತುರ್ದಶವಿಧಂ ಮಹತ್ ।
ಅತಃ ಪರಂ ಪ್ರವಕ್ಷ್ಯಾಮಿ ಭೂರ್ಲೋಕಸ್ಯಾಸ್ಯ ನಿರ್ಣಯಮ್ ॥ ೧ ॥

ಜಂಬೂದ್ವೀಪಃ ಪ್ರಧಾನೋಽಯಂ ಪ್ಲಕ್ಷಃ ಶಾಲ್ಮಲಿರೇವ ಚ ।
ಕುಶಃ ಕ್ರೌಂಚಶ್ಚ ಶಾಕಶ್ಚ ಪುಷ್ಕರಶ್ಚೈವ ಸಪ್ತಮಃ ॥ ೨ ॥

---

## ನಲವತ್ತೈದನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು:- ಹೀಗೆ ಮಹತ್ತಾದ ಚತುರ್ದಶ ಭುವನಗಳಿಂದ ಕೂಡಿದ ಬ್ರಹ್ಮಾಂಡವು ವರ್ಣಿಸಲ್ಪಟ್ಟಿದೆ. ಇನ್ನು ಮುಂದೆ ಈ ಭೂಲೋಕದ ನಿರ್ಣಯವನ್ನು ಹೇಳುತ್ತೇನೆ.

೨. ಜಂಬೂದ್ವೀಪ, ಪ್ಲಕ್ಷದ್ವೀಪ, ಶಾಲ್ಮಲದ್ವೀಪ, ಕುಶದ್ವೀಪ, ಕ್ರೌಂಚ ದ್ವೀಪ ಶಾಕದ್ವೀಪ ಮತ್ತು ಪುಷ್ಕರದ್ವೀಪವೆಂಬ ಸಪ್ತ ಮಹಾದ್ವೀಪಗಳಲ್ಲಿ ಈ ಜಂಬೂ ದ್ವೀಪವು ಪ್ರಧಾನವಾಗಿರುವುದು.

ಏತೇ ಸಪ್ತ ಮಹಾದ್ವೀಪಾಃ ಸಮುದ್ರೈಃ ಸಪ್ತಭಿರ್ವೃತಾಃ ।
ದ್ವೀಪಾದ್ದ್ವೀಪೋ ಮಹಾನುಕ್ತಃ ಸಾಗರಾಚ್ಚಾಪಿ ಸಾಗರಃ ॥ ೩ ॥

ಕ್ಷಾರೋದೇಕ್ಷುರಸೋದಶ್ಚ ಸುರೋದಶ್ಚ ಘೃತೋದಕಃ ।
ದಧ್ಯೋದಃ ಕ್ಷೀರಸಲಿಲಃ ಸ್ವಾದೂದಶ್ಚೇತಿ ಸಾಗರಾಃ ॥ ೪ ॥

ಪಂಚಾಶತ್ಕೋಟಿವಿಸ್ತೀರ್ಣಾ ಸಸಮುದ್ರಾ ಧರಾ ಸ್ಮೃತಾ ।
ದ್ವೀಪೈಶ್ಚ ಸಪ್ತಭಿರ್ಯುಕ್ತಾ ಯೋಜನಾನಾಂ ಸಮಂತತಃ ॥ ೫ ॥

ಜಂಬೂದ್ವೀಪಃ ಸಮಸ್ತಾನಾಂ ಮಧ್ಯೇ ಚೈವ ವ್ಯವಸ್ಥಿತಃ ।
ತಸ್ಯ ಮಧ್ಯೇ ಮಹಾಮೇರುರ್ವಿಶ್ರುತಃ ಕನಕಪ್ರಭಃ ॥ ೬ ॥

೩. ಈ ಸಪ್ತಮಹಾದ್ವೀಪಗಳು ಸಪ್ತಸಮುದ್ರಗಳಿಂದ ಸುತ್ತಲ್ಪಟ್ಟಿವೆ. ಇವುಗಳಲ್ಲಿ ಒಂದಕ್ಕಿಂತ ಮತ್ತೊಂದು ದ್ವೀಪವೂ ಒಂದಕ್ಕಿಂತ ಮತ್ತೊಂದು ಸಾಗರವೂ ದೊಡ್ಡದೆಂದು ಹೇಳಲ್ಪಟ್ಟಿದೆ.

೪. ಸಪ್ತಸಮುದ್ರಗಳು ಯಾವುವೆಂದರೆ ಲವಣಸಮುದ್ರ, ಇಕ್ಷು ಸಮುದ್ರ, ಸುರಾಸಮುದ್ರ, ಘೃತಸಮುದ್ರ, ದಧಿಸಮುದ್ರ, ಕ್ಷೀರಸಮುದ್ರ ಮತ್ತು ಸ್ವಾದೂದಕ ಸಮುದ್ರ ಎಂಬಿವೇ ಸಪ್ತ ಸಮುದ್ರಗಳು.

೫. ಈ ಸಪ್ತ ದ್ವೀಪಗಳಿಂದಲೂ, ಸಪ್ತ ಸಮುದ್ರಗಳಿಂದಲೂ ಕೂಡಿರುವ ಭೂಮಿಯು ಸುತ್ತಲೂ ಐವತ್ತುಕೋಟಿ ಯೋಜನ ವಿಸ್ತಾರದಿಂದ ಕೂಡಿಕೊಂಡಿದೆ.

೬. ಎಲ್ಲಾ ದ್ವೀಪಗಳ ಮಧ್ಯದಲ್ಲಿ ಜಂಬೂದ್ವೀಪವು ಸ್ಥಿತಿಯನ್ನು ಹೊಂದಿದೆ. ಅದರ ಮಧ್ಯದಲ್ಲಿ ಸುವರ್ಣದಂತೆ ಪ್ರಭೆಯುಳ್ಳ ಮಹಾಮೇರುಪರ್ವತವು ಇರುವುದೆಂದು ಪ್ರಸಿದ್ಧವಾಗಿದೆ.

ಚತುರಶೀತಿಸಾಹಸ್ರೋ ಯೋಜನೈಸ್ತಸ್ಯ ಚೋಚ್ಛ್ರಯಃ ।
ಪ್ರವಿಷ್ಟಃ ಷೋಡಶಾಧಸ್ತಾದ್ದ್ವಾತ್ರಿಂಶನ್ಮೂರ್ಧ್ನಿ ವಿಸ್ತೃತಃ ॥ ೭ ॥

ಮೂಲೇ ಷೋಡಶಸಾಹಸ್ರೋ ವಿಸ್ತಾರಸ್ತಸ್ಯ ಸರ್ವತಃ ।
ಭೂಪದ್ಮಸ್ಯಾಸ್ಯ ಶೈಲೋಽಸೌ ಕರ್ಣಿಕಾತ್ವೇನ ಸಂಸ್ಥಿತಃ ॥ ೮ ॥

ಹಿಮವಾನ್ ಹೇಮಕೂಟಶ್ಚ ನಿಷಧಶ್ಚಾಸ್ಯ ದಕ್ಷಿಣೇ ।
ನೀಲಃ ಶ್ವೇತಶ್ಚ ಶೃಂಗೀ ಚ ಉತ್ತರೇ ವರ್ಷಪರ್ವತಾಃ ॥ ೯ ॥

ಲಕ್ಷಪ್ರಮಾಣೌ ದ್ವೌ ಮಧ್ಯೇ ದಶಹೀನಾಸ್ತಥಾ ಪರೇ ।
ಸಹಸ್ರದ್ವಿತಯೋಚ್ಛ್ರಾಯಾಸ್ತಾವದ್ವಿಸ್ತಾರಿಣಶ್ಚ ತೇ ॥ ೧೦ ॥

---

೭. ಮೇರುಪರ್ವತದ ಎತ್ತರವು ಎಂಭತ್ತುನಾಲ್ಕು ಸಹಸ್ರಯೋಜನ ಪ್ರಮಾಣವುಳ್ಳದ್ದಾಗಿದೆ. ಇದರಲ್ಲಿ ಹದಿನಾರು ಸಹಸ್ರಯೋಜನ ಪ್ರಮಾಣವು ಕೆಳಭಾಗದಲ್ಲಿ ಪ್ರವೇಶಿಸಿದೆ. ಮತ್ತು ಮೂವತ್ತೆರಡು ಸಹಸ್ರಯೋಜನ ವಿಸ್ತಾರವು ಶಿಖರದಲ್ಲಿದೆ.

೮. ಇದರ ಮೂಲದಲ್ಲಿ ಸುತ್ತಲೂ ಹದಿನಾರು ಸಹಸ್ರಯೋಜನ ವಿಸ್ತಾರವೂ ಇರುವುದು. ಈ ಭೂಮಂಡಲವೆಂಬ ಮಹಾಪದ್ಮಕ್ಕೆ ಮೇರುಪರ್ವತವು ಕರ್ಣಿಕಾಸ್ಥಾನದಲ್ಲಿರುವುದು.

೯. ಈ ಮೇರುಪರ್ವತದ ದಕ್ಷಿಣಪಾರ್ಶ್ವದಲ್ಲಿ ಹಿಮವಾನ್, ಹೇಮಕೂಟ ಮತ್ತು ನಿಷಧ ಎಂಬ ಪರ್ವತಗಳೂ ಉತ್ತರಪಾರ್ಶ್ವದಲ್ಲಿ ನೀಲ,ಶ್ವೇತ, ಶೃಂಗೀ ಎಂಬ ಪರ್ವತಗಳೂ ವರ್ಷಪರ್ವತಗಳಾಗಿವೆ.

೧೦. ಆ ಪರ್ವತಗಳಲ್ಲಿ ಮಧ್ಯದಲ್ಲಿರುವ ಎರಡು ಪರ್ವತಗಳು ಲಕ್ಷಪ್ರಮಾಣದಿಂದಲೂ, ಮಿಕ್ಕಪರ್ವತಗಳು ಹತ್ತು ಯೋಜನ ನ್ಯೂನಪರಿಮಾಣವಾಗಿಯೂ ಇವೆ. ಎಲ್ಲ ಪರ್ವತಗಳೂ ಎರಡುಸಹಸ್ರ ಎತ್ತರ ಅದೇ ಪರಿಮಾಣದ ವಿಸ್ತಾರಗಳಿಂದ ಕೂಡಿವೆ.

ಭಾರತಂ ಪ್ರಥಮಂ ವರ್ಷಂ ತತಃ ಕಿಂಪುರುಷಂ ಸ್ಮೃತಮ್ ।
ಹರಿವರ್ಷಂ ತಥೈವಾನ್ಯನ್ಮೇರೋರ್ದಕ್ಷಿಣತೋ ದ್ವಿಜಾಃ ॥ ೧೧ ॥

ರಮ್ಯಕಂ ಚೋತ್ತರಂ ವರ್ಷಂ ತಸ್ಯೈವಾನು ಹಿರಣ್ಮಯಮ್ ।
ಉತ್ತರೇ ಕುರವಶ್ಚೈವ ಯಥೈತೇ ಭಾರತಾಸ್ತಥಾ ॥ ೧೨ ॥

ನವಸಾಹಸ್ರಮೇಕೈಕಮೇತೇಷಾಂ ದ್ವಿಜಸತ್ತಮಾಃ ।
ಇಲಾವೃತಂ ಚ ತನ್ಮಧ್ಯೇ ತನ್ಮಧ್ಯೇ ಮೇರುರುಚ್ಛ್ರಿತಃ ॥ ೧೩ ॥

ಮೇರೋಶ್ಚತುರ್ದಿಶಂ ತತ್ರ ನವಸಾಹಸ್ರವಿಸ್ತರಮ್ ।
ಇಲಾವೃತಂ ಮಹಾಭಾಗಾಶ್ಚತ್ವಾರಸ್ತತ್ರ ಪರ್ವತಾಃ॥ ॥ ೧೪ ॥

---

೧೧. ದ್ವಿಜರೇ ! ವರ್ಷಗಳಲ್ಲಿ ಭಾರತವರ್ಷವು ಪ್ರಥಮವೂ ಕಿಂಪುರುಷ ವರ್ಷವು ದ್ವಿತೀಯವೂ ಹರಿವರ್ಷವು ತೃತೀಯವೂ ಆಗಿ ಸ್ಮರಿಸಲ್ಪಟ್ಟಿವೆ. ಇವು ಮೇರುಪರ್ವತದ ದಕ್ಷಿಣಪಾರ್ಶ್ವದಲ್ಲಿವೆ.

೧೨. ಉತ್ತರ ವರ್ಷಗಳಲ್ಲಿ ರಮ್ಯಕವರ್ಷವೂ ಅದನ್ನು ಹಿಂಬಾಲಿಸಿ ಹಿರಣ್ಮಯ ವರ್ಷವೂ ಭರತರಾಜರಿಂದ ಕೂಡಿದ ಉತ್ತರಕುಮಾರ ವರ್ಷವೂ ಇರುತ್ತವೆ.

೧೩. ದ್ವಿಜಶ್ರೇಷ್ಠರೇ ! ಈ ವರ್ಷಗಳಲ್ಲಿ ಒಂದೊಂದು ವರ್ಷವೂ ಒಂಭತ್ತು ಸಹಸ್ರಯೋಜನ ವಿಸ್ತಾರವಾಗಿದೆ. ಇವುಗಳ ಮಧ್ಯದಲ್ಲಿ ಇಲಾವೃತವರ್ಷವೂ ಅದರ ಮಧ್ಯದಲ್ಲಿ ಉನ್ನತವಾದ ಮೇರುಗಿರಿಯೂ ಇದೆ.

೧೪. ಮಹಾಭಾಗ್ಯವಂತರೇ ! ಇಲಾವೃತವರ್ಷವು ಆ ಮೇರುಪರ್ವತದ ನಾಲ್ಕು ದಿಕ್ಕುಗಳಲ್ಲಿಯೂ ಒಂಭತ್ತು ಸಹಸ್ರಯೋಜನ ವಿಸ್ತಾರವನ್ನು ಹೊಂದಿಕೊಂಡಿದೆ. ಅದರಲ್ಲಿ ನಾಲ್ಕು ಮಹಾ ಪರ್ವತಗಳಿವೆ.

ವಿಷ್ಕಂಭಾ ರಚಿತಾ ಮೇರೋರ್ಯೋಜನಾಯುತಮುಚ್ಛ್ರಿತಾಃ ।
ಪೂರ್ವೇಣ ಮಂದರೋ ನಾಮ ದಕ್ಷಿಣೇ ಗಂಧಮಾದನಃ ॥ ೧೫ ॥

ವಿಪುಲಃ ಪಶ್ಚಿಮೇ ಪಾರ್ಶ್ವೇ ಸುಪಾರ್ಶ್ವಶ್ಚೋತ್ತರಃ ಸ್ಮೃತಃ ।
ಕದಂಬಸ್ತೇಷು ಜಂಬೂಶ್ಚ ಪಿಪ್ಪಲೋ ವಟ ಏವ ಚ ॥ ೧೬ ॥

ಜಂಬೂದ್ವೀಪಸ್ಯ ಸಾ ಜಂಬೂರ್ನಾಮಹೇತುರ್ಮಹರ್ಷಯಃ ।
ಮಹಾಗಜಪ್ರಮಾಣಾನಿ ಜಂಬ್ವಾಸ್ತಸ್ಯಾಃ ಫಲಾನಿ ಚ ॥ ೧೭ ॥

ಪತಂತಿ ಭೂಭೃತಃ ಪೃಷ್ಠೇ ಶೀರ್ಯಮಾಣಾನಿ ಸರ್ವತಃ ।
ರಸೇನ ತಸ್ಯಾಃ ಪ್ರಖ್ಯಾತಾ ತತ್ರ ಜಂಬೂನದೀ ಗಿರೌ ॥ ೧೮ ॥

---

೧೫. ಮೇರುಪರ್ವತದ ವಿಷ್ಕಂಭದಂತೆ ಇರುವುದಾಗಿಯೂ, ಆಯುತಯೋಜನ ಪ್ರಮಾಣದ ಉನ್ನತವಾಗಿಯೂ ಇವೆ. ಪೂರ್ವದಲ್ಲಿ ಮಂದರಪರ್ವತವೂ, ದಕ್ಷಿಣದಲ್ಲಿ ಗಂಧಮಾಧವನ ಪರ್ವತವೂ ಇರುತ್ತವೆ.

೧೬. ಪಶ್ಚಿಮಪಾರ್ಶ್ವದಲ್ಲಿ ವಿಪುಲ ಎಂಬ ಪರ್ವತವೂ, ಉತ್ತರಪಾರ್ಶ್ವದಲ್ಲಿ ಸುಪಾರ್ಶ್ವ ಎಂಬ ಪರ್ವತವೂ ಸ್ಮರಿಸಲ್ಪಟ್ಟಿವೆ. ಆ ಪರ್ವತಗಳಲ್ಲಿ ಕದಂಬ, ಜಂಬು, ಪಿಪ್ಪಲ ಮತ್ತು ವಟ ಎಂಬ ವೃಕ್ಷಗಳಿವೆ.

೧೭. ಜಂಬೂದ್ವೀಪಕ್ಕೆ ಅಲ್ಲಿರುವ ಜಂಬೂವೃಕ್ಷವೇ ಜಂಬೂ ದ್ವೀಪವೆಂಬ ನಾಮ ಪ್ರಸಿದ್ಧಿಗೆ ಕಾರಣವೆಂದು ಮಹರ್ಷಿಗಳು ಹೇಳುವರು. ಈ ಜಂಬೂ ವೃಕ್ಷದ ಫಲಗಳು ಮಹಾಗಜದ ಪ್ರಮಾಣದಲ್ಲಿರುವುವು.

೧೮. ಆ ಫಲಗಳು ಗಿರಿ, ಶಿಖರದಲ್ಲಿ ಬಿದ್ದು ಸಂಪೂರ್ಣವಾಗಿ ಭಗ್ನವಾಗುವುವು. ಆ ಫಲಗಳ ರಸದಿಂದ ಪರ್ವತದಲ್ಲಿ ಹರಿಯುವ ನದಿಯು ಜಂಬೂನದಿಯೆಂದು ಪ್ರಖ್ಯಾತವಾಗಿದೆ.

ಸರಿತ್ಪ್ರವರ್ತತೇ ಚಾಪಿ ಪೀಯತೇ ತತ್ರ ವಾಸಿಭಿಃ ।
ನ ಸ್ವೇದೋ ನ ಚ ದೌರ್ಗಂಧ್ಯಂ ನ ಜರಾ ನೇಂದ್ರಿಯಕ್ಷಯಃ ॥ ೧೯ ॥

ನ ತಾಪಃ ಸ್ವಚ್ಛಮನಸಾಂ ನಾಸೌಖ್ಯಂ ತತ್ರ ಜಾಯತೇ ।
ತತ್ತೀರಗಮೃದ್ರಸಂ ಪ್ರಾಪ್ಯ ವಾಯುನಾ ಸುವಿಶೋಷಿತಮ್ ॥ ೨೦ ॥

ಜಾಂಬೂನದಾಖ್ಯಂ ಭವತಿ ಸುವರ್ಣಂ ಸಿದ್ಧಭೂಷಣಮ್ ।
ಭದ್ರಾಶ್ವಃ ಪೂರ್ವತೋ ಮೇರೋಃ ಕೇತುಮಾಲಶ್ಚ ಪಶ್ಚಿಮೇ ॥ ೨೧ ॥

ವರ್ಷೇ ದ್ವೇ ತು ಮುನಿಶ್ರೇಷ್ಠಾಸ್ತಯೋರ್ಮಧ್ಯ ಇಲಾವೃತಮ್ ।
ವನಂ ಚೈತ್ರರಥಂ ಪೂರ್ವಂ ದಕ್ಷಿಣಂ ಗಂಧಮಾದನಮ್ ॥ ೨೨ ॥

---

೧೯. ಅಲ್ಲಿ ವಾಸಮಾಡುವ ಜನಗಳಿಂದ ಅಲ್ಲಿ ಹರಿದು ಬರುತ್ತಿರುವ ಜಂಬೂ ನದಿಯ ತೀರ್ಥವು ಪಾನಮಾಡಲ್ಪಡುತ್ತದೆ. ಅದರಿಂದ ಆ ಜನಗಳಿಗೆ ಬೆವರು, ದುರ್ಗಂಧವು, ಮುಪ್ಪು ಅಥವಾ ಇಂದ್ರಿಯಕ್ಷಯಗಳು ಉಂಟಾಗುವುದಿಲ್ಲ.

೨೦. ಸ್ವಚ್ಛವಾದ ಮಾನಸವುಳ್ಳ ಆ ಜನರಿಗೆ ತಾಪವೂ, ದುಃಖವೂ ಉಂಟಾಗುವುದಿಲ್ಲ. ಆ ನದಿಯ ತೀರದಲ್ಲಿರುವ ಮೃತ್ತಿಕೆಯ ರಸವು ಗಾಳಿಯಿಂದ ಒಣಗಿಸಲ್ಪಡುವುದು.

೨೧. ಹಾಗೆ ಒಣಗಿಸಲ್ಪಟ್ಟ ಮೃತ್ತಿಕಾರಸವು ಸಿದ್ಧರಿಗೆ ಭೂಷಣವಾದ ಜಾಂಬೂನದ ಎಂಬ ಹೆಸರಿನ ಸುವರ್ಣವಾಗುವುದು. ಮೇರು ಪರ್ವತದ ಪೂರ್ವದಲ್ಲಿ ಭದ್ರಾಶ್ವ ವರ್ಷವೂ ಪಶ್ಚಿಮದಲ್ಲಿ ಕೇತುಮಾಲ ವರ್ಷವೂ ಇರುವುವು.

೨೨. ಮುನಿಶ್ರೇಷ್ಠರೇ ! ಎರಡು ವರ್ಷಗಳ ಮಧ್ಯದಲ್ಲಿ ಇಲಾವೃತವೆಂಬ ವರ್ಷವು ಪ್ರಸಿದ್ಧವಾಗಿರುವುದು. ಮೇರುಪರ್ವತದ ಪೂರ್ವದಲ್ಲಿ ಚೈತ್ರರಥ ಎಂಬ ವನವೂ ದಕ್ಷಿಣದಲ್ಲಿ ಗಂಧಮಾದನವನವೂ ಇರುವುವು.

ವೈಭ್ರಾಜಂ ಪಶ್ಚಿಮಂ ವಿದ್ಯಾದುತ್ತರಂ ಸವಿತುರ್ವನಮ್ ।
ಅರುಣೋದಂ ಮಹಾಭದ್ರಮಸಿತೋದಂ ಚ ಮಾನಸಮ್ ॥ ೨೩ ॥

ಸರಾಂಸ್ಯೇತಾನಿ ಚತ್ವಾರಿ ದೇವಭೋಗ್ಯಾನಿ ಸರ್ವದಾ ।
ಸಿತಾಂತಶ್ಚ ಕುಮುದ್ವಾಂಶ್ಚ ಕುರರೀ ಮಾಲ್ಯವಾಂಸ್ತಥಾ ॥ ೨೪ ॥

ವೈಕಂಕೋ ಮಣಿಶೈಲಶ್ಚ ವೃಕ್ಷವಾಂಶ್ಚಾಚಲೋತ್ತಮಃ ।
ಮಹಾನೀಲೋಽಥ ರುಚಕಃ ಸಬಿಂದುರ್ಮಂದರಸ್ತಥಾ ॥ ೨೫ ॥

ವೇಣುಮಾಂಶ್ಚೈವ ಮೇಘಶ್ಚ ನಿಷಧೋ ದೇವಪರ್ವತಃ ।
ಇತ್ಯೇತೇ ದೇವರಚಿತಾಃ ಸಿದ್ಧಾವಾಸಾಃ ಪ್ರಕೀರ್ತಿತಾಃ ॥ ೨೬ ॥

---

೨೩. ಹಾಗು ವೈಭ್ರಾಜವನವು ಪಶ್ಚಿಮದಲ್ಲಿಯೂ, ಸವಿತೃವನವು ಉತ್ತರದಲ್ಲಿಯೂ ಇರುವುವು. ಮತ್ತು ಆ ಪರ್ವತದ ನಾಲ್ಕುದಿಕ್ಕುಗಳಲ್ಲಿ ಅರುಣೋದ, ಮಹಾಭದ್ರ, ಅಸಿತೋದ ಮತ್ತು ಮಾನಸ ಎಂಬ ನಾಲ್ಕು ಸರೋವರಗಳು ಇರುತ್ತವೆ.

೨೪. ಈ ನಾಲ್ಕು ಸರೋವರಗಳು ಯಾವಾಗಲೂ ದೇವತೆಗಳಿಗೆ ಭೋಗ ಸಾಧನವಾಗಿವೆ; ಮತ್ತು ಸಿತಾಂತ, ಕುಮುದ್ವಾನ್, ಕುರರೀ, ಮಾಲ್ಯವಾನ್ ಎಂಬ ಉತ್ತಮಗಿರಿಗಳು ದೇವತಾ ವಾಸಭೂಮಿಗಳಾಗಿವೆ.

೨೫. ಮತ್ತು ವೈಕಂಕ, ಮಣಿಶೈಲ, ವೃಕ್ಷವಾನ್, ಮಹಾನೀಲ, ರುಚಕ, ಬಿಂದು, ಮಂದರ ಎಂಬ ಶ್ರೇಷ್ಠಪರ್ವತಗಳು ಸಿದ್ಧಪುರುಷರ ಭೋಗಭೂಮಿಗಳಲ್ಲಿ ಪ್ರಖ್ಯಾತವಾಗಿವೆ.

೨೬. ಮತ್ತು ವೇಣುಮಾನ್, ಮೇಘ, ನಿಷಧ, ದೇವಪರ್ವತ ಎಂಬ ಸಮಸ್ತ ಪರ್ವತಗಳೂ ದೇವತೆಗಳಿಂದ ರಚಿಸಲ್ಪಟ್ಟ ಸಿದ್ಧಿಯುಳ್ಳವರ ವಾಸಭೂಮಿಗಳೆಂದು ಕೀರ್ತಿಸಲ್ಪಟ್ಟಿವೆ.

ಅರುಣೋದಸ್ಯ ಸರಸಃ ಪೂರ್ವತಃ ಕೇಸರಾಚಲಃ ।
ತ್ರಿಕೂಟಃ ಸಶಿರಶ್ಚೈವ ಪತಂಗೋ ರುಚಕಸ್ತಥಾ ॥ ೨೭ ॥

ನಿಷಧೋ ವಸುಧಾರಶ್ಚ ಕಲಿಂಗಸ್ತ್ರಿಶಿಖಃ ಸ್ಮೃತಃ ।
ಸಮೂಲೋ ವಸುವೇದಿಶ್ಚ ಕುರುರುಶ್ಚೈವ ಸಾನುಮಾನ್ ॥ ೨೮ ॥

ತಾಮ್ರಾತಶ್ಚ ವಿಶಾಲಶ್ಚ ಕುಮುದೋ ವೇಣುಪರ್ವತಃ ।
ಏಕಶೃಂಗೋ ಮಹಾಶೈಲೋ ಗಜಶೈಲಶ್ಚ ಪಿಂಜಕಃ ॥ ೨೯ ॥

ಪಂಚಶೈಲೋಽಥ ಕೈಲಾಸೋ ಹಿಮವಾಂಶ್ಚಾಚಲೋತ್ತಮಃ ।
ಇತ್ಯೇತೇ ದೇವಚರಿತಾ ಉತ್ಕಟಾಃ ಪರ್ವತೋತ್ತಮಾಃ ॥ ೩೦ ॥

---

೨೭. ಅರುಣೋದ ಎಂಬ ಸರೋವರದ ಪೂರ್ವದಲ್ಲಿ ಕೇಸರಾಚಲ, ತ್ರಿಕೂಟ, ಸಶಿರ, ಪತಂಗ, ರುಚಕ ಎಂಬ ಗಿರಿಗಳು ದೇವತೆಗಳ ವಿಹಾರಕ್ಕೆ ಆಸ್ಪದವಾದ ಉತ್ತಮಭೂಮಿಗಳಾಗಿವೆ.

೨೮. ಹಾಗೂ ನಿಷಧ, ವಸುಧಾರ, ಕಳಿಂಗ, ತ್ರಿಶಿಖ ಸಮೂಲ, ವಸುವೇದಿ, ಕುರುರು, ಸಾನುಮಾನ್ ಎಂಬ ಮಹಾಪರ್ವತಗಳು ಅರುಣೋದ ಸರೋವರದ ಪೂರ್ವ ಭಾಗದಲ್ಲಿರುವುವು.

೨೯. ಮತ್ತು ತಾಮ್ರಾತ, ವಿಶಾಲ ಕುಮುದ, ವೇಣು, ಏಕಶಂಗ, ಮಹಾಶೈಲ, ಗಜಶೈಲ, ಪಿಂಜಕ ಎಂಬ ಪರ್ವತಗಳು ಅರುಣೋದ ಸರೋವರದ ಪೂರ್ವದಲ್ಲಿರುವ ದೇವಭೋಗ್ಯಪರ್ವತಗಳಾಗಿವೆ.

೩೦. ಪಂಚಶೈಲ, ಕೈಲಾಸ, ಹಿಮವಾನ್ ಎಂಬ ಈ ಸಮಸ್ತ ಪರ್ವತ ಶ್ರೇಷ್ಠಗಳೂ ದೇವತೆಗಳ ವಿಹಾರ ವಿನೋದಕ್ಕೆ ಆಸ್ಪದವಾದ ಉಚ್ಚತರಗತಿಯ ಪರ್ವತೋತ್ತಮಗಳಾಗಿವೆ.

ಮಹಾಭದ್ರಸ್ಯ ಸರಸೋ ದಕ್ಷಿಣೇ ಕೇಸರಾಚಲಃ ।
ಶಿಖಿವಾಸಾಶ್ಚ ವೈಡೂರ್ಯಃ ಕಪಿಲೋ ಗಂಧಮಾದನಃ ॥ ೩೧ ॥

ಜಾರುಧಿಶ್ಚ ಸುರಾಂಬುಶ್ಚ ಸರ್ವಗಂಧಾಚಲೋತ್ತಮಃ ।
ಸುಪಾರ್ಶ್ವಶ್ಚ ಸುಪಕ್ಷಶ್ಚ ಕಂಕಃ ಕಪಿಲ ಏವ ಚ ॥ ೩೨ ॥

ವಿರಜೋ ಭದ್ರಜಾಲಶ್ಚ ಸುಸಕಶ್ಚ ಮಹಾಬಲಃ ।
ಅಂಜನೋ ಮಧುಮಾಂಸ್ತದ್ವಚ್ಚಿತ್ರಶೃಂಗೋ ಮಹಾಲಯಃ ॥ ೩೩ ॥

ಕುಮುದೋ ಮುಕುಟಶ್ಚೈವ ಪಾಂಡುರಃ ಕೃಷ್ಣ ಏವ ಚ ।
ಪಾರಿಜಾತೋ ಮಹಾಶೈಲಸ್ತಥೈವ ಕಪಿಲಾಚಲಃ ॥ ೩೪ ॥

---

೩೧. ಮಹಾಭದ್ರ ಸರೋವರದ ದಕ್ಷಿಣದಲ್ಲಿ ಕೇಸರಾಚಲ, ಶಿಖಿವಾಸ, ವೈದೂರ್ಯ, ಕಪಿಲ, ಗಂಧಮಾದನ ಎಂಬ ಪರ್ವತಗಳು ಸಿದ್ಧಪುರುಷರು ವಾಸ ಮಾಡುವ ಕ್ರೀಡಾಪರ್ವತಗಳಾಗಿವೆ.

೩೨. ಜಾರುಧಿ, ಸುರಾಂಬು, ಸರ್ವಗಂಧಾಚಲ, ಸುಪಾರ್ಶ್ವ, ಸುಪಕ್ಷ, ಕಂಕ, ಕಪಿಲ ಎಂಬ ಪರ್ವತಗಳೂ ಮಹಾಭದ್ರಸರಸ್ಸಿನ ದಕ್ಷಿಣದಲ್ಲಿರುವ ಪ್ರಶಸ್ತಗಿರಿಗಳಾಗಿವೆ.

೩೩. ವಿರಜ, ಭದ್ರಜಾಲ, ಸುಸಕ, ಮಹಾಬಲ, ಅಂಜನ, ಮಧುಮಾ, ಚಿತ್ರಶೃಂಗ, ಮಹಾಲಯ ಎಂಬ ಪರ್ವತಗಳು ಮಹಾಭದ್ರ ಸರೋವರದ ದಕ್ಷಿಣ ಪಾರ್ಶ್ವದಲ್ಲಿರುವ ಶ್ರೇಷ್ಠ ಪರ್ವತಗಳಾಗಿವೆ.

೩೪. ಕುಮುದ, ಮುಕುಟ, ಪಾಂಡುರ, ಕೃಷ್ಣ, ಪಾರಿಜಾತ, ಮಹಾಶೈಲ ಮತ್ತು ಕಪಿಲಾಚಲ ಎಂಬ ಪರ್ವತಗಳು ಮಹಾಭದ್ರ ಸರೋವರದ ದಕ್ಷಿಣ ದಿಕ್ಕಿನಲ್ಲಿವೆ.

ಸುಷೇಣಃ ಪುಂಡರೀಕಶ್ಚ ಮಹಾಮೇಘಸ್ತಥೈವ ಚ ।
ಏತೇ ಪರ್ವತರಾಜಾಶ್ಚ ಸಿದ್ಧಗಂಧರ್ವಸೇವಿತಾಃ ॥ ೩೫ ॥

ಅಸಿತೋದಸ್ಯ ಸರಸಃ ಪಶ್ಚಿಮೇ ಕೇಸರಾಚಲಃ ।
ಶಂಖಕೂಟೋಽಥ ವೃಷಭೋ ಹಂಸೋ ನಾಗಸ್ತಥೈವ ಚ ॥ ೩೬ ॥

ಕಾಲಾಂಜನಃ ಶುಕ್ರಶೈಲೋ ನೀಲಃ ಕಮಲ ಏವ ಚ ।
ಪಾರಿಜಾತೋ ಮಹಾಶೈಲಃ ಶೈಲಃ ಕನಕ ಏವ ಚ ॥ ೩೭ ॥

ಪುಷ್ಪಕಶ್ಚ ಸುಮೇಘಶ್ಚ ವಾರಾಹೋ ವಿರಜಾಸ್ತಥಾ ।
ಮಯೂರಃ ಕಪಿಲಶ್ಚೈವ ಮಹಾಕಪಿಲ ಏವ ಚ ॥ ೩೮ ॥

---

೩೫. ಹಾಗು ಸುಷೇಣ, ಪುಂಡರೀಕ, ಮಹಾಮೇಘ ಎಂಬ ಈ ಸಮಸ್ತ ಶ್ರೇಷ್ಠ ಪರ್ವತಗಳೂ ಸಿದ್ಧಗಂಧರ್ವರಿಂದ ಸೇವಿಸಲ್ಪಟ್ಟಿವೆ.

೩೬. ಮತ್ತು ಕೇಸರಾಚಲ, ಶಂಖಕೂಟ, ವೃಷಭ, ಹಂಸ, ನಾಗ ಎಂಬ ಪರ್ವತಗಳು ಅಸಿತೋದವೆಂಬ ಸರೋವರದ ಪಶ್ಚಿಮದಿಕ್ಕಿನಲ್ಲಿ ದೇವಾದಿಗಳ ವಾಸ ಭೂಮಿಗಳಾಗಿವೆ.

೩೭. ಕಾಲಾಂಜನ, ಶುಕ್ರಶೈಲ, ನೀಲ, ಕಮಲ, ಪಾರಿಜಾತ, ಮಹಾಶೈಲ, ಶೈಲ, ಕನಕ ಎಂಬ ಪರ್ವತಗಳು ಸಿದ್ಧಜನರ ಭೋಗಸಾಧನಗಳಾಗಿ ಅಸಿತೋದ ಸರಸ್ಸಿನ ಪಶ್ಚಿಮದಲ್ಲಿವೆ.

೩೮. ಮತ್ತು ಪುಷ್ಪಕ, ಸುಮೇಘ, ವಾರಾಹ, ವಿರಜ, ಮಯೂರ, ಕಪಿಲ ಮತ್ತು ಮಹಾಕಪಿಲ ಎಂಬ ಪರ್ವತಗಳು ಮಾನಸ ಸರೋವರದ ಉತ್ತರ ತೀರದ ಪರ್ವತ ಶ್ರೇಣಿಯಲ್ಲಿ ಸೇರಿವೆ.

ಇತ್ಯೇತೇ ದೇವಗಂಧರ್ವಸಿದ್ಧಯಕ್ಷೈಶ್ಚ ಸೇವಿತಾಃ ।
ಸರಸೋ ಮಾನಸಸ್ಯೇಹ ಉತ್ತರೇ ಕೇಶವಾಚಲಃ ॥ ೩೯ ॥

ಏತೇಷಾಂ ಶೈಲಮುಖ್ಯಾನಾಮಂತರೇಷು ಯಥಾಕ್ರಮಮ್ ।
ಸಂತಿ ಚೈವಾಂತರದ್ರೋಣ್ಯಃ ಸರಾಂಸಿ ಚ ವನಾನಿ ಚ ॥ ೪೦ ॥

ವಸಂತಿ ತತ್ರ ಮುನಯಃ ಸಿದ್ಧಾ ವೈ ಬ್ರಹ್ಮಭಾವಿತಾಃ ।
ಪ್ರಸನ್ನಾಃ ಶಾಂತರಜಸಃ ಸರ್ವದುಃಖವಿವರ್ಜಿತಾಃ ॥ ೪೧ ॥

ಇತಿ ಶ್ರೀ ಕೂರ್ಮಪುರಾಣೇ ಪಂಚಚತ್ವಾರಿಂಶತ್ತಮೋಽಧ್ಯಾಯಃ.

---

೩೯. ಈ ಪರ್ವತಗಳೂ ಮತ್ತು ಕೇಶವಾಚಲ ಎಂಬ ಪರ್ವತವೂ ಸಿದ್ಧ ದೇವ-ಗಂಧರ್ವ ಮತ್ತು ಯಕ್ಷರಿಂದ ಸೇವಿಸಲ್ಪಟ್ಟವುಗಳಾಗಿ ಮಾನಸ ಸರೋವರದ ಉತ್ತರ ದಿಕ್ಕಿನಲ್ಲಿರುತ್ತವೆ.

೪೦. ಈ ಮುಖ್ಯಪರ್ವತಗಳ ಅಂತರಭಾಗಗಳಲ್ಲಿ ಕ್ರಮವಾಗಿ ಅನೇಕ ಕಣಿವೆಗಳೂ ಸರೋವರಗಳೂ ಮತ್ತು ವನಗಳೂ ಸಂಖ್ಯಾತೀತವಾಗಿ ಸೇರಿಕೊಂಡಿವೆ.

೪೧. ಅವುಗಳಲ್ಲಿ ಸಮಸ್ತ ದುಃಖಗಳಿಂದ ವರ್ಜಿತರೂ, ಶಾಂತವಾದ ರಜೋಗುಣವುಳ್ಳವರೂ, ಪ್ರಸನ್ನರೂ, ಬ್ರಹ್ಮಭಾವನೆಯುಳ್ಳವರೂ ಮತ್ತು ಸಿದ್ಧರೂ ಆದ ಮಹಾಮುನಿಗಳು ವಾಸಮಾಡುತ್ತಾರೆ.

( ಕೂರ್ಮಪುರಾಣದಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿದುದು. )

---

ಶ್ರೀಃ

# ಕೂರ್ಮಪುರಾಣಂ

---

## ಷಟ್ಚತ್ವಾರಿಂಶತ್ತಮೋಽಧ್ಯಾಯಃ.

**ಸೂತ ಉವಾಚ :—**

**ಚತುರ್ದಶಸಹಸ್ರಾಣಿ ಯೋಜನಾನಾಂ ಮಹಾಪುರೀ ।**
**ಮೇರೋರುಪರಿ ವಿಖ್ಯಾತಾ ದೇವದೇವಸ್ಯ ವೇಧಸಃ ॥ ೧ ॥**

**ತತ್ರಾಸ್ತೇ ಭಗವಾನ್ ಬ್ರಹ್ಮಾ ವಿಶ್ವಾತ್ಮಾ ವಿಶ್ವಭಾವನಃ ।**
**ಉಪಾಸ್ಯಮಾನೋಽಯೋಗೀಂದ್ರೈರ್ಮುನೀಂದ್ರೋಪೇಂದ್ರಶಂಕರೈಃ॥**

---

## ನಲವತ್ತಾರನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಮೇರುಪರ್ವತದ ಮೇಲುಗಡೆ ಇರುವ ದೇವೋತ್ತಮನಾದ ಬ್ರಹ್ಮನ ಮಹಾನಗರಿಯು ಹದಿನಾಲ್ಕು ಸಹಸ್ರ ಯೋಜನಗಳ ಪರಿಮಾಣವುಳ್ಳದ್ದಾಗಿ ಪ್ರಸಿದ್ಧವಾಗಿದೆ.

೨. ಆ ನಗರದಲ್ಲಿ ಪೂಜ್ಯನೂ, ವಿಶ್ವರೂಪಿಯೂ ಮತ್ತು ವಿಶ್ವಕಾರಣನೂ ಆದ ಬ್ರಹ್ಮದೇವನು ಅನೇಕ ಯೋಗೀಂದ್ರರಿಂದಲೂ, ಮುನೀಂದ್ರ, ಉಪೇಂದ್ರ, ಶಂಕರರಿಂದಲೂ ಸೇವಿಸಲ್ಪಡುತ್ತಲಿರುವನು.

ತತ್ರ ದೇವೇಶ್ವರೇಶಾನಂ ವಿಶ್ವಾತ್ಮಾನಂ ಪ್ರಜಾಪತಿಮ್ ।
ಸನತ್ಕುಮಾರೋ ಭಗವಾನುಪಾಸ್ತೇ ನಿತ್ಯಮೇವ ಹಿ ॥ ೩ ॥

ಸ ಸಿದ್ಧಋಷಿಗಂಧರ್ವೈಃ ಪೂಜ್ಯಮಾನಃ ಸುರೈರಪಿ ।
ಸಮಾಸ್ತೇ ಯೋಗಯುಕ್ತಾತ್ಮಾ ಪೀತ್ವಾ ತತ್ಪರಮಾಮೃತಮ್ ॥ ೪ ॥

ತತ್ರ ದೇವಾಧಿದೇವಸ್ಯ ಶಂಭೋರಮಿತತೇಜಸಃ ।
ದೀಪ್ತಮಾಯತನಂ ಶುಭ್ರಂ ಪುರಸ್ತಾದ್ಬ್ರಹ್ಮಣಃ ಸ್ಥಿತಮ್ ॥ ೫ ॥

ದಿವ್ಯಕಾಂತಿಸಮಾಯುಕ್ತಂ ಚತುರ್ದ್ವಾರಂ ಸುಶೋಭನಮ್ ।
ಮಹರ್ಷಿಗಣಸಂಕೀರ್ಣಂ ಬ್ರಹ್ಮವಿದ್ಭಿರ್ನಿಷೇವಿತಮ್ ॥ ೬ ॥

---

೩. ಅಲ್ಲಿ ದೇವತಾಧಿಪತಿಯೂ, ವಿಶ್ವಾತ್ಮಕನೂ ಮತ್ತು ಪ್ರಜಾಪಾಲಕನೂ ಆದ ಬ್ರಹ್ಮದೇವನನ್ನು ಷಡ್ಗುಣೈಶ್ವರ್ಯಸಂಪನ್ನನಾದ ಸನತ್ಕುಮಾರ ಮುನಿಯು ಯಾವಾಗಲೂ ಉಪಾಸನೆ ಮಾಡುತ್ತಲಿರುವನು.

೪. ಯೋಗಸಮಾಧಿಯಲ್ಲಿ ಇರಿಸಿದ ಅಂತಃಕರಣವುಳ್ಳ ಆ ಬ್ರಹ್ಮನು ಸಿದ್ಧ ಋಷಿ-ಗಂಧರ್ವ-ದೇವತೆಗಳಿಂದ ಪೂಜಿಸಲ್ಪಡುವವನಾಗಿ ಶ್ರೇಷ್ಠವಾದ ಆ ಯೋಗಾಮೃತವನ್ನು ಪಾನಮಾಡಿಕೊಂಡು ವಾಸಮಾಡುತ್ತಾನೆ.

೫. ಅಲ್ಲಿ ಬ್ರಹ್ಮದೇವನ ಮುಂಭಾಗದಲ್ಲಿ ದೇವಾಧಿದೇವನೂ, ಅಪಾರ ಮಹಿಮನೂ ಆದ ಈಶ್ವರನ ಥಳಥಳಿಸುವ ಮತ್ತು ಪವಿತ್ರವಾದ ಆಲಯವು ಇರುವುದು.

೬. ಆ ಶಿವಾಲಯವು ದಿವ್ಯವಾದ ಕಾಂತಿಯಿಂದ ಕೂಡಿರುವುದೂ, ನಾಲು ದ್ವಾರಗಳಿಂದ ಶೋಭಿತವೂ, ಮಂಗಳಕರವೂ, ಮಹರ್ಷಿಗಳಿಂದ ತುಂಬಿರುವುದೂ ಮತ್ತು ಬ್ರಹ್ಮಜ್ಞಾನಿಗಳಿಂದ ಸೇವಿಸಲ್ಪಟ್ಟಿರುವುದೂ ಆಗಿದೆ.

ದೇವ್ಯಾ ಸಹ ಮಹಾದೇವಃ ಶಶಾಂಕಾರ್ಕಾಗ್ನಿಲೋಚನಃ ।
ರಮತೇ ತತ್ರ ವಿಶ್ವೇಶಃ ಪ್ರಮಥೈಃ ಪ್ರಮಥೇಶ್ವರಃ ॥ ೭ ॥

ತತ್ರ ವೇದವಿದಃ ಶಾಂತಾ ಮುನಯೋ ಬ್ರಹ್ಮಚಾರಿಣಃ ।
ಪೂಜಯಂತಿ ಮಹಾದೇವಂ ತಪಸಾ ಸತ್ಯವಾದಿನಃ ॥ ೮ ॥

ತೇಷಾಂ ಸಾಕ್ಷಾನ್ಮಹಾದೇವೋ ಮುನೀನಾಂ ಭಾವಿತಾತ್ಮನಾಮ್ ।
ಗೃಹ್ಣಾತಿ ಪೂಜಾಂ ಶಿರಸಾ ಪಾರ್ವತ್ಯಾ ಪರಮೇಶ್ವರಃ ॥ ೯ ॥

ತತ್ರೈವ ಪರ್ವತವರೇ ಶಕ್ರಸ್ಯ ಪರಮಾ ಪುರೀ ।
ನಾಮ್ನಾಮರಾವತೀ ಪೂರ್ವೇ ಸರ್ವಶೋಭಾಸಮನ್ವಿತಾ ॥ ೧೦ ॥

---

೭. ವಿಶ್ವನಿಯಾಮಕನೂ, ಪ್ರಮಥಗಣಗಳಿಗೆ ಅಧಿಪತಿಯೂ, ಚಂದ್ರ, ಸೂರ್ಯ, ಅಗ್ನಿರೂಪವಾದ ಮೂರು ನೇತ್ರಗಳುಳ್ಳವನೂ ಆದ ಮಹಾದೇವನು ಅಲ್ಲಿ ಪಾರ್ವತೀದೇವಿಯೊಡನೆ ಅನೇಕ ಪ್ರಮಥಗಳ ಸಂಗಡ ರಮಿಸುತ್ತಿರುವನು.

೮. ಅಲ್ಲಿ ವೇದಜ್ಞರೂ, ಶಾಂತಚಿತ್ತರೂ, ಬ್ರಹ್ಮಚರ್ಯಸಂಪನ್ನರೂ ಮತ್ತು ಸತ್ಯವಾದಿಗಳೂ ಆದ ಅನೇಕ ಮಹರ್ಷಿಗಳು ತಪಶ್ಚರ್ಯೆಯಿಂದ ಮಹಾದೇವನಾದ ಈಶ್ವರನನ್ನು ಪೂಜಿಸುತ್ತಾರೆ.

೯. ದೇವೋತ್ತಮನಾದ ಪರಮೇಶ್ವರನು ಪಾರ್ವತೀದೇವಿಯೊಡನೆ ಉಪಾಸನೆಯಿಂದ ಪವಿತ್ರವಾದ ಆತ್ಮವುಳ್ಳ ಆ ಮಹರ್ಷಿಗಳು ಶಿರಸ್ಸಿನಿಂದ ಮಾಡಿದ ವಂದನ ಪೂಜೆಯನ್ನು ಸಾಕ್ಷಾತ್ತಾಗಿ ಸ್ವೀಕರಿಸುವನು.

೧೦. ಆ ಮೇರುಪರ್ವತದಲ್ಲಿಯೇ ಪೂರ್ವಭಾಗದಲ್ಲಿ ಎಲ್ಲಾ ಕಾಂತಿಗಳಿಂದ ಕೂಡಿರುವ ಅಮರಾವತಿ ಎಂಬ ನಾಮದಿಂದ ಅಂಕಿತವಾದ ಪ್ರಶಸ್ತವಾದ ಇಂದ್ರನ ನಗರಿಯು ಇರುವುದು.

ತತ್ರ ಚಾಪ್ಸರಸಃ ಸರ್ವಾ ಗಂಧರ್ವಾಃ ಸಿದ್ಧಚಾರಣಾಃ ।
ಉಪಾಸತೇ ಸಹಸ್ರಾಕ್ಷಂ ದೇವಾಸ್ತತ್ರ ಸಹಸ್ರಶಃ ॥ ೧೧ ॥

ಯೇ ಧಾರ್ಮಿಕಾ ವೇದವಿದೋ ಯಾಗಹೋಮಪರಾಯಣಾಃ ।
ತೇಷಾಂ ತತ್ಪರಮಂ ಸ್ಥಾನಂ ದೇವಾನಾಮಪಿ ದುರ್ಲಭಮ್ ॥ ೧೨ ॥

ತಸ್ಮಾದ್ದಕ್ಷಿಣದಿಗ್ಭಾಗೇ ವಹ್ನೇರಮಿತತೇಜಸಃ ।
ತೇಜೋವತೀ ನಾಮ ಪುರೀ ದಿವ್ಯಾಶ್ಚರ್ಯಸಮನ್ವಿತಾ ॥ ೧೩ ॥

ತತ್ರಾಸ್ತೇ ಭಗವಾನ್ ವಹ್ನಿರ್ಭ್ರಾಜಮಾನಃ ಸ್ವತೇಜಸಾ ।
ಜಪಿನಾಂ ಹೋಮಿನಾಂ ಸ್ಥಾನಂ ದಾನವಾನಾಂ ದುರಾಸದಮ್ ॥ ೧೪ ॥

---

೧೧. ಆ ಅಮರಾವತಿಯಲ್ಲಿ ಅಪ್ಸರಾಂಗನೆಯರೂ, ಗಂಧರ್ವರೂ, ಸಿದ್ಧರೂ, ಚಾರಣರೂ ಮುಂತಾದ ಸಹಸ್ರಾರುಮಂದಿ ದೇವತೆಗಳು ಎಲ್ಲರೂ ಸೇರಿ ಸಹಸ್ರ ನೇತ್ರನಾದ ಇಂದ್ರನನ್ನು ಸೇವಿಸುವರು.

೧೨. ಧಾರ್ಮಿಕರೂ ವೇದಜ್ಞರೂ ಮತ್ತು ಯಾಗ ಹೋಮ ಮುಂತಾದ ಸತ್ಕರ್ಮನಿರತರೂ ಆದ ಸುಕೃತಿಗಳಿಗೆ. ದೇವತೆಗಳಿಗೂ ಅಲಭ್ಯವಾದ, ಶ್ರೇಷ್ಠವಾದ ಆ ಇಂದ್ರನ ನಗರವು ಪ್ರಾಪ್ಯವಾಗಿದೆ.

೧೩. ಅದಕ್ಕಿಂತ ದಕ್ಷಿಣದಿಕ್ಕಿನ ಭಾಗದಲ್ಲಿ ಅಪಾರವಾದ ಮಹಿಮೆಯುಳ್ಳ ಅಗ್ನಿಯ ತೇಜೋವತಿ ಎಂದು ನಾಮಾಂಕಿತವಾದ ನಗರವು ಅನೇಕ ದಿವ್ಯಾಶ್ಚರ್ಯಗಳಿಂದ ಪೂರ್ಣವಾಗಿದೆ.

೧೪. ಆ ತೇಜೋವತಿಯಲ್ಲಿ ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಪೂಜ್ಯನಾದ ಅಗ್ನಿಯು ವಾಸಮಾಡುತ್ತಿರುವನು. ದಾನವರಿಗೆ ಅಲಭ್ಯವಾದ ಆ ಸ್ಥಾನವು ಜಪ, ಹೋಮನಿರತರಾದ ಸುಕೃತಿಗಳಿಗೆ ಲಭ್ಯವಾಗುವುದು.

ದಕ್ಷಿಣೇ ಪರ್ವತವರೇ ಯಮಸ್ಯಾಪಿ ಮಹಾಪುರೀ ।
ನಾಮ್ನಾ ಸಂಯಮನೀ ದಿವ್ಯಾ ಸರ್ವಶೋಭಾಸಮನ್ವಿತಾ ॥ ೧೫ ॥

ತತ್ರ ವೈವಸ್ವತಂ ದೇವಂ ದೇವಾದ್ಯಾಃ ಪರ್ಯುಪಾಸತೇ ।
ಸ್ಥಾನಂ ತತ್ಸತ್ಯಸಂಧಾನಾಂ ಲೋಕೇ ಪುಣ್ಯಕೃತಾಂ ನೃಣಾಮ್ ॥ ೧೬ ॥

ತಸ್ಯಾಸ್ತು ಪಶ್ಚಿಮೇ ಭಾಗೇ ನಿರ್ಋತೇಸ್ತು ಮಹಾತ್ಮನಃ ।
ರಕ್ಷೋವತೀ ನಾಮ ಪುರೀ ರಾಕ್ಷಸೈಃ ಸಂವೃತಾ ತು ಯಾ ॥ ೧೭ ॥

ತತ್ರ ತೇ ನೈರ್ಋತಂ ದೇವಂ ರಾಕ್ಷಸಾಃ ಪರ್ಯುಪಾಸತೇ ।
ಗಚ್ಛಂತಿ ತಾಂ ಧರ್ಮರತಾ ಯೇ ತು ತಾಮಸವೃತ್ತಯಃ ॥ ೧೮ ॥

---

೧೫. ದಕ್ಷಿಣದಿಕ್ಕಿನ ಶ್ರೇಷ್ಠಪರ್ವತದಲ್ಲಿ ಸಮಸ್ತ ಶೋಭೆಗಳಿಂದ ಕೂಡಿರುವುದೂ, ದಿವ್ಯವೂ, ಸಂಯಮನೀ ಎಂಬ ನಾಮಾಂಕಿತವೂ ಆದ ಯಮಧರ್ಮರಾಜನ ಮಹಾನಗರವು ಪ್ರಸಿದ್ಧವಾಗಿದೆ.

೧೬. ಅಲ್ಲಿ ಅನೇಕ ದೇವತೆಗಳು ಸೂರ್ಯನ ಪುತ್ರನಾದ ಯಮದೇವನನ್ನು ಸೇವಿಸುತ್ತಲಿರುವರು. ಆ ನಗರವು ಇಹಲೋಕದಲ್ಲಿ ಪುಣ್ಯವನ್ನು ಗಳಿಸಿದ ಸತ್ಯವಂತರಿಗೆ ಲಭ್ಯವಾದ ಸ್ಥಾನವು.

೧೭. ಅದರ ಪಶ್ಚಿಮದಿಕ್ಕಿನ ಭಾಗದಲ್ಲಿ ರಕ್ಷೋವತೀ ಎಂಬ ಅನ್ವರ್ಥನಾಮ ಶೋಭಿತವೂ, ರಾಕ್ಷಸರಿಂದ ಪೂರ್ಣವೂ ಆದ ಮಹಾತ್ಮನಾದ ನಿರ್ಋತಿ ದೇವ ನಗರವು ಇರುವುದು.

೧೮. ಅಲ್ಲಿ ರಾಕ್ಷಸರು ಆ ನಿರ್ಋತಿದೇವನನ್ನು ಸೇವಿಸುತ್ತಿರುವರು. ತಮೋಗುಣದಲ್ಲಿ ಆಸಕ್ತರಾಗಿ ಧರ್ಮಾಚರಣಶೀಲವುಳ್ಳವರು, ರಕ್ಷೋವತಿ ನಗರವನ್ನು ಹೊಂದುತ್ತಾರೆ.

ಪಶ್ಚಿಮೇ ಪರ್ವತವರೇ ವರುಣಸ್ಯ ಮಹಾಪುರೀ ।
ನಾಮ್ನಾ ಶುದ್ಧವತೀ ಪುಣ್ಯಾ ಸರ್ವಕಾಮರ್ಧಿಸಂಯುತಾ ॥ ೧೯ ॥

ತತ್ರಾಪ್ಸರೋಗಣೈಃ ಸಿದ್ಧೈಃ ಸೇವ್ಯಮಾನೋಽಮರಾಧಿಪೈಃ ।
ಆಸ್ತೇ ಸ ವರುಣೋ ರಾಜಾ ತತ್ರ ಗಚ್ಛಂತಿ ಯೇಽಂಬುದಾಃ ॥ ೨೦ ॥

ತಸ್ಯಾ ಉತ್ತರದಿಗ್ಭಾಗೇ ವಾಯೋರಪಿ ಮಹಾಪುರೀ ।
ನಾಮ್ನಾ ಗಂಧವತೀ ಪುಣ್ಯಾ ತತ್ರಾಸ್ತೇಽಸೌ ಪ್ರಭಂಜನಃ ॥ ೨೧ ॥

ಅಪ್ಸರೋಗಣಗಂಧರ್ವೈಃ ಸೇವ್ಯಮಾನೋ ಮಹಾನ್ ಪ್ರಭುಃ ।
ಪ್ರಾಣಾಯಾಮಪರಾ ವಿಪ್ರಾಃ ಸ್ಥಾನಂ ತದ್ಯಾಂತಿ ಶಾಶ್ವತಮ್ ॥ ೨೨ ॥

---

೧೯. ಆ ಪರ್ವತದ ದಕ್ಷಿಣದಿಗ್ಭಾಗದಲ್ಲಿ ಅನೇಕ ಇಷ್ಟಾರ್ಥ ಸಮೃದ್ಧಿಯಿಂದ ಕೂಡಿರುವುದೂ, ಪವಿತ್ರವೂ ಆದ ಶುದ್ಧವತೀ ಎಂಬ ನಾಮಾಂಕಿತವಾದ ವರುಣನ ಮಹಾನಗರವು ಇರುವುದು.

೨೦. ಆ ನಗರದಲ್ಲಿ ಆ ವರುಣರಾಜನು ಅಪ್ಸರಾಂಗನೆಯರ ಸಮೂಹದಿಂದಲೂ, ಸಿದ್ಧರಿಂದಲೂ, ದೇವೇಶ್ವರರಿಂದಲೂ ಸೇವಿಸಲ್ಪಡುತ್ತಲಿರುವನು. ಜಲದಾನ ಮಾಡಿದವರು ಆ ಸ್ಥಾನವನ್ನು ಹೊಂದುತ್ತಾರೆ.

೨೧. ಅದರ ಉತ್ತರದಿಕ್ಕಿನ ಭಾಗದಲ್ಲಿ ಗಂಧವತೀ ನಾಮಾಂಕಿತವೂ, ಪವಿತ್ರವೂ ಆದ ವಾಯುದೇವನ ಮಹಾನಗರವು ಇರುವುದು. ಅಲ್ಲಿ ವಾಯುದೇವನು ವಾಸಮಾಡುತ್ತಿರುವನು.

೨೨. ಮಹಾತ್ಮನೂ, ಪ್ರಭುವೂ ಆದ ವಾಯುದೇವನು ಅಪ್ಸರಾಂಗನೆಯರು ಮತ್ತು ಗಂಧರ್ವರ ಸಂಘದಿಂದ ಸೇವಿಸಲ್ಪಡುತ್ತಿರುವನು. ಪ್ರಾಣಾಯಾಮದಲ್ಲಿ ತತ್ಪರರಾದ ವಿಪ್ರರು ಶಾಶ್ವತವಾದ ವಾಯುಸ್ಥಾನವನ್ನು ಹೊಂದುತ್ತಾರೆ.

ತಸ್ಯಾಃ ಪೂರ್ವೇ ತು ದಿಗ್ಭಾಗೇ ಸೋಮಸ್ಯ ಪರಮಾ ಪುರೀ ।
ನಾಮ್ನಾ ಕಾಂತಿಮತೀ ಶುಭ್ರಾ ತಸ್ಯಾಂ ಸೋಮೋ ವಿರಾಜತೇ ॥ ೨೩ ॥

ತತ್ರ ಯೇ ಧರ್ಮನಿರತಾಃ ಸ್ವಧರ್ಮಂ ಪರ್ಯುಪಾಸತೇ ।
ತೇಷಾಂ ತದುಚಿತಂ ಸ್ಥಾನಂ ನಾನಾಭೋಗಸಮನ್ವಿತಮ್ ॥ ೨೪ ॥

ತಸ್ಯಾಸ್ತು ಪೂರ್ವದಿಗ್ಭಾಗೇ ಶಂಕರಸ್ಯ ಮಹಾಪುರೀ ।
ನಾಮ್ನಾ ಯಶೋವತೀ ಪುಣ್ಯಾ ಸರ್ವೇಷಾಂ ಸಾ ದುರಾಸದಾ ॥ ೨೫ ॥

ತತ್ರೇಶಾನಸ್ಯ ಭವನಂ ರುದ್ರೇಣಾಧಿಷ್ಠಿತಂ ಶುಭಮ್ ।
ಗಣೇಶ್ವರಸ್ಯ ವಿಪುಲಂ ತತ್ರಾಸ್ತೇ ಸಗಣಾವೃತಃ ॥ ೨೬ ॥

---

೨೩. ಅದರ ಪೂರ್ವದಿಕ್ಕಿನ ಭಾಗದಲ್ಲಿ ಕಾಂತಿಮತೀ ಎಂಬ ನಾಮಾಂಕಿತವೂ, ಶುಭ್ರವೂ ಆದ ಕುಬೇರನ ಉತ್ತಮ ನಗರವು ಪ್ರಕಾಶಿಸುತ್ತಿದೆ. ಅದರಲ್ಲಿ ಕುಬೇರನು ವಾಸಮಾಡುತ್ತಿರುವನು.

೨೪. ಯಾವ ಮಾನವರು ಧರ್ಮಾನುಷ್ಠಪರರಾಗಿ ಸ್ವಧರ್ಮವನ್ನು ಆಚರಿಸುವರೋ, ಅವರಿಗೆ ಅನೇಕ ಭೋಗ ಸಾಮಗ್ರಿಗಳಿಂದ ಕೂಡಿದ ಕುಬೇರನಗರವು ಶ್ರೇಷ್ಠವಾದ ಭೋಗಸ್ಥಾನವು.

೨೫. ಅದರ ಪೂರ್ವದಿಕ್ಕಿನ ಭಾಗದಲ್ಲಿ ಸಾಮಾನ್ಯ ಜನರಿಗೆ ದುರ್ಲಭವೂ ಯಶೋವತೀ ಎಂಬ ನಾಮಾಂಕಿತವೂ ಪರಮಪವಿತ್ರವೂ ಆದ ಶಂಕರನ ಮಹಾಪುರವು ಇರುವುದು.

೨೬. ಅಲ್ಲಿ ರುದ್ರಮೂರ್ತಿಯಿಂದ ರಕ್ಷಿಸಲ್ಪಟ್ಟಿರುವುದೂ, ಮಂಗಳವೂ ಆದ ಗಣಾಧಿಪತಿಯಾದ ಈಶ್ವರನ ವಿಸ್ತಾರವಾದ ಮಂದಿರವು ಇರುವುದು. ಅಲ್ಲಿ ಗಣಗಳಿಂದ ಸುತ್ತಲ್ಪಟ್ಟವನಾಗಿ ಈಶ್ವರನು ವಾಸಮಾಡಿದ್ದಾನೆ.

ತತ್ರ ಭೋಗಾದಿಲಿಪ್ಸೂನಾಂ ಭಕ್ತಾನಾಂ ಪರಮೇಷ್ಠಿನಃ ।
ನಿವಾಸಃ ಕಲ್ಪಿತಃ ಪೂರ್ವಂ ದೇವದೇವೇನ ಶೂಲಿನಾ ॥ ೨೭ ॥

ವಿಷ್ಣುಪಾದಾದ್ವಿನಿಷ್ಕ್ರಾಂತಾ ಪ್ಲಾವಯಿತ್ವೇಂದುಮಂಡಲಮ್ ।
ಸಮಂತಾದ್ಬ್ರಹ್ಮಣಃ ಪುರ್ಯಾಂ ಗಂಗಾ ಪತತಿ ವೈ ತತಃ ॥ ೨೮ ॥

ಸಾ ತತ್ರ ಪತಿತಾ ದಿಕ್ಷು ಚತುರ್ಧಾ ಹ್ಯಭವದ್ದ್ವಿಜಾಃ ।
ಸೀತಾ ಚಾಲಕನಂದಾ ಚ ಸುಚಕ್ಷುರ್ಭದ್ರನಾಮಿಕಾ ॥ ೨೯ ॥

ಪೂರ್ವೇಣ ಶೈಲಾಚ್ಛೈಲಂ ತು ಸೀತಾ ಯಾತ್ಯಂತರಿಕ್ಷಗಾ ।
ತತಶ್ಚ ಪೂರ್ವವರ್ಷೇಣ ಭದ್ರಾಶ್ವಾದ್ಯಾತಿ ಚಾರ್ಣವಮ್ ॥ ೩೦ ॥

---

೨೭. ಅಲ್ಲಿ ಭೋಗಾದಿಗಳನ್ನು ಅನುಭವಿಸುವ ಇಷ್ಟವುಳ್ಳ ಭಕ್ತರಿಗೋಸ್ಕರ ದೇವೋತ್ತಮನೂ, ತ್ರಿಶೂಲಧಾರಿಯೂ ಆದ ಈಶ್ವರನಿಂದ ಬ್ರಹ್ಮದೇವನ ವಾಸ ಭೂಮಿಯು ಕಲ್ಪಿಸಲ್ಪಟ್ಟಿದೆ.

೨೮. ವಿಷ್ಣುವಿನ ಪಾದಾಗ್ರದಿಂದ ಹುಟ್ಟಿದ ಗಂಗಾನದಿಯು ಅಲ್ಲಿಂದ ಹರಿದು ಬಂದು ಚಂದ್ರಮಂಡಲವನ್ನು ನೆನೆಸಿ ಬ್ರಹ್ಮನ ನಗರದಲ್ಲಿ ಸುತ್ತಲೂ ಬೀಳುತ್ತಿರುವುದು.

೨೯. ದ್ವಿಜರೇ ! ಆ ಗಂಗಾ ನದಿಯು ನಾಲ್ಕುದಿಕ್ಕುಗಳಲ್ಲಿ ಬಿದ್ದು ನಾಲ್ಕು ಪ್ರವಾಹಗಳ ರೂಪದಿಂದ ಪ್ರವಹಿಸಿತು. ಆ ನಾಲ್ಕು ನದಿಗಳು, ಸೀತಾ, ಅಲಕನಂದಾ, ಸುಚುಕ್ಷು, ಭದ್ರಾ ಎಂಬ ನಾಮಾಂಕಿತಗಳಾದುವು.

೩೦. ಸೀತಾ ನದಿಯು ಪೂರ್ವಭಾಗದಲ್ಲಿ ಬೆಟ್ಟದಿಂದ ಬೆಟ್ಟಕ್ಕೆ ಹರಿಯುತ್ತಾ ಆಕಾಶಕ್ಕೆ ಹೋಗಿ ಸೇರುವುದು. ಹಾಗೂ ಪೂರ್ವವರ್ಷದಲ್ಲಿರುವ ಭದ್ರಾಶ್ವಗಿರಿಯ ಮೂಲಕ ಸಮುದ್ರವನ್ನು ಸೇರುವುದು.

ತಥೈವಾಲಕನಂದಾ ಚ ದಕ್ಷಿಣಾದೇತ್ಯ ಭಾರತಮ್ ।
ಪ್ರಯಾತಿ ಸಾಗರಂ ಭಿತ್ವಾ ಸಪ್ತಭೇದಾ ದ್ವಿಜೋತ್ತಮಾಃ ॥ ೩೧ ॥

ಸುಚಕ್ಷುಃ ಪಶ್ಚಿಮಗಿರೀನತೀತ್ಯ ಸಕಲಾಂಸ್ತಥಾ ।
ಪಶ್ಚಿಮಂ ಕೇತುಮಾಲಾಖ್ಯಂ ವರ್ಷಂ ಗತ್ವೈತಿ ಚಾರ್ಣವಮ್॥ ೩೨ ॥

ಭದ್ರಾ ತಥೋತ್ತರಗಿರೀನುತ್ತರಾಂಶ್ಚ ತಥಾ ಕುರೂನ್ ।
ಅತೀತ್ಯ ಚೋತ್ತರಾಂಭೋಧಿಂ ಸಮಭ್ಯೇತಿ ಮಹರ್ಷಯಃ ॥ ೩೩ ॥

ಆನೀಲನಿಷಧಾಯಾಮೌ ಮಾಲ್ಯವದ್ಗಂಧಮಾದನೌ ।
ತಯೋರ್ಮಧ್ಯಂ ಗತೋ ಮೇರುಃ ಕರ್ಣಿಕಾಕಾರಸಂಸ್ಥಿತಃ ॥ ೩೪ ॥

---

೩೧. ದ್ವಿಜೋತ್ತಮರೇ! ಹಾಗೆಯೇ ಅಲಕನಂದಾ ನದಿಯು ಭಾರತ ಭೂಮಿಯ ದಕ್ಷಿಣದಿಕ್ಕಿನಲ್ಲಿ ಹರಿದು ಏಳಾಗಿ ಕವಲೊಡೆದು ಮಹಾ ಸಮುದ್ರವನ್ನು ಸೇರುವುದು.

೩೨. ಸುಚಕ್ಷು ಎಂಬ ನದಿಯು ಪಶ್ಚಿಮದಿಕ್ಕಿನ ಸಮಸ್ತ ಪರ್ವತಶ್ರೇಣಿಯನ್ನು ದಾಟಿ ಪಶ್ಚಿಮಭಾಗದ ಕೇತುಮಾಲ ಎಂಬ ವರ್ಷಖಂಡದ ಮೂಲಕ ಸಮುದ್ರಕ್ಕೆ ಸೇರುತ್ತದೆ.

೩೩. ಮಹರ್ಷಿಗಳೇ! ಭದ್ರಾ ನದಿಯು ಉತ್ತರದಿಕ್ಕಿನ ಪರ್ವತಗಳ ಶ್ರೇಣಿಯನ್ನೂ, ಉತ್ತರ ಕುರುಕ್ಷೇತ್ರವನ್ನೂ ದಾಟಿ ಕ್ರಮವಾಗಿ ಉತ್ತರ ಸಮುದ್ರಕ್ಕೆ ಹೋಗಿ ಸೇರುವುದು.

೩೪. ನೀಲ ನಿಷಧ ಎಂಬ ಪರ್ವತಗಳ ಅವಧಿಯವರೆಗೆ ಮಾಲ್ಯವಾನ್, ಗಂಧಮಾದನ ಎಂಬ ಪರ್ವತಗಳು ಸ್ಥಿತಿಯನ್ನು ಹೊಂದಿವೆ. ಅವುಗಳ ಮಧ್ಯಭಾಗವನು ವ್ಯಾಪಿಸಿದ ಮೇರುಪರ್ವತವು ಕರ್ಣಿಕಾಕಾರದಲ್ಲಿ ಇರುವುದು.

ಭಾರತಾಃ ಕೇತುಮಾಲಾಶ್ಚ ಭದ್ರಾಶ್ವಾಃ ಕುರವಸ್ತಥಾ ।
ಪತ್ರಾಣಿ ಲೋಕಪದ್ಮಸ್ಯ ಮರ್ಯಾದಾಶೈಲಬಾಹ್ಯತಃ ॥ ೩೫ ॥

ಜಠರೋ ದೇವಕೂಟಶ್ಚ ಮರ್ಯಾದಾಪರ್ವತಾವುಭೌ ।
ದಕ್ಷಿಣೋತ್ತರಮಾಯಾತಾವಾನೀಲನಿಷಧಾಯತೌ ॥ ೩೬ ॥

ಗಂಧಮಾದನಕೈಲಾಸೌ ಪೂರ್ವಪಶ್ಚಾಯತಾವುಭೌ ।
ಅಶೀತಿಯೋಜನಾಯಾಮಾವರ್ಣವಾಂತರ್ವ್ಯವಸ್ಥಿತೌ ॥ ೩೭ ॥

ನಿಷಧಃ ಪಾರಿಯಾತ್ರಶ್ಚ ಮರ್ಯಾದಾಪರ್ವತಾವಿಮೌ ।
ಮೇರೋಃ ಪಶ್ಚಿಮದಿಗ್ಭಾಗೇ ಯಥಾಪೂರ್ವಂ ವ್ಯವಸ್ಥಿತೌ ॥ ೩೮ ॥

---

೩೫. ಲೋಕಗಳೆಂಬ ಪದ್ಮಕ್ಕೆ ಸೀಮಾ ಪರ್ವತಗಳ ಹೊರಭಾಗದಲ್ಲಿರುವ ಭಾರತ, ಕೇತುಮಾಲ, ಭದ್ರಾಶ್ವ ಮತ್ತು ಕುರು ಎಂಬ ವರ್ಷ ಪ್ರಾಂತಗಳು ದಳಗಳಂತೆ ಇವೆ.

೩೬. ಅದರ ಜಠರದಲ್ಲಿ ದೇವಕೂಟ ಗಿರಿಯು ಇರುವುದು. ದಕ್ಷಿಣ ಮತ್ತು ಉತ್ತರದ ಎರಡು ವರ್ಷ ಸೀಮಾ ಪರ್ವತಗಳು ನೀಲ, ನಿಷಧ ಪರ್ವತಗಳವರೆಗೆ ವಿಸ್ತಾರವಾಗಿವೆ.

೩೭. ಪೂರ್ವ ಮತ್ತು ಪಶ್ಚಿಮಗಳಲ್ಲಿ ವಿಸ್ತಾರವಾಗಿರುವ ಗಂಧಮಾದನ-ಕೈಲಾಸ ಪರ್ವತಗಳು ಎಂಭತ್ತು ಯೋಜನ ದೀರ್ಘಪರಿಮಾಣ ಉಳ್ಳವುಗಳಾಗಿ ಸಮುದ್ರ ಮಧ್ಯದಲ್ಲಿ ಸ್ಥಿತಿಯನ್ನು ಹೊಂದಿವೆ.

೩೮. ನಿಷಧ ಮತ್ತು ಪಾರಿಯಾತ್ರ ಎಂಬೆರಡು ಸೀಮಾಪರ್ವತಗಳು ಮೇರು ಮಹಾಪರ್ವತದ ಪಶ್ಚಿಮ ದಿಗ್ಭಾಗದಲ್ಲಿ ಮೊದಲಿನಂತೆ ವ್ಯವಸ್ಥಿತಗಳಾಗಿವೆ.

ತ್ರಿಶೃಂಗೋ ಜಾರುಧಿಸ್ತದ್ವದುತ್ತರೇ ವರ್ಷಪರ್ವತೌ ।
ತಾವದಾಯಾಮವಿಸ್ತಾರಾವರ್ಣವಾಂತರ್ವ್ಯವಸ್ಥಿತೌ ॥ ೩೯ ॥

ಮರ್ಯಾದಾಪರ್ವತಾಃ ಪ್ರೋಕ್ತಾ ಅಷ್ಟಾವಿಹ ಮಯಾ ದ್ವಿಜಾಃ ।
ಜಠರಾದ್ಯಾಃ ಸ್ಥಿತಾ ಮೇರೋಶ್ಚತುರ್ದಿಕ್ಷು ಮಹರ್ಷಯಃ ॥ ೪೦ ॥

ಇತಿ ಶ್ರೀ ಕೂರ್ಮಪುರಾಣೇ ಷಟ್ಚತ್ವಾರಿಂಶತ್ತಮೋಽಧ್ಯಾಯಃ.

---

೩೯. ಹಾಗೆ ಉತ್ತರ ದಿಕ್ಕಿನಲ್ಲಿ ತ್ರಿಶೃಂಗ, ಜಾರುಧಿ ಎಂಬ ಎರಡು ವರ್ಷ ಪರ್ವತಗಳು ಹಿಂದಿನಂತೆ ದೀರ್ಘತ್ವ-ವಿಸ್ತಾರಗಳಿಂದ ಕೂಡಿದ ಸಮುದ್ರ ಮಧ್ಯದಲ್ಲಿ ಇರುತ್ತವೆ.

೪೦. ಮಹರ್ಷಿಗಳೆ ! ದ್ವಿಜರೇ ! ಈರೀತಿಯಾಗಿ ನನ್ನಿಂದ ಎಂಟು ಮರ್ಯಾದಾ(ಗಡಿ) ಪರ್ವತಗಳು ಹೇಳಲ್ಪಟ್ಟಿವೆ. ಜಠರ ಮುಂತಾದ ಪರ್ವತಗಳು ಮೇರುಗಿರಿಯ ನಾಲ್ಕು ದಿಕ್ಕುಗಳಲ್ಲಿ ಇರುವುವು.

( ಕೂರ್ಮಪುರಾಣದಲ್ಲಿ ನಲವತ್ತಾರನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ



## ಸಪ್ತಚತ್ವಾರಿಂಶತ್ತಮೋಽಧ್ಯಾಯಃ.

ಸೂತ ಉವಾಚ :—

**ಕೇತುಮಾಲೇ ನರಾಃ ಕಾಕಾಃ ಸರ್ವೇ ಪನಸಭೋಜನಾಃ ।**
**ಸ್ತ್ರಿಯಶ್ಚೋತ್ಪಲಪತ್ರಾಭಾಸ್ತೇ ಜೀವಂತಿ ವರ್ಷಾಯುತಮ್ ॥ ೧ ॥**

**ಭದ್ರಾಶ್ವೇ ಪುರುಷಾಃ ಶುಕ್ಲಾಃ ಸ್ತ್ರಿಯಶ್ಚಂದ್ರಾಂಶುಸನ್ನಿಭಾಃ ।**
**ದಶವರ್ಷಸಹಸ್ರಾಣಿ ಜೀವಂತೇ ಚಾನ್ನಭೋಜನಾಃ ॥ ೨ ॥**

---

## ನಲವತ್ತೇಳನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು:—ಕೇತುಮಾಲವರ್ಷದಲ್ಲಿ ಕೃಷ್ಣ ವರ್ಣದ ಪುರುಷರೂ ಕನ್ನೈದಿಲೆಯ ದಳದಂತೆ ಕಾಂತಿಯುಳ್ಳ ಸ್ತ್ರೀಯರೂ ಹಲಸಿನ ಹಣ್ಣಿನ ಆಹಾರವುಳ್ಳವರಾಗಿ ಅಯುತವರ್ಷಗಳವರೆಗೆ ಜೀವಿಸುತ್ತಿರುವರು.

೨. ಭದ್ರಾಶ್ವ ವರ್ಷದಲ್ಲಿ ಶುಕ್ಲವರ್ಣದ ಪುರುಷರೂ, ಚಂದ್ರನ ಕಿರಣಗಳಿಗೆ ಸಮಾನರಾದ ಸ್ತ್ರೀಯರೂ ಅನ್ನವನ್ನು ಭುಂಜಿಸುತ್ತಾ ಹತ್ತು ಸಹಸ್ರವರ್ಷಗಳವರೆಗೆ ಜೀವಿಸುವರು.

ರಮ್ಯಕೇ ಪುರುಷಾ ನಾರ್ಯೋ ರಮಂತಿ ರಜತಪ್ರಭಾಃ ।
ದಶವರ್ಷಸಹಸ್ರಾಣಿ ಶತಾನಿ ದಶ ಪಂಚ ಚ ॥ ೩ ॥

ಜೀವಂತಿ ಚೈವ ಸತ್ತ್ವಸ್ಥಾ ನ್ಯಗ್ರೋಧಫಲಭೋಜನಾಃ ।
ಹಿರಣ್ಮಯೇ ಹಿರಣ್ಯಾಭಾಃ ಸರ್ವೇ ಶ್ರೀಫಲಭೋಜನಾಃ ॥ ೪ ॥

ಏಕಾದಶಸಹಸ್ರಾಣಿ ಶತಾನಿ ದಶ ಪಂಚ ಚ ।
ಜೀವಂತಿ ಪುರುಷಾ ನಾರ್ಯೋ ದೇವಲೋಕಸ್ಥಿತಾ ಇವ ॥ ೫ ॥

ತ್ರಯೋದಶ ಸಹಸ್ರಾಣಿ ಶತಾನಿ ದಶ ಪಂಚ ಚ ।
ಜೀವಂತಿ ಕುರುವರ್ಷೇ ತು ಶ್ಯಾಮಾಂಗಾಃ ಕ್ಷೀರಭೋಜನಾಃ ॥ ೬ ॥

ಸರ್ವೇ ಮಿಥುನಜಾತಾಶ್ಚ ನಿತ್ಯಂ ಸುಖನಿಷೇವಿತಾಃ ।
ಚಂದ್ರದ್ವೀಪೇ ಮಹಾದೇವಂ ಯಜಂತಿ ಸತತಂ ಶಿವಮ್ ॥ ೭ ॥

---

೩. ಹಾಗೆ ರಮ್ಯಕ ವರ್ಷದಲ್ಲಿ ಬೆಳ್ಳಿಯಂತೆ ಬೆಳಗಿರುವ ಕಾಂತಿಯುಳ್ಳ ಪುರುಷರು ಮತ್ತು ಸ್ತ್ರೀಯರು ಹದಿನಾರುಸಹಸ್ರ ವರ್ಷಗಳವರೆಗೆ ರಮಿಸುವರು.

೪. ಮತ್ತು ಅವರು ಆಲದ ಫಲಗಳನ್ನು ಭುಂಜಿಸುತ್ತಾ ಸತ್ತ್ವಗುಣಪ್ರಾಯರಾಗಿ ಜೀವಿಸುವರು. ಹಿರಣ್ಮಯ ವರ್ಷದಲ್ಲಿ ಎಲ್ಲರೂ ಸುವರ್ಣದಂತೆ ಕಾಂತಿಯುಳ್ಳವರೂ, ಶ್ರೀಫಲವನ್ನು ಭುಂಜಿಸುವವರೂ ಆಗಿರುವರು.

೫. ದೇವಲೋಕದಲ್ಲಿ ವಾಸಮಾಡುವವರಂತೆ ಅಲ್ಲಿರುವ ಸ್ತ್ರೀ ಪುರುಷರು ಹದಿನಾರು ಸಹಸ್ರವರ್ಷಕಾಲ ದೀರ್ಘಾಯುಗಳಾಗಿ ಜೀವಿಸುವರು.

೬. ಕುರುವರ್ಷದಲ್ಲಿ 'ವಾಸಮಾಡುವವರೆಲ್ಲರೂ ಕಪ್ಪಾದ ದೇಹವುಳ್ಳವರೂ ಕ್ಷೀರಾಹಾರಿಗಳಾಗಿ ಹದಿನೆಂಟು ಸಹಸ್ರವರ್ಷಗಳವರೆಗೆ ಜೀವಿಸುವರು.

೭. ಇವರೆಲ್ಲರೂ ಸ್ತ್ರೀ ಪುರುಷ ಮಿಥುನ ವ್ಯಾಪಾರದಿಂದ ಹುಟ್ಟಿದವರೂ, ಸುಖಸೇವಿಗಳೂ ಆಗಿ ಚಂದ್ರದ್ವೀಪದಲ್ಲಿ ದೇವೋತ್ತಮನಾದ ಬ್ರಹ್ಮನನ್ನು ಸಂತತವಾಗಿ ಪೂಜಿಸುತ್ತಿರುವರು.

ತಥಾ ಕಿಂಪುರುಷೇ ವಿಪ್ರಾ ಮಾನವಾ ಹೇಮಸನ್ನಿಭಾಃ ।
ದಶವರ್ಷಸಹಸ್ರಾಣಿ ಜೀವಂತಿ ಪ್ಲಕ್ಷಭೋಜನಾಃ ॥ ೮ ॥

ಯಜಂತಿ ಸತತಂ ದೇವಂ ಚತುಃಶೀರ್ಷಂ ಚತುರ್ಭುಜಮ್ ।
ಧ್ಯಾನೇ ಮನಃ ಸಮಾಧಾಯ ಸಾದರಂ ಭಕ್ತಿಸಂಯುತಾಃ ॥ ೯ ॥

ತಥಾ ಚ ಹರಿವರ್ಷೇ ತು ಮಹಾರಜತಸನ್ನಿಭಾಃ ।
ದಶವರ್ಷಸಹಸ್ರಾಣಿ ಜೀವಂತೀಕ್ಷುರಸಾಶಿನಃ ॥ ೧೦ ॥

ತತ್ರ ನಾರಾಯಣಂ ದೇವಂ ವಿಶ್ವಯೋನಿಂ ಸನಾತನಮ್ ।
ಉಪಾಸತೇ ಸದಾ ವಿಷ್ಣುಂ ಮಾನವಾ ವಿಷ್ಣುಭಾವಿತಾಃ ॥ ೧೧ ॥

---

೮. ವಿಪ್ರರೇ! ಹಾಗೆ ಕಿಂಪುರುಷ ವರ್ಷದಲ್ಲಿ ಸುವರ್ಣದಂತೆ ಕಾಂತಿಯುಳ್ಳ ಮಾನವರು ಪ್ಲಕ್ಷಫಲಗಳನ್ನು ಭುಂಜಿಸುತ್ತಾ ಹತ್ತು ಸಹಸ್ರವರ್ಷಗಳವರೆಗೆ ದೀರ್ಘಾಯುಗಳಾಗಿ ಜೀವಿಸುತ್ತಾರೆ.

೯. ಅಲ್ಲಿ ಧ್ಯಾನಯೋಗದಲ್ಲಿ ಮನಸ್ಸನ್ನು ಇಟ್ಟು ಭಕ್ತಿ-ಆದರಗಳಿಂದ ಕೂಡಿದವರಾಗಿ ನಾಲ್ಕು ಶಿರ, ನಾಲ್ಕು ಭುಜಗಳಿಂದ ಕೂಡಿದ ಪರಮಾತ್ಮನನ್ನು ಸಂತತವಾಗಿ ಪೂಜಿಸುತ್ತಾರೆ.

೧೦. ಹಾಗೆ ಹರಿವರ್ಷದಲ್ಲಿ ಮಹಾರಜತದಂತೆ ಕಾಂತಿಯುಳ್ಳ ಸಮಸ್ತ ಮಾನವರು ಇಕ್ಷುರಸದ ಭೋಜನದಿಂದ ಹತ್ತು ಸಹಸ್ರ ವರ್ಷಗಳಕಾಲ ಜೀವಿಸುತ್ತಾರೆ.

೧೧. ಅಲ್ಲಿರುವ ಮಾನವರು ವಿಷ್ಣುವಿನಲ್ಲಿ ಭಕ್ತಿಯುಳ್ಳವರಾಗಿ ವಿಶ್ವಕಾರಣನೂ, ಸನಾತನನೂ, ವ್ಯಾಪಕನೂ ಆದ ಶ್ರೀಮನ್ನಾರಾಯಣ ಸ್ವಾಮಿಯನ್ನು ಯಾವಾಗಲೂ ಉಪಾಸನಮಾಡುತ್ತಾರೆ.

ತತ್ರ ಚಂದ್ರಪ್ರಭಂ ಶುಭ್ರಂ ಶುದ್ಧಸ್ಫಟಿಕಸನ್ನಿಭಮ್ ।
ವಿಮಾನಂ ವಾಸುದೇವಸ್ಯ ಪಾರಿಜಾತವನಾಶ್ರಿತಮ್ ॥ ೧೨ ॥

ಚತುರ್ದ್ವಾರಮನೌಪಮ್ಯಂ ಚತುಸ್ತೋರಣಸಂಯುತಮ್ ।
ಪ್ರಾಕಾರೈರ್ದಶಭಿರ್ಯುಕ್ತಂ ದುರಾಧರ್ಷಂ ಸುದುರ್ಗಮಮ್ ॥ ೧೩ ॥

ಸ್ಫಾಟಿಕೈರ್ಮಂಟಪೈರ್ಯುಕ್ತಂ ದೇವರಾಜಗೃಹೋಪಮಮ್ ।
ಸುವರ್ಣಸ್ತಂಭಸಾಹಸ್ರೈಃ ಸರ್ವತಃ ಸಮಲಂಕೃತಮ್ ॥ ೧೪ ॥

ಹೇಮಸೋಪಾನಸಂಯುಕ್ತಂ ನಾನಾರತ್ನೋಪಶೋಭಿತಮ್ ।
ದಿವ್ಯಸಿಹ್ಮಾಸನೋಪೇತಂ ಸರ್ವಶೋಭಾಸಮನ್ವಿತಮ್ ॥ ೧೫ ॥

---

೧೨. ಅಲ್ಲಿ ಚಂದ್ರನಂತೆ ಕಾಂತಿಯುಳ್ಳದ್ದೂ, ಶುಭ್ರವೂ, ನಿರ್ಮಲವಾದ ಸ್ಫಟಿಕ ಮಣಿಗೆ ಸಮಾನವಾದುದೂ ಆದ ಶ್ರೀಮನ್ನಾರಾಯಣನ ವಿಮಾನವು ಪಾರಿಜಾತ ವೃಕ್ಷಗಳ ವನವನ್ನು ಆಶ್ರಯಿಸಿಕೊಂಡಿದೆ.

೧೩. ಆ ವಿಮಾನವು ನಾಲ್ಕು ದ್ವಾರಗಳಿಂದಲೂ, ನಾಲ್ಕು ತೋರಣಗಳಿಂದಲೂ, ಹತ್ತು ಪ್ರಾಕಾರಗಳಿಂದಲೂ ಕೂಡಿಕೊಂಡು ಮತ್ತೊಬ್ಬರಿಂದ ಅಪಹರಿಸಲಶಕ್ಯವೂ ಹೋಗಲು ಅಶಕ್ಯವೂ ಮತ್ತು ನಿರುಪಮವೂ ಆಗಿದೆ.

೧೪. ಮತ್ತು ಸ್ಫಟಿಕಮಣಿಗಳ ಮಂಟಪದಿಂದ ಪ್ರಕಾಶಿಸುವುದೂ, ದೇವೇಂದ್ರನ ಮಂದಿರಕ್ಕೆ ಸಮಾನವಾದುದೂ ಮತ್ತು ಸುತ್ತಲೂ ಸಹಸ್ರ ಸುವರ್ಣ ಸ್ತಂಭಗಳಿಂದ ಅಲಂಕರಿಸಲ್ಪಟ್ಟಿರುವುದೂ ಆಗಿದೆ.

೧೫. ಹಾಗೂ ಸುವರ್ಣದ ಸೋಪಾನಗಳಿಂದ ಕೂಡಿರುವುದೂ, ಅನೇಕವಿಧ ರತ್ನಗಳಿಂದ ಪ್ರಕಾಶಿಸುವುದೂ, ದಿವ್ಯವಾದ ಸಿಹ್ಮಾಸನದಿಂದ ಕೂಡಿರುವುದೂ ಮತ್ತು ಸಮಸ್ತ ಶೋಭೆಗಳಿಂದ ಸಂಪೂರ್ಣವೂ ಆಗಿದೆ.

ಸರೋಭಿಃ ಸ್ವಾದುಪಾನೀಯೈರ್ನದೀಭಿಶ್ಚೋಪಶೋಭಿತಮ್ ।
ನಾರಾಯಣಪರೈಃ ಶುದ್ಧೈರ್ವೇದಾಧ್ಯಯನತತ್ಪರೈಃ ॥ ೧೬ ॥

ಯೋಗಿಭಿಶ್ಚ ಸಮಾಕೀರ್ಣಂ ಧ್ಯಾಯದ್ಭಿಃ ಪುರುಷಂ ಹರಿಮ್ ।
ಸ್ತುವದ್ಭಿಃ ಸತತಂ ಮಂತ್ರೈರ್ನಮಸ್ಯದ್ಭಿಶ್ಚ ಮಾಧವಮ್ ॥ ೧೭ ॥

ತತ್ರ ದೇವಾಧಿದೇವಸ್ಯ ವಿಷ್ಣೋರಮಿತತೇಜಸಃ ।
ರಾಜಾನಃ ಸರ್ವಕಾಲಂ ತು ಮಹಿಮಾನಂ ಪ್ರಕುರ್ವತೇ ॥ ೧೮ ॥

ಗಾಯಂತಿ ಚೈವ ನೃತ್ಯಂತಿ ವಿಲಾಸಿನ್ಯೋ ಮನೋಹರಾಃ ।
ಸ್ತ್ರಿಯೋ ಯೌವನಶಾಲಿನ್ಯಃ ಸದಾ ಮಂಡನತತ್ಪರಾಃ ॥ ೧೯ ॥

---

೧೬. ಮಧುರವಾದ ಪಾನೀಯವುಳ್ಳ ಸರೋವರಗಳಿಂದಲೂ, ನದಿಗಳಿಂದಲೂ, ಶೋಭಿತವಾಗಿಯೂ ಪವಿತ್ರರೂ, ವೇದಾಧ್ಯಯನದಲ್ಲಿ ತತ್ಪರರೂ ಆದ ಮಹಾವಿಷ್ಣು ಭಕ್ತರಿಂದ ಸೇವಿತವಾಗಿಯೂ ಇರುವುದು.

೧೭. ಆ ಸ್ಥಾನವು ವಾಸುದೇವನನ್ನು ನಮಸ್ಕರಿಸುತ್ತಿರುವವರಿಂದಲೂ ಸಂತತವಾಗಿ ಮಂತ್ರಪಾಠದಿಂದ ಸ್ತುತಿಸುತ್ತಿರುವವರಿಂದಲೂ ಪರಮಪುರುಷನನ್ನು ಧ್ಯಾನಿಸುತ್ತಿರುವವರಿಂದಲೂ ಮತ್ತು ಯೋಗಾಭ್ಯಾಸ ನಿರತರಿಂದಲೂ ಸಂಪೂರ್ಣವಾಗಿದೆ.

೧೮. ಅಲ್ಲಿ ದೇವಾಧಿದೇವನೂ, ಗಣನಾತೀತವಾದ ಮಹಿಮೆಯುಳ್ಳವನೂ ಆದ ವಿಷ್ಣುವಿನ ಮಹಾಮಹಿಮೆಯನ್ನು ರಾಜರು ಸರ್ವಕಾಲಗಳಲ್ಲಿಯೂ ಸ್ತುತಿಸುತ್ತಿರುವರು.

೧೯. ಮತ್ತು ತಾರುಣ್ಯದಿಂದ ಪ್ರಕಾಶಿಸುವವರೂ, ಅಲಂಕಾರಮಾಡಿಕೊಳ್ಳುವುದರಲ್ಲಿ ತತ್ಪರರೂ, ರಮಣೀಯರೂ ಆದ ವಿಲಾಸಿನೀ ಸ್ತ್ರೀಯರು ಗಾನಪೂರ್ವಕವಾಗಿ ನರ್ತನಮಾಡುತ್ತಿರುವರು.

ಇಲಾವೃತೇ ಪದ್ಮವರ್ಣಾ ಜಂಬೂರಸಫಲಾಶಿನಃ ।
ತ್ರಯೋದಶಸಹಸ್ರಾಣಿ ವರ್ಷಾಣಾಂ ಚ ಸ್ಥಿರಾಯುಷಃ ॥ ೨೦ ॥

ಭಾರತೇಷು ಸ್ತ್ರಿಯಃ ಪುಂಸೋ ನಾನಾವರ್ಣಾಃ ಪ್ರಕೀರ್ತಿತಾಃ ।
ನಾನಾದೇವಾರ್ಚನೇ ಯುಕ್ತಾ ನಾನಾಕರ್ಮಾಣಿ ಕುರ್ವತೇ ॥ ೨೧ ॥

ಪರಮಾಯುಃ ಸ್ಮೃತಂ ತೇಷಾಂ ಶತಂ ವರ್ಷಾಣಿ ಸುವ್ರತಾಃ ।
ನವಯೋಜನಸಾಹಸ್ರಂ ವರ್ಷಮೇತತ್ಪ್ರಕೀರ್ತಿತಮ್ ॥ ೨೨ ॥

ಕರ್ಮಭೂಮಿರಿಯಂ ವಿಪ್ರಾ ನರಾಣಾಮಧಿಕಾರಿಣಾಮ್ ।
ಮಹೇಂದ್ರೋ ಮಲಯಃ ಸಹ್ಯಃ ಶಕ್ತಿಮಾನ್ಯಕ್ಷಪರ್ವತಃ ॥ ೨೩ ॥

---

೨೦. ಇಲಾವೃತವರ್ಷದಲ್ಲಿ ಪದ್ಮದಂತೆ ಕಾಂತಿಯುಳ್ಳವರೂ, ಜಂಬೂಫಲದ ರಸವನ್ನು ಭುಂಜಿಸುವವರೂ ಆದ ಮಾನವರು ಹದಿಮೂರು ಸಹಸ್ರ ವರ್ಷ ದೀರ್ಘಾಯುಗಳಾಗಿರುವರು.

೨೧. ಭಾರತಭೂಮಿಯಲ್ಲಿ ಸ್ತ್ರೀಯರು ಮತ್ತು ಪುರುಷರು ಅನೇಕ ವರ್ಣವುಳ್ಳವರಾಗಿ ಕೀರ್ತಿಸಲ್ಪಟ್ಟಿರುವರು. ಅವರು ಹಲವಾರು ದೇವತೆಗಳ ಪೂಜೆಯಲ್ಲಿ ನಿರತರಾಗಿ ಅನೇಕ ಪುಣ್ಯಕರ್ಮಗಳನ್ನು ಮಾಡುತ್ತಾರೆ.

೨೨. ವ್ರತ ನಿಯಮವಂತರೇ! ಅವರಿಗೆ ಒಂದುನೂರು ವರ್ಷಗಳು ಪೂರ್ಣಾಯಸ್ಸು ಎಂದು ಸ್ಮರಿಸಲ್ಪಟ್ಟಿದೆ. ಈ ಭರತವರ್ಷವು ಒಂಭತ್ತು ಸಹಸ ಯೋಜನ ವಿಸ್ತಾರವಾಗಿ ಕೀರ್ತಿಸಲ್ಪಟ್ಟಿದೆ.

೨೩. ವಿಪ್ರರೇ! ಆಯಾಯ ಧರ್ಮದಲ್ಲಿ ಅಧಿಕಾರಿಗಳಾದ ಮಾನವರಿಗೆ ಇದು ಕರ್ಮಭೂಮಿಯಾಗಿರುವುದು. ಇಲ್ಲಿರುವ ಸಪ್ತ ಕುಲಪರ್ವತಗಳಲ್ಲಿ ಮಹೇಂದ್ರ, ಮಲಯ, ಸಹ್ಯ, ಶಕ್ತಿಮಾನ್ ಮತ್ತು ಋಕ್ಷಪರ್ವತ ಎಂಬ ಪರ್ವತಗಳು ಸೇರಿವೆ.

ವಿಂಧ್ಯಶ್ಚ ಪಾರಿಯಾತ್ರಶ್ಚ ಸಪ್ತಾತ್ರ ಕುಲಪರ್ವತಾಃ ।
ಇಂದ್ರದ್ವೀಪಃ ಕಸೇರುಕ್ಮಾನ್ ತಾಮ್ರಪರ್ಣೋ ಗಭಸ್ತಿಮಾನ್ ॥೨೪॥

ನಾಗದ್ವೀಪಸ್ತಥಾ ಸೌಮ್ಯೋ ಗಂಧರ್ವಸ್ತ್ವಥ ವಾರುಣಃ ।
ಅಯಂ ತು ನವಮಸ್ತೇಷಾಂ ದ್ವೀಪಃ ಸಾಗರಸಂಸ್ಥಿತಃ ॥ ೨೫ ॥

ಯೋಜನಾನಾಂ ಸಹಸ್ರಂ ತು ದ್ವೀಪೋಽಯಂ ದಕ್ಷಿಣೋತ್ತರಃ ।
ಪೂರ್ವೇ ಕಿರಾತಾಸ್ತಸ್ಯಾಂತೇ ಪಶ್ಚಿಮೇ ಯವನಾಸ್ತಥಾ ॥ ೨೬ ॥

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಸ್ತಥೈವ ಚ ।
ಇಜ್ಯಾಯುದ್ಧವಣಿಜ್ಯಾಭಿರ್ವರ್ತಯಂತ್ಯತ್ರ ಮಾನವಾಃ ॥ ೨೭ ॥

---

೨೪. ಮತ್ತು ವಿಂಧ್ಯ, ಪಾರಿಯಾತ್ರ ಎಂಬ ಪರ್ವತಗಳು ಕುಲಪರ್ವತಗಳೆಂದು ಪ್ರಸಿದ್ಧವಾಗಿವೆ. ಇಲ್ಲಿ ಇರುವ ನವದ್ವೀಪಗಳಲ್ಲಿ ಇಂದ್ರದ್ವೀಪ, ಕಸೇರುಕ್ಮಾ, ತಾಮ್ರಪರ್ಣ ಮತ್ತು ಗಭಸ್ತಿಮಾ ಎಂಬ ದ್ವೀಪಗಳು ಸೇರಿಕೊಂಡಿವೆ.

೨೫. ಹಾಗೂ ನಾಗದ್ವೀಪ, ಸೌಮ್ಯ, ಗಂಧರ್ವ, ವಾರುಣ ಎಂಬ ದ್ವೀಪಗಳು ಸೇರಿ ಸಮುದ್ರದಲ್ಲಿರುವ ಈ ಜಂಬೂ ದ್ವೀಪವು ಒಂಭತ್ತನೆಯ ದ್ವೀಪವಾಗಿ ಗಣಿಸಲ್ಪಟ್ಟಿದೆ.

೨೬. ಇದು ಸಹಸ್ರ ಯೋಜನ ಪ್ರಮಾಣದಲ್ಲಿ ದಕ್ಷಿಣೋತ್ತರ ವಿಸ್ತಾರವುಳ್ಳದ್ದಾಗಿದೆ ಇದರ ಪೂರ್ವಭಾಗದಲ್ಲಿ ಕಿರಾತರು, ಅದರ ಕಡೆಯ ಪಶ್ಚಿಮಭಾಗದಲ್ಲಿ ಯವನರು ವಾಸಮಾಡುವರು.

೨೭. ಇಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂಬ ಚಾತುರ್ವರ್ಣ್ಯ ಪ್ರಜೆಗಳು ಯಾಗ, ಯುದ್ಧ, ವಾಣಿಜ್ಯ ಮತ್ತು ಸೇವೆ ಎಂಬ ವೃತ್ತಿಗಳಿಂದ ಜೀವಿಸುತ್ತಿರುವರು.

ಸ್ರವಂತೇ ಪಾವನಾ ನದ್ಯಃ ಪರ್ವತೇಭ್ಯೋ ವಿನಿಃಸೃತಾಃ ।
ಶತದ್ರುಶ್ಚಂದ್ರಭಾಗಾ ಚ ಸರಯೂರ್ಯಮುನಾ ತಥಾ　　॥ ೨೮ ॥

ಇರಾವತೀ ವಿತಸ್ತಾ ಚ ವಿಪಾಶಾ ದೇವಿಕಾ ಕುಹೂಃ ।
ಗೋಮತೀ ಧೂತಪಾಪಾ ಚ ಬಾಹುದಾ ಚ ದೃಷದ್ವತೀ　　॥ ೨೯ ॥

ಕೌಶಿಕೀ ಲೋಹಿನೀ ಚೈವ ಹಿಮವತ್ಪಾದನಿಸ್ಸೃತಾಃ ।
ವೇದಸ್ಮೃತಿರ್ವೇದವತೀ ವ್ರತಘ್ನೀ ತ್ರಿದಿವಾ ತಥಾ　　॥ ೩೦ ॥

ವರ್ಣಾಶಾ ಚಂದಶಾ ಚೈವ ಸಚರ್ಮಣ್ವತೀ ಸುರಾ ।
ವಿದಿಶಾ ವೇತ್ರವತ್ಯಾಪಿ ಪಾರಿಯಾತ್ರಾಶ್ರಯಾಃ ಸ್ಮೃತಾಃ　　॥ ೩೧ ॥

---

೨೮. ಇಲ್ಲಿ ಶತದ್ರು, ಚಂದ್ರಭಾಗಾ, ಸರಯು, ಯಮುನಾ ಮುಂತಾದ ಪವಿತ್ರ ನದಿಗಳು ಪರ್ವತಗಳಿಂದ ಹುಟ್ಟಿ ನಾನಾಮುಖವಾಗಿ ಹರಿಯುತ್ತವೆ.

೨೯. ಹಾಗೂ ಇರಾವತೀ, ವಿತಸ್ತಾ, ವಿಪಾಶಾ, ದೇವಿಕಾ, ಕುಹು, ಗೋಮತೀ, ಧೂತಪಾಪಾ, ಬಾಹುದಾ ಮತ್ತು ದೃಷದ್ವತೀ ಎಂಬ ಪವಿತ್ರ ಮಹಾ ನದಿಗಳು ಪರ್ವತಗಳಲ್ಲಿ ಹುಟ್ಟಿ ಹರಿಯುತ್ತವೆ.

೩೦. ಮತ್ತು ಕೌಶಿಕೀ, ಲೋಹಿನೀ ಎಂಬ ನದಿಗಳು ಹಿಮವತ್ಪರ್ವತದ ಪ್ರಾಂತಪರ್ವತಗಳಿಂದ ಹುಟ್ಟುತ್ತವೆ. ಮತ್ತು ಪಾರಿಯಾತ್ರ ಪರ್ವತದಿಂದ ಹುಟ್ಟುವ ನದಿಗಳಲ್ಲಿ ವೇದಸ್ಮೃತಿ, ವೇದವತೀ, ವ್ರತಘ್ನೀ ಮತ್ತು ತ್ರಿದಿವಾ ಎಂಬ ನದಿಗಳು ಸೇರಿವೆ.

೩೧. ಮತ್ತು ವರ್ಣಾಶಾ, ಚಂದನಾ, ಚರ್ಮಣ್ವತೀ, ಸುರಾ, ವಿದಿಶಾ, ವೇತ್ರವತೀ ಎಂಬ ನದಿಗಳು ಪಾರಿಯಾತ್ರ ಎಂಬ ಪರ್ವತದಲ್ಲಿ ಹುಟ್ಟುವುವೆಂದು ಸ್ಮರಿಸಲ್ಪಟ್ಟಿವೆ.

ನರ್ಮದಾ ಸುರಸಾ ಶೋಣೋ ದಶಾರ್ಣಾ ಚ ಮಹಾನದೀ ।
ಮಂದಾಕಿನೀ ಚಿತ್ರಕೂಟಾ ತಾಮಸೀ ಚ ಪಿಶಾಚಿಕಾ ॥ ೩೨ ॥

ಚಿತ್ರೋತ್ಪಲಾ ವಿಶಾಲಾ ಚ ಮಂಜುಲಾ ವಾಲುವಾಹಿನೀ ।
ಋಕ್ಷವತ್ಪಾದಜಾ ನದ್ಯಃ ಸರ್ವಪಾಪಹರಾ ನೃಣಾಮ್ ॥ ೩೩ ॥

ತಾಪೀ ಪಯೋಷ್ಣೀ ನಿರ್ವಿಂಧ್ಯಾ ಶೀಘ್ರೋದಾ ಚ ಮಹಾನದೀ ।
ವಿನ್ನಾ ವೈತರಣೀ ಚೈವ ಬಲಾಕಾ ಚ ಕುಮುದ್ವತೀ ॥ ೩೪ ॥

ತಥಾ ಚೈವ ಮಹಾಗೌರೀ ದುರ್ಗಾ ಚಾಂತಃಶಿಲಾ ತಥಾ ।
ವಿಂಧ್ಯಪಾದಪ್ರಸೂತಾಸ್ತು ನದ್ಯಃ ಪಾಪಹರಾ ನೃಣಾಮ್ ॥ ೩೫ ॥

---

೩೨. ನರ್ಮದಾ, ಸುರಸಾ, ಶೋಣ, ದಶಾರ್ಣಾ, ಮಂದಾಕಿನೀ, ಚಿತ್ರಕೂಟಾ ತಾಮಸೀ, ಪಿಶಾಚಿಕಾ ಎಂಬ ನದಿಗಳು ಋಕ್ಷವತ್ ಪರ್ವತದ ಪ್ರಾಂತ ಪರ್ವತಗಳಿಂದ ಹುಟ್ಟುವುವೆಂದು ಸ್ಮರಿಸಲ್ಪಟ್ಟಿವೆ.

೩೩. ಚಿತ್ರೋತ್ಪಲಾ, ವಿಶಾಲಾ, ಮಂಜುಲಾ, ವಾಲುವಾಹಿನೀ ಎಂಬ ಮಹಾ ನದಿಗಳು ಋಕ್ಷವತ್ ಪರ್ವತದ ಪಾದದಿಂದ ಹುಟ್ಟಿ ಮನುಷ್ಯರ ಸಮಸ್ತ ಪಾಪಗಳನ್ನು ನಿವಾರಿಸುತ್ತಾ ಹರಿಯುವುವು.

೩೪. ವಿಂಧ್ಯಪರ್ವತದಿಂದ ಹುಟ್ಟಿ ಹರಿಯುವ ಮಹಾನದಿಗಳಲ್ಲಿ ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಶೀಘ್ರೋದ, ವಿನ್ನಾ, ವೈತರಣೀ, ಬಲಾಕಾ ಮತ್ತು ಕುಮುದ್ವತೀ ಎಂಬ ಮಹಾನದಿಗಳು ಸೇರಿಕೊಂಡಿವೆ.

೩೫. ಹಾಗೂ ಮಹಾಗೌರೀ, ದುರ್ಗಾ, ಅಂತಶ್ಶಿಲಾ, ಎಂಬ ಸಮಸ್ತ ಮನುಷ್ಯರ ಪಾಪಗಳನ್ನು ನಿವಾರಿಸುವ ಮಹಾ ನದಿಗಳು ವಿಂಧ್ಯಪರ್ವತದ ಪಾದ ದಿಂದ ಹುಟ್ಟುತ್ತಿವೆ.

ಗೋದಾವರೀ ಭೀಮರಥೀ ಕೃಷ್ಣಾ ವೇಣಾ ಚ ವಶ್ಯತಾ ।
ತುಂಗಭದ್ರಾ ಸುಪ್ರಯೋಗಾ ಕಾವೇರೀ ಚ ದ್ವಿಜೋತ್ತಮಾಃ ॥ ೩೬ ॥

ದಕ್ಷಿಣಾಪಥನದ್ಯಸ್ತು ಸಹ್ಯಪಾದಾದ್ವಿನಿಃಸೃತಾಃ ।
ಋತುಮಾಲಾ ತಾಮ್ರಪರ್ಣೀ ಪುಣ್ಯವತ್ಯುತ್ಪಲಾವತೀ ॥ ೩೭ ॥

ಮಲಯಾನ್ನಿಃಸೃತಾ ನದ್ಯಃ ಸರ್ವಾಃ ಶೀತಜಲಾಃ ಸ್ಮೃತಾಃ ।
ಋಷಿಕುಲ್ಯಾ ತ್ರಿಸಾಮಾ ಚ ಗಂಧಮಾದನಗಾಮಿನೀ ॥ ೩೮ ॥

ಕ್ಷಿಪ್ರಾ ಪಲಾಶಿನೀ ಚೈವ ಋಷೀಕಾ ವಂಶಧಾರಿಣೀ ।
ಶುಕ್ತಿಮತ್ಪಾದಸಂಜಾತಾಃ ಸರ್ವಪಾಪಹರಾ ನೃಣಾಮ್ ॥ ೩೯ ॥

---

೩೬. ದ್ವಿಜೋತ್ತಮರೇ ! ಗೋದಾವರೀ ಭೀಮರಥೀ, ಕೃಷ್ಣಾ, ವೇಣಾ ವಶ್ಯತಾ, ತುಂಗಭದ್ರಾ, ಸುಪ್ರಯೋಗಾ ಮತ್ತು ಕಾವೇರೀ ಎಂಬ ಮಹಾನದಿಗಳು ಸಹ್ಯಾದ್ರಿಯಲ್ಲಿ ಹುಟ್ಟಿ ದಕ್ಷಿಣಾಪಥದಲ್ಲಿ ಹರಿಯುತ್ತವೆ.

೩೭. ಮತ್ತು ಋತುಮಾಲಾ, ತಾಮ್ರಪರ್ಣೀ, ಪುಣ್ಯವತೀ ಮತ್ತು ಉತ್ಪಲಾವತೀ ಎಂಬ ನದಿಗಳು ಮಲಯ ಪರ್ವತದಿಂದ ಹುಟ್ಟಿ ಹರಿಯುತ್ತವೆ.

೩೮. ಮಲಯಪರ್ವತದಿಂದ ಹುಟ್ಟುವ ಸಮಸ್ತ ನದಿಗಳು ಶೀತವಾದ ನೀರು ಉಳ್ಳವುಗಳೆಂದು ಸ್ಮರಿಸಲ್ಪಟ್ಟಿವೆ. ಋಷಿಕುಲ್ಯಾ, ತ್ರಿಸಾಮಾ ಗಂಧಮಾದನಗಾಮಿನೀ ಎಂಬ ನದಿಗಳು ಶುಕ್ತಿಮತ್ ಪರ್ವತದಲ್ಲಿ ಹುಟ್ಟುವವು.

೩೯. ಮತ್ತು ಕ್ಷಿಪ್ರಾ, ಪಲಾಶಿನಿ, ಋಷೀಕಾ, ವಂಶಧಾರಿಣೀ ಎಂಬ ನಾಮಾಂಕಿತವಾದ ಮಾನವರ ಪಾತಕಗಳನ್ನು ಕಳೆಯುವ ಮಹಾನದಿಗಳು ಶುಕ್ತಿಮತ್ ಪರ್ವತದಲ್ಲಿ ಹುಟ್ಟುತ್ತವೆ.

ಆಸಾಂ ನದ್ಯುಪನದ್ಯಶ್ಚ ಶತಶೋ ದ್ವಿಜಪುಂಗವಾಃ ।
ಸರ್ವಪಾಪಹರಾಃ ಪುಣ್ಯಾಃ ಸ್ನಾನದಾನಾದಿಕರ್ಮಸು ॥ ೪೦ ॥

ತಾಸ್ವಿಮೇ ಕುರುಪಾಂಚಾಲಾ ಮಧ್ಯದೇಶಾದಯೋ ಜನಾಃ ।
ಪೂರ್ವದೇಶಾದಿಕಾಶ್ಚೈವ ಕಾಮರೂಪನಿವಾಸಿನಃ ॥ ೪೧ ॥

ಪುಂಡ್ರಾಃ ಕಲಿಂಗಾ ಮಗಧಾ ದಾಕ್ಷಿಣಾತ್ಯಾಶ್ಚ ಕೃತ್ಸ್ನಶಃ ।
ತಥಾಪರಾಂತಾಃ ಸೌರಾಷ್ಟ್ರಾಃ ಶೂದ್ರಾ ಹೀನಾಸ್ತಥಾರ್ಬುದಾಃ॥ ೪೨ ॥

ಮಾಲಕಾ ಮಲಪಾಶ್ಚೈವ ಪಾರಿಯಾತ್ರನಿವಾಸಿನಃ ।
ಸೌವೀರಾಃ ಸೈಂಧವಾ ಹೂಣಾ ಮಾಲ್ಯಾ ವಾಲ್ಯಾ ನಿವಾಸಿನಃ ॥ ೪೩ ॥

---

೪೦. ದ್ವಿಜಶ್ರೇಷ್ಠರೇ ! ಈ ಮಹಾನದಿಗಳಿಗೆ ಇತರ ನದೀ, ಉಪನದಿಗಳು ನೂರಾರು ಸಂಖ್ಯೆಯಲ್ಲಿ ಸೇರಿಕೊಂಡಿವೆ. ಈ ಸಮಸ್ತ ನದಿಗಳೂ ಸ್ನಾನ, ದಾನ ಮುಂತಾದ ಸತ್ಕರ್ಮಗಳಲ್ಲಿ ಪವಿತ್ರವೂ, ಸರ್ವಪಾಪ ನಿವಾರಕವೂ ಆಗಿವೆ.

೪೧. ಆ ನದಿಗಳ ತೀರದಲ್ಲಿ ಕುರು, ಪಾಂಚಾಲ, ಮಧ್ಯದೇಶ, ಪೂರ್ವದೇಶ ಮತ್ತು ಕಾಮರೂಪ ಮುಂತಾದ ಅನೇಕ ದೇಶಗಳು ಜನರ ವಾಸಕ್ಕೆ ಯೋಗ್ಯಗಳಾಗಿವೆ.

೪೨. ಮತ್ತು ಪುಂಡ್ರ, ಕಳಿಂಗ, ಮಗಧ ಮುಂತಾದ ಸಮಸ್ತ ದೇಶಗಳೂ ದಕ್ಷಿಣದೇಶಗಳೆಂದು ಕರೆಯಲ್ಪಟ್ಟಿವೆ. ಸೌರಾಷ್ಟ್ರ, ಶೂದ್ರ, ಹೀನ, ಅರ್ಬುದ ಎಂಬ ದೇಶಗಳು ಅಪರಾಂತ ದೇಶಗಳೆಂದು ಗಣಿಸಲ್ಪಟ್ಟಿವೆ.

೪೩. ಮಾಲಕ, ಮಲಪ ಮುಂತಾದ ಪಾರಿಯಾತ್ರ ಪರ್ವತ ಸಮೀಪದ ದೇಶಗಳೂ ಸೌವೀರ, ಸೈಂಧವ, ಹೂಣ, ಮಾಲ್ಯ, ಬಾಲ್ಯ ಮುಂತಾದ ದೇಶಗಳೂ ಜನರ ವಸತಿಸ್ಥಾನಗಳಾಗಿವೆ.

ಮಾದ್ರಾ ರಾಮಾಸ್ತಥೈವಾಂಧ್ರಾಃ ಪಾರಸೀಕಾಸ್ತಥೈವ ಚ ।
ಆಸಾಂ ಪಿಬಂತಿ ಸಲಿಲಂ ವಸಂತಿ ಸರಿತಾಂ ಸದಾ ॥ ೪೪ ॥

ಚತ್ವಾರಿ ಭಾರತೇ ವರ್ಷೇ ಯುಗಾನಿ ಕವಯೋಽಬ್ರುವನ್ ।
ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚಾನ್ಯತ್ರ ನ ಕ್ವಚಿತ್ ॥ ೪೫ ॥

ಯಾನಿ ಕಿಂಪುರುಷಾದ್ಯಾನಿ ವರ್ಷಾಣ್ಯಷ್ಟೌ ಮಹರ್ಷಯಃ ।
ನ ತೇಷು ಶೋಕೋ ನಾಯಾಸೋ ನೋದ್ವೇಗಃ ಕ್ಷುದ್ಭಯಂ ನ ಚ ॥

ಸ್ವಸ್ಥಾಃ ಪ್ರಜಾ ನಿರಾತಂಕಾಃ ಸರ್ವದುಃಖವಿವರ್ಜಿತಾಃ ।
ರಮಂತೇ ವಿವಿಧೈರ್ಭಾವೈಃ ಸರ್ವಾಶ್ಚ ಸ್ಥಿರಯೌವನಾಃ ॥ ೪೬೭ ॥

ಇತಿ ಶ್ರೀ ಕೂರ್ಮಪುರಾಣೇ ಸಪ್ತಚತ್ವಾರಿಂಶತ್ತಮೋಽಧ್ಯಾಯಃ.

---

೪೪. ಹಾಗು ಮಾದ್ರ, ರಾಮ, ಆಂಧ್ರ, ಫಾರಸೀಕ ಮುಂತಾದ ಸಮಸ್ತ ದೇಶವಾಸಿಗಳು ಯಾವಾಗಲೂ ಹಿಂದೆ ಹೇಳಿದ ನದಿ, ಉಪನದಿಗಳ ಜಲವನ್ನು ಪಾನ ಮಾಡುತ್ತಾರೆ.

೪೫. ಈ ಭರತ ವರ್ಷದಲ್ಲಿ ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗ ವೆಂದು ನಾಲ್ಕು ಯುಗವಿರುವುದೆಂದು ಪ್ರಾಜ್ಞರು ಹೇಳುತ್ತಾರೆ. ಈ ಯುಗಗಳ ವ್ಯವಸ್ಥೆಯು ಬೇರೊಂದುಕಡೆ ಇರುವುದಿಲ್ಲ.

೪೬. ಮಹರ್ಷಿಗಳೇ! ಹಿಂದೆ ಹೇಳಿದ ಕಿಂಪುರುಷ ಮುಂತಾದ ಎಂಟು ವರ್ಷ ಭೂಮಿಗಳಲ್ಲಿ ದಾನಮಾಡುವ ಪ್ರಜೆಗಳಿಗೆ ಶೋಕ, ಆಯಾಸ, ಉದ್ವೇಗ ಅಥವಾ ಕ್ಷುದ್ಬಾಧೆಗಳು ಉಂಟಾಗುವುದಿಲ್ಲ.

೪೭. ಅಲ್ಲಿನ ಸಮಸ್ತ ಪ್ರಜೆಗಳು ಸ್ವಸ್ಥರೂ, ಆತಂಕಶೂನ್ಯರೂ, ಸಮಸ್ತ ದುಃಖವರ್ಜಿತರೂ ಮತ್ತು ಸ್ಥಿರವಾದ ಯೌವನವುಳ್ಳವರೂ ಆಗಿ ಅನೇಕ ವಿಧವಾದ ರಮ್ಯವಸ್ತುಗಳಿಂದ ರಮಿಸುತ್ತಿರುವರು.

( ಕೂರ್ಮಪುರಾಣದಲ್ಲಿ ನಲವತ್ತೇಳನೆಯ ಅಧ್ಯಾಯವು ಮುಗಿದುದು. )

---

ಶ್ರೀಃ

# ಕೂರ್ಮಪುರಾಣಂ

## ಅಷ್ಟಾಚತ್ವಾರಿಂಶತ್ತಮೋಽಧ್ಯಾಯಃ.

ಸೂತ ಉವಾಚ :—

ಹೇಮಕೂಟಗಿರೇಃ ಶೃಂಗೇ ಮಹಾಕೂಟಂ ಸುಶೋಭನಮ್ ।
ಸ್ಫಾಟಿಕಂ ದೇವದೇವಸ್ಯ ವಿಮಾನಂ ಪರಮೇಷ್ಠಿನಃ ॥ ೧ ॥

ತತ್ರ ದೇವಾಧಿದೇವಸ್ಯ ಭೂತೇಶಸ್ಯ ತ್ರಿಶೂಲಿನಃ ।
ದೇವಾಃ ಸರ್ಷಿಗಣಾಃ ಸಿದ್ಧಾಃ ಪೂಜಾಂ ನಿತ್ಯಂ ಪ್ರಕುರ್ವತೇ ॥ ೨ ॥

---

## ನಲವತ್ತೆಂಟನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :— ಹೇಮಕೂಟಪರ್ವತದ ಶಿಖರದಲ್ಲಿ ದೇವೋತ್ತಮನೂ ಶ್ರೇಷ್ಠಸ್ಥಾನದಲ್ಲಿರುವವನೂ ಆದ ಪರಮೇಶ್ವರನ ಸ್ಫಟಿಕಮಯವೂ, ಮಂಗಳಕರವೂ, ಉನ್ನತ ಶಿಖರಗಳಿಂದ ರಮಣೀಯವೂ ಆದ ವಿಮಾನವು ಇರುವುದು.

೨. ಅಲ್ಲಿ ದೇವೋತ್ತಮನೂ, ತ್ರಿಶೂಲಧಾರಿಯೂ, ಭೂತಾಧಿಪತಿಯೂ ಆದ ಪರಮೇಶ್ವರನ ಪೂಜೆಯನ್ನು ದೇವತೆ, ಋುಷಿ ಮತ್ತು ಸಿದ್ಧರು ಯಾವಾಗಲೂ ಮಾಡುತ್ತಾರೆ.

ಸ ದೇವ್ಯಾ ಗಿರಿಶಃ ಸಾರ್ಧಂ ಮಹಾದೇವ್ರೋ ಮಹೇಶ್ವರಃ ।
ಭೂತೈಃ ಪರಿವೃತೋ ನಿತ್ಯಂ ಭಾತಿ ತತ್ರ ಪಿನಾಕಧೃಕ್ ॥ ೩ ॥

ವಿಭಕ್ತಚಾರುಶಿಖರಃ ಕೈಲಾಸೋ ಯತ್ರ ಪರ್ವತಃ ।
ನಿವಾಸಃ ಕೋಟಿಯಕ್ಷಾಣಾಂ ಕುಬೇರಸ್ಯ ಚ ಧೀಮತಃ ॥ ೪ ॥

ತತ್ರಾಪಿ ದೇವದೇವಸ್ಯ ಭವಸ್ಯಾಯತನಂ ಮಹತ್ ।
ಮಂದಾಕಿನೀ ತತ್ರ ಪುಣ್ಯಾ ರಮ್ಯಾ ಸುವಿಮಲೋದಕಾ ॥ ೫ ॥

ನದೀ ನಾನಾವಿಧೈಃ ಪದ್ಮೈರನೇಕೈಃ ಸಮಲಂಕೃತಾ ।
ದೇವದಾನವಗಂಧರ್ವಯಕ್ಷರಾಕ್ಷಸಕಿನ್ನರೈಃ ॥ ೬ ॥

---

೩. ಅಲ್ಲಿ ಮಹೇಶ್ವರನೂ, ದೇವೋತ್ತಮನೂ, ಪಿನಾಕಧಾರಿಯೂ ಆದ ಈಶ್ವರನು ಭೂತಗಳಿಂದ ಸುತ್ತಲ್ಪಟ್ಟವನಾಗಿ ಪಾರ್ವತೀ ದೇವಿಯೊಡನೆ ವಿಹರಿಸುತ್ತಾ ಪ್ರಕಾಶಿಸುವನು.

೪. ಅಲ್ಲಿ ವಿಂಗಡಿಸಲ್ಪಟ್ಟ ಮನೋಹರವಾದ ಶಿಖರಗಳಿಂದ ಕೂಡಿದ ಕೈಲಾಸ ಪರ್ವತವು ಅನೇಕ ಕೋಟಿ ಯಕ್ಷರಿಗೂ ಜ್ಞಾನಿಯಾದ ಕುಬೇರನಿಗೂ ವಾಸಭೂಮಿ ಯಾಗಿದೆ.

೫. ಅಲ್ಲಿಯೂ ದೇವೋತ್ತಮನಾದ ಈಶ್ವರನ ಮಹತ್ತಾದ ಆಲಯವು ಪ್ರಕಾಶಿಸುತ್ತಿದೆ. ಅಲ್ಲಿ ಪವಿತ್ರವೂ ರಮ್ಯವೂ ಮತ್ತು ನಿರ್ಮಲವಾದ ಜಲಪ್ರವಾಹ ವುಳ್ಳದ್ದೂ ಆದ ಮಂದಾಕಿನೀ ನದಿಯು ಹರಿಯುತ್ತಿದೆ.

೬. ಮತ್ತು ಆ ನದಿಯು ಅನೇಕವಿಧವಾದ ಪದ್ಮಗಳಿಂದ ಅಲಂಕರಿಸಲ್ಪಟ್ಟಿರುವುದೂ ದೇವ, ದಾನವ, ಗಂಧರ್ವ, ಯಕ್ಷ, ರಾಕ್ಷಸ ಮತ್ತು ಕಿನ್ನರರಿಂದ ಸೇವಿಸಲ್ಪಡುವುದೂ ಆಗಿದೆ.

ಉಪಸ್ಪೃಷ್ಟಜಲಾ ನಿತ್ಯಂ ಸುಪುಣ್ಯಾ ಸುಮನೋರಮಾ ।
ಅನ್ಯಾಶ್ಚ ನದ್ಯಃ ಶತಶಃ ಸ್ವರ್ಣಪದ್ಮೈರಲಂಕೃತಾಃ ॥ ೭ ॥

ತಾಸಾಂ ಕೂಲೇ ತು ದೇವಸ್ಯ ಸ್ಥಾನಾನಿ ಪರಮೇಷ್ಠಿನಃ ।
ದೇವರ್ಷಿಗಣಜುಷ್ಟಾನಿ ತಥಾ ನಾರಾಯಣಸ್ಯ ತು ॥ ೮ ॥

ತಸ್ಯಾಪಿ ಶಿಖರೇ ಶುಭ್ರಂ ಪಾರಿಜಾತವನಂ ಶುಭಮ್ ।
ತತ್ರ ಶಕ್ರಸ್ಯ ವಿಪುಲಂ ಭವನಂ ರತ್ನಮಂಡಿತಮ್ ॥ ೯ ॥

ಸ್ಫಾಟಿಕಸ್ತಂಭಸಂಯುಕ್ತಂ ಹೇಮಗೋಪುರಶೋಭಿತಮ್ ।
ತತ್ರಾಥ ದೇವದೇವಸ್ಯ ವಿಷ್ಣೋರ್ವಿಶ್ವಾತ್ಮನಃ ಪ್ರಭೋಃ ॥ ೧೦ ॥

---

೭. ಮಹಾತ್ಮರಿಂದ ಆಚಮನಾದಿಗಳಲ್ಲಿ ಉಪಯೋಗಿಸಿದ ಜಲವುಳ್ಳದ್ದೂ, ಪವಿತ್ರವೂ, ಮನೋಹರವೂ ಆದ ಗಂಗಾನದಿಯು ಮತ್ತು ನೂರಾರು ಇತರ ನದಿಗಳು ಸುವರ್ಣದ ಕಮಲಗಳಿಂದ ಅಲಂಕರಿಸಲ್ಪಟ್ಟಿವೆ.

೮. ಆ ನದಿಗಳ ತೀರಗಳಲ್ಲಿ ದೇವೋತ್ತಮನಾದ ಬ್ರಹ್ಮನ ಮತ್ತು ಮಹಾವಿಷ್ಣುವಿನ ಸ್ಥಾನಗಳು ದೇವ-ಋಷಿಗಳ ಸಂಘಗಳಿಂದ ಸೇವಿಸಲ್ಪಟ್ಟಿವೆ.

೯. ಅದರ ಶಿಖರದಲ್ಲಿ ಶುಭ್ರವೂ, ಶುಭಕರವೂ ಆದ ಪಾರಿಜಾತ ವನವಿರುವುದು. ಅಲ್ಲಿ ರತ್ನಗಳಿಂದ ಅಲಂಕರಿಸಲ್ಪಟ್ಟಿರುವುದೂ, ವಿಸ್ತಾರವೂ ಆದ ಇಂದ್ರನ ಮಂದಿರವಿರುವುದು.

೧೦. ಆ ಗೃಹವು ಸ್ಫಟಿಕ ಶಿಲೆಗಳ ಸ್ತಂಭಗಳಿಂದ ಕೂಡಿರುವುದೂ, ಚಿನ್ನದ ಗೋಪುರದಿಂದ ಅಲಂಕರಿಸಲ್ಪಟ್ಟದ್ದೂ ಆಗಿದೆ. ಅಲ್ಲದೇ ದೇವಾಧಿದೇವನೂ, ವಿಶ್ವರೂಪಿಯೂ ಸರ್ವನಿಯಾಮಕನೂ ಆದ ವಿಷ್ಣುವಿನ ಭವನವು ಇರುವುದು.

ಪುಣ್ಯಂ ಚ ಭವನಂ ರಮ್ಯಂ ಸರ್ವರತ್ನೋಪಶೋಭಿತಮ್ ।
ತತ್ರ ನಾರಾಯಣಃ ಶ್ರೀಮಾನ್ ಲಕ್ಷ್ಮ್ಯಾ ಸಹ ಜಗತ್ಪತಿಃ ॥ ೧೧ ॥

ಆಸ್ತೇ ಸರ್ವೇಶ್ವರಃ ಶ್ರೇಷ್ಠಃ ಪೂಜ್ಯಮಾನಃ ಸನಾತನಃ ।
ತಥಾ ಚ ವಸುಧಾರೇ ತು ವಸೂನಾಂ ರತ್ನಮಂಡಿತಮ್ ॥ ೧೨ ॥

ಸ್ಥಾನಾನಾಮುತ್ತಮಂ ಪುಣ್ಯಂ ದುರಾಧರ್ಷಂ ಸುರದ್ವಿಷಾಮ್ ।
ರತ್ನಧಾರೇ ಗಿರಿವರೇ ಸಪ್ತರ್ಷೀಣಾಂ ಮಹಾತ್ಮನಾಮ್ ॥ ೧೩ ॥

ಸಪ್ತಾಶ್ರಮಾಣಿ ಪುಣ್ಯಾನಿ ಸಿದ್ಧಾವಾಸೈರ್ಯುತಾನಿ ಚ ।
ತತ್ರ ಹೈಮಂ ಚತುರ್ದ್ವಾರಂ ವಜ್ರನೀಲಾದಿಮಂಡಿತಮ್ ॥ ೧೪ ॥

---

೧೧. ಆ ವಿಷ್ಣು ದೇವಾಲಯವು ಪವಿತ್ರವೂ ರಮ್ಯವೂ ಅನೇಕ ರತ್ನಗಳಿಂದ ಶೋಭಿತವೂ ಆಗಿದೆ. ಅಲ್ಲಿ ಕಾಂತಿಯುಕ್ತನೂ ಜಗತ್ಪತಿಯೂ ಆದ ಶ್ರೀಮನ್ ನಾರಾಯಣನು ಲಕ್ಷ್ಮಿಯೊಡನೆ ವಾಸಮಾಡಿರುವನು.

೧೨. ಸರ್ವೇಶ್ವರನೂ, ಶ್ರೇಷ್ಠನೂ, ಸನಾತನನೂ ಆದ ವಿಷ್ಣುವು ದೇವಾದಿಗಳಿಂದ ಪೂಜಿಸಲ್ಪಡುವನು. ಹಾಗೂ ವಸುಧಾರ ಎಂಬ ಸ್ಥಾನದಲ್ಲಿ ರತ್ನಗಳಿಂದ ಅಲಂಕರಿಸಲ್ಪಟ್ಟ ಅಷ್ಟವಸುಗಳ ಮಂದಿರವು ಇರುವುದು.

೧೩. ಆ ಮಂದಿರವು ರಾಕ್ಷಸರುಗಳಿಗೆ ವಶ್ಯವಲ್ಲದ್ದೂ ಪವಿತ್ರವೂ ಮತ್ತು ಎಲ್ಲಾ ಸ್ಥಾನಗಳಲ್ಲಿ ಉತ್ತಮವೂ ಆಗಿದೆ. ಹಾಗೆ ರತ್ನಧಾರ ಎಂಬ ಶ್ರೇಷ್ಠ ಪರ್ವತದಲ್ಲಿ ಮಹಾತ್ಮರಾದ ಸಪ್ತರ್ಷಿಗಳ ವಾಸಭೂಮಿಯು ಇರುವುದು.

೧೪. ಆ ಮಹರ್ಷಿಗಳ ವಾಸಭೂಮಿಯಾದ ಏಳು ಆಶ್ರಮಗಳು ಪವಿತ್ರವೂ ಸಿದ್ಧಪುರುಷರ ವಾಸಸ್ಥಾನಗಳಿಂದ ಕೂಡಿರುವುದೂ ಆಗಿವೆ. ಅಲ್ಲಿ ಸುವರ್ಣ ನಿರ್ಮಿತವೂ, ನಾಲ್ಕುದ್ವಾರಗಳಿಂದ ಶೋಭಿತವೂ, ವಜ್ರ, ನೀಲ ಮುಂತಾದ ಮಣಿಗಳಿಂದ ಅಲಂಕರಿಸಲ್ಪಟ್ಟದೂ ಆದ ಒಂದು ಸ್ಥಾನವು ಇದೆ.

ಸುಪುಣ್ಯಂ ಸದನಸ್ಥಾನಂ ಬ್ರಹ್ಮಣೋಽವ್ಯಕ್ತಜನ್ಮನಃ ।
ತತ್ರ ದೇವರ್ಷಯೋ ವಿಪ್ರಾಃ ಸಿದ್ಧಾ ಬ್ರಹ್ಮರ್ಷಯೋಽಪರೇ ॥ ೧೫ ॥

ಉಪಾಸತೇ ದೇವದೇವಂ ಪಿತಾಮಹಮಜಂ ಪರಮ್ ।
ಸರ್ವೈಃ ಸಂಪೂಜಿತೋ ನಿತ್ಯಂ ದೇವ್ಯಾ ಸಹ ಚತುರ್ಮುಖಃ ॥ ೧೬ ॥

ಆಸ್ತೇ ಹಿತಾಯ ಲೋಕಾನಾಂ ಶಾಂತಾನಾಂ ಪರಮಾ ಗತಿಃ ।
ತಸ್ಯೈಕಶೃಂಗಶಿಖರೇ ಮಹಾಪದ್ಮೈರಲಂಕೃತೇ ॥ ೧೭ ॥

ಸ್ವಚ್ಛಾಮೃತಜಲಂ ಪುಣ್ಯಂ ಸುಗಂಧಂ ಸುಮಹತ್ಸರಃ ।
ಜೈಗೀಷವ್ಯಾಶ್ರಮಂ ಪುಣ್ಯಂ ಯೋಗೀಂದ್ರೈರುಪಸೇವಿತಮ್ ॥ ೧೮ ॥

---

೧೫. ದ್ವಿಜೋತ್ತಮರೆ! ಅಲ್ಲಿ ಬ್ರಹ್ಮದೇವನನ್ನು ಸೇವಿಸುವ ದೇವಋಷಿ, ವಿಪ್ರ, ಸಿದ್ಧ ಮತ್ತು ಬ್ರಹ್ಮರ್ಷಿಗಳಿಂದ ಕೂಡಿರುವ ಅವ್ಯಕ್ತದಿಂದ ಹುಟ್ಟಿದ ಬ್ರಹ್ಮನ ಪವಿತ್ರವಾದ ಆಲಯವು ಇರುವುದು.

೧೬. ಅಲ್ಲಿ ಬ್ರಹ್ಮರ್ಷಿ ಮುಂತಾದವರು ದೇವಾಧಿದೇವನೂ, ಪಿತಾಮಹನೂ, ಜನ್ಮರಹಿತನೂ ಆದ ಬ್ರಹ್ಮನನ್ನು ವಿಶೇಷವಾಗಿ ಪೂಜಿಸುತ್ತಾರೆ. ಹೀಗೆ ದೇವಿಯೊಡನೆ ಚತುರ್ಮುಖನಾದ ಬ್ರಹ್ಮನು ಸರ್ವರಿಂದಲೂ ಪೂಜಿಸಲ್ಪಡುವನು.

೧೭. ಶಾಂತರಾದ ಮುನಿಗಳಿಗೆ ಸದ್ಗತಿರೂಪನಾದ ಬ್ರಹ್ಮದೇವನು ಲೋಕಗಳ ಹಿತಕ್ಕೋಸ್ಕರ ಅಲ್ಲಿ ವಾಸಮಾಡುತ್ತಿರುವನು. ಅದರ ಮಹಾಪದ್ಮಗಳಿಂದ ಅಲಂಕರಿಸಲ್ಪಟ್ಟ ಒಂದು ಶಿಖರದಲ್ಲಿ ಒಂದು ತಟಾಕವು ಇರುವುದು.

೧೮. ಆ ಸರೋವರವು ನಿರ್ಮಲವಾದ ಅಮೃತದಂತಿರುವ ನೀರಿನಿಂದ ಪೂರ್ಣವೂ, ಪವಿತ್ರವೂ, ಸುಗಂಧದಿಂದ ಕೂಡಿದ್ದೂ ಮತ್ತು ವಿಶಾಲವೂ ಆಗಿದೆ. ಅದರ ಸಮೀಪದಲ್ಲಿ ಅನೇಕ ಯೋಗೀಂದ್ರರಿಂದ ಸೇವಿಸಲ್ಪಟ್ಟ ಜೈಗೀಷವ್ಯಮುನಿಯ ಪವಿತ್ರವಾದ ಆಶ್ರಮವಿರುವುದು.

ತತ್ರಾಸ್ತೇ ಭಗವಾನ್ನಿತ್ಯಂ ಸರ್ವಶಿಷ್ಯೈಃ ಸಮಾವೃತಃ ।
ಪ್ರಶಾಂತದೋಷೈರಕ್ಷುದ್ರೈರ್ಬ್ರಹ್ಮವಿದ್ಭಿರ್ಮಹಾತ್ಮಭಿಃ ॥ ೧೯ ॥

ಶಂಖೋ ಮನೋಹರಶ್ಚೈವ ಕೌಶಿಕಃ ಕೃಷ್ಣ ಏವ ಚ ।
ಸುಮನಾ ವೇದವಾದಶ್ಚ ಶಿಷ್ಯಾಸ್ತಸ್ಯ ಪ್ರಸಾದತಃ ॥ ೨೦ ॥

ಸರ್ವಯೋಗರತಾಃ ಶಾಂತಾ ಭಸ್ಮೋದ್ಧೂಲಿತವಿಗ್ರಹಾಃ ।
ಉಪಾಸತೇ ಮಹಾಚರ್ಯಾ ಬ್ರಹ್ಮವಿದ್ಯಾಪರಾಯಣಾಃ ॥ ೨೧॥

ತೇಷಾಮನುಗ್ರಹಾರ್ಥಾಯ ಯತೀನಾಂ ಶಾಂತಚೇತಸಾಮ್ ।
ಸಾನ್ನಿಧ್ಯಂ ಕುರುತೇ ಭೂಯೋ ದೇವ್ಯಾ ಸಹ ಮಹೇಶ್ವರಃ ॥ ೨೨ ॥

---

೧೯. ಅಲ್ಲಿ ದೋಷವರ್ಜಿತರೂ, ಕ್ಷುದ್ರಸ್ವಭಾವವಿಲ್ಲದವರೂ, ಬ್ರಹ್ಮಜ್ಞಾನಿಗಳೂ, ಮಹಾತ್ಮರೂ ಆದ ಅನೇಕ ಶಿಷ್ಯಜನರಿಂದ ಸುತ್ತಲ್ಪಟ್ಟವನಾಗಿ ಪೂಜ್ಯನಾದ ಜೇಗೀಷವ್ಯಮುನಿಯು ವಾಸಮಾಡುತ್ತಿರುವನು.

೨೦. ಆ ಗುರುವಿನ ಶಿಷ್ಯಜನರಲ್ಲಿ ಶಂಖ, ಮನೋಹರ, ಕೌಶಿಕ, ಕೃಷ್ಣ, ಸುಮನಾ ಮತ್ತು ವೇದವಾದ ಎಂಬುವರು ಪ್ರಧಾನ ಶಿಷ್ಯರೆಂದು ಗಣಿಸಲ್ಪಟ್ಟಿರುವರು.

೨೧. ಸಮಸ್ತ ಶಿಷ್ಯರೂ ಎಲ್ಲಾ ಯೋಗಾಭ್ಯಾಸಗಳಲ್ಲಿ ನಿರತರೂ, ಶಾಂತರೂ, ಭಸ್ಮಲೇಪನ ಮಾಡಿದ ವಿಗ್ರಹವುಳ್ಳವರೂ ಮಹಾವೀರ್ಯವುಳ್ಳವರೂ ಮತ್ತು ಬ್ರಹ್ಮವಿದ್ಯೆಯಲ್ಲಿ ಆಸಕ್ತರೂ ಆಗಿ ಗುರುವನ್ನು ಸೇವಿಸುತ್ತಾರೆ.

೨೨. ಶಾಂತವಾದ ಮಾನಸವುಳ್ಳ ಆ ಯತಿಗಳನ್ನು ಅನುಗ್ರಹಿಸುವುದಕ್ಕೋಸ್ಕರ ಮಹೇಶ್ವರನು ಪಾರ್ವತೀದೇವಿಯೊಡನೆ ಅಲ್ಲಿ ಯಾವಾಗಲೂ ಸಾನ್ನಿಧ್ಯವನ್ನು ಕೊಡುತ್ತಾನೆ.

ಅನೇಕಾನ್ಯಾಶ್ರಮಾಣಿ ಸ್ಯುಸ್ತಸ್ಮಿನ್ ಗಿರಿವರೋತ್ತಮೇ ।
ಮುನೀನಾಂ ಯುಕ್ತಮನಸಾಂ ಸರಾಂಸಿ ಸರಿತಸ್ತಥಾ ॥ ೨೩ ॥

ತೇಷು ಯೋಗರತಾ ವಿಪ್ರಾ ಜಾಪಕಾಃ ಸಂಯತೇಂದ್ರಿಯಾಃ ।
ಬ್ರಹ್ಮಣ್ಯಾಸಕ್ತಮನಸೋ ರಮಂತೇ ಜ್ಞಾನತತ್ಪರಾಃ ॥ ೨೪ ॥

ಆತ್ಮನ್ಯಾತ್ಮಾನಮಾಧಾಯ ಶಿಖಾಂತೇ ಪರ್ಯವಸ್ಥಿತಮ್ ।
ಧ್ಯಾಯಂತಿ ದೇವಮೀಶಾನಂ ಯೇನ ಸರ್ವಮಿದಂ ತತಮ್ ॥ ೨೫ ॥

ಸುಮೇಘಂ ವಾಸವಸ್ಥಾನಂ ಸಹಸ್ರಾದಿತ್ಯಸನ್ನಿಭಮ್ ।
ತತ್ರಾಸ್ತೇ ಭಗವಾನಿಂದ್ರಃ ಶಚ್ಯಾ ಸಹ ಸುರೇಶ್ವರಃ ॥ ೨೬ ॥

---

೨೩. ಆ ಶ್ರೇಷ್ಠವಾದ ಪರ್ವತದಲ್ಲಿ ಏಕಾಗ್ರತೆಯಿಂದ ಕೂಡಿದ ಚಿತ್ತವುಳ್ಳ ಮಹರ್ಷಿಗಳ ಅನೇಕ ಆಶ್ರಮಗಳೂ, ಸರೋವರಗಳೂ ಮತ್ತು ನದಿಗಳೂ ಇರುತ್ತವೆ.

೨೪. ಅವುಗಳಲ್ಲಿ ಯೋಗಾಭ್ಯಾಸ ನಿರತರೂ, ಮಂತ್ರಜಪದಲ್ಲಿ ಆಸಕ್ತಿಯುಳ್ಳವರೂ, ಇಂದ್ರಿಯಜಯವುಳ್ಳವರೂ, ಪರಬ್ರಹ್ಮದಲ್ಲಿ ಅಡಗಿದ ಮಾನಸವುಳ್ಳವರೂ ಮತ್ತು ಜ್ಞಾನನಿಷ್ಠಾತತ್ಪರರೂ ಆದ ವಿಪ್ರರು ರಮಿಸುತ್ತಿರುವರು.

೨೫. ಸ್ವಸ್ವರೂಪದಲ್ಲಿ ಅಂತಃಕರಣವನ್ನು ಇರಿಸಿ ಶಿಖೆಯ ಅಗ್ರದಲ್ಲಿ ವಾಸಮಾಡುವ ಈ ಸಮಸ್ತ ಜಗತ್ತನ್ನೂ ಅಂತರ್ಯಾಮಿರೂಪದಿಂದ ವ್ಯಾಪಿಸಿರುವ ಸರ್ವೇಶ್ವರನನ್ನು ಮುನಿಗಳು ಧ್ಯಾನಿಸುತ್ತಿರುವರು.

೨೬. ಉತ್ತಮವಾದ ಮೇಘಗಳಿಂದ ಕೂಡಿರುವುದೂ ಸಾವಿರಾರು ಸೂರ್ಯಬಿಂಬಗಳಿಗೆ ಸಮಾನವೂ ಆದ ದೇವೇಂದ್ರನ ಸ್ಥಾನದಲ್ಲಿ ಪೂಜ್ಯನೂ ದೇವತಾಪ್ರಭುವೂ ಆದ ಇಂದ್ರನು ಶಚೀ ದೇವಿಯೊಡನೆ ವಾಸಮಾಡುತ್ತಿರುವನು.

ಗಜಶೈಲೇ ತು ದುರ್ಗಾಯಾ ಭವನಂ ಮಣಿತೋರಣಮ್ ।
ಆಸ್ತೇ ಭಗವತೀ ದುರ್ಗಾ ತತ್ರ ಸಾಕ್ಷಾನ್ಮಹೇಶ್ವರೀ ॥ ೨೭ ॥

ಉಪಾಸ್ಯಮಾನಾ ವಿವಿಧೈಃ ಶಕ್ತಿಭೇದೈರಿತಸ್ತತಃ ।
ಪೀತ್ವಾ ಯೋಗಾಮೃತಂ ಲಬ್ಧ್ವಾ ಸಾಕ್ಷಾದಮೃತಮೈಶ್ವರಮ್ ॥ ೨೮ ॥

ಸುನೀಲಸ್ಯ ಗಿರೇಃ ಶೃಂಗೇ ನಾನಾಧಾತುಸಮುಜ್ಜ್ವಲೇ ।
ರಾಕ್ಷಸಾನಾಂ ಪುರಾಣಿ ಸ್ಯುಃ ಸರಾಂಸಿ ಶತಶೋ ದ್ವಿಜಾಃ ॥ ೨೯ ॥

ತಥಾ ಪುರಶತಂ ವಿಪ್ರಾಃ ಶತಶೃಂಗೇ ಮಹಾಚಲೇ ।
ಸ್ಫಾಟಿಕಸ್ತಂಭಸಂಯುಕ್ತಂ ಯಕ್ಷಾಣಾಮಮಿತೌಜಸಾಮ್ ॥ ೩೦ ॥

---

೨೭. ಗಜಶೈಲದಲ್ಲಿ ಮಣಿಮಯವಾದ ತೋರಣವುಳ್ಳ ದುರ್ಗಾದೇವಿಯ ಗೃಹವು ಇರುವುದು. ಅಲ್ಲಿ ಪೂಜ್ಯಳೂ, ಪ್ರತ್ಯಕ್ಷವಾಗಿ ಮಹೇಶ್ವರೀ ಸ್ವರೂಪಳೂ ಆದ ದುರ್ಗಾದೇವಿಯು ವಾಸಮಾಡುತ್ತಾಳೆ.

೨೮. ಮಹೇಶ್ವರಿಯು ತನ್ನ ಅಂಶವಾದ ವಿವಿಧ ಅನೇಕ ಶಕ್ತಿದೇವತೆಗಳಿಂದ ಸೇವಿಸಲ್ಪಟ್ಟವಳಾಗಿ ಪ್ರತ್ಯಕ್ಷವಾಗಿ ಅಮೃತರೂಪವೂ ಈಶ್ವರ ತತ್ವಾತ್ಮಕವೂ ಆದ ಯೋಗಾಮೃತವನ್ನು ಪಾನಮಾಡುತ್ತಿರುವಳು.

೨೯. ದ್ವಿಜೋತ್ತಮರೇ! ಅನೇಕವಿಧವಾದ ಧಾತುಗಳಿಂದ ಉಜ್ವಲವಾದ ಸುನೀಲ ಎಂಬ ಪರ್ವತದ ಶಿಖರದಲ್ಲಿ ಅನೇಕ ರಾಕ್ಷಸರ ನಗರಗಳು ಮತ್ತು ಸರೋವರಗಳು ಇರುತ್ತವೆ.

೩೦. ವಿಪ್ರರೇ! ಶತಶೃಂಗ ಎಂಬ ಮಹಾಪರ್ವತದಲ್ಲಿ ಸ್ಫಟಿಕಮಣಿಗಳ ಸ್ತಂಭಗಳಿಂದ ಕೂಡಿದ ಅಗಣ್ಯವಾದ ಮಹಿಮೆಯಿಂದ ಕೂಡಿದ ಯಕ್ಷರ ಅನೇಕ ನಗರಗಳು ಪ್ರಕಾಶಿಸುವುವು.

ಶ್ವೇತೋದರಗಿರೇಃ ಶೃಂಗೇ ಸುಪರ್ಣಸ್ಯ ಮಹಾತ್ಮನಃ ।
ಪ್ರಾಕಾರಗೋಪುರೋಪೇತಂ ಮಣಿತೋರಣಮಂಡಿತಮ್ ॥ ೩೧ ॥

ಸ ತತ್ರ ಗರುಡಃ ಶ್ರೀಮಾನ್ ಸಾಕ್ಷಾದ್ವಿಷ್ಣುರಿವಾಪರಃ ।
ಧ್ಯಾತ್ವಾ ತತ್ಪರಮಂ ಜ್ಯೋತಿರಾತ್ಮನ್ಯೇವಮಥಾವ್ಯಯಮ್ ॥ ೩೨ ॥

ಅನ್ಯಚ್ಚ ಭವನಂ ಪುಣ್ಯಂ ಶ್ರೀಶೃಂಗೇ ಮುನಿಪುಂಗವಾಃ ।
ಶ್ರೀದೇವ್ಯಾಃ ಸರ್ವರತ್ನಾಢ್ಯಂ ಹೈಮಂ ಸಮಣಿತೋರಣಮ್ ॥ ೩೩ ॥

ತತ್ರ ಸಾ ಪರಮಾ ಶಕ್ತಿರ್ವಿಷ್ಣೋರತಿಮನೋರಮಾ ।
ಅನಂತವಿಭವಾ ಲಕ್ಷ್ಮೀರ್ಜಗತ್ಸಮ್ಮೋಹನೋತ್ಸುಕಾ ॥ ೩೪ ॥

---

೩೧. ಶ್ವೇತೋದರ ಎಂಬ ಪರ್ವತದ ಶಿಖರದಲ್ಲಿ ಮಹಾತ್ಮನಾದ ಗರುಡನ ಭವನವು ಇರುವುದು. ಅದು ಮಣಿಮಯವಾದ ತೋರಣಗಳಿಂದಲೂ, ಪ್ರಾಕಾರ ಮತ್ತು ಗೋಪುರಗಳಿಂದಲೂ ಶೃಂಗರಿಸಲ್ಪಟ್ಟಿದೆ.

೩೨. ಆ ಭವನದಲ್ಲಿ ಶ್ರೀಮಂತನಾದ ಗರುಡನು ಪ್ರತ್ಯಕ್ಷವಾಗಿ ಬಂದು ಮತ್ತೊಬ್ಬ ವಿಷ್ಣುವಿನಂತೆ ಕಾಣಿಸುತ್ತಿರುವನು. ಅವನು ಆತ್ಮಸ್ವರೂಪದಲ್ಲಿ ಅವ್ಯಯವಾದ ಪರಮಾತ್ಮ ಜ್ಯೋತಿಯನ್ನು ಧ್ಯಾನಿಸುತ್ತಿರುವನು.

೩೩. ಮುನಿಶ್ರೇಷ್ಠರೇ ! ಶ್ರೀ ಶೃಂಗ ಎಂಬ ಪರ್ವತದಲ್ಲಿ ಅನೇಕ ರತ್ನಗಳಿಂದ ಪೂರ್ಣವೂ ಸುವರ್ಣ ಖಚಿತವೂ ಮಣಿತೋರಣಗಳಿಂದ ರಮ್ಯವೂ ಮತ್ತು ಪವಿತ್ರವೂ ಆದ ಶ್ರೀದೇವಿಯ ಭವನವು ಇರುವುದು.

೩೪. ಅದರಲ್ಲಿ ವಿಷ್ಣುವಿನ ಪರಮಶಕ್ತಿಸ್ವರೂಪಳೂ, ಅತ್ಯಂತ ಮನೋಹರಳೂ, ಗಣನಾತೀತವಾದ ವೈಭವವುಳ್ಳವಳೂ ಮೋಹಪಡಿಸುವುದರಲ್ಲಿ ಉತ್ಸುಕಳೂ ಆದ ಲಕ್ಷ್ಮಿಯು ವಾಸಮಾಡುತ್ತಾಳೆ.

ಅಧ್ಯಾಸ್ತೇ ದೇವಗಂಧರ್ವಸಿದ್ಧಚಾರಣವಂದಿತಾ ।
ವಿಚಿಂತ್ಯಾ ಜಗತೋ ಯೋನಿಃ ಸ್ವಶಕ್ತಿಕಿರಣೋಜ್ಜ್ವಲಾ ॥ ೩೫ ॥

ತತ್ರೈವ ದೇವದೇವಸ್ಯ ವಿಷ್ಣೋರಾಯತನಂ ಮಹತ್ ।
ಸರಾಂಸಿ ತತ್ರ ಚತ್ವಾರಿ ವಿಚಿತ್ರಕಮಲಾಶಯಾಃ ॥ ೩೬ ॥

ತಥಾ ಸಹಸ್ರಶಿಖರೇ ವಿದ್ಯಾಧರಪುರಾಷ್ಟಕಮ್ ।
ರತ್ನಸೋಪಾನಸಂಯುಕ್ತಂ ಸರೋಭಿಶ್ಚೋಪಶೋಭಿತಮ್ ॥ ೩೭ ॥

ನದ್ಯೋ ವಿಮಲಪಾನೀಯಾಶ್ಚಿತ್ರನೀಲೋತ್ಪಲಾಕರಾಃ ।
ಕರ್ಣಿಕಾರವನಂ ದಿವ್ಯಂ ತತ್ರಾಸ್ತೇ ಶಂಕರಃ ಸ್ವಯಮ್ ॥ ೩೮ ॥

---

೩೫. ದೇವತೆ, ಗಂಧರ್ವ, ಸಿದ್ಧ, ಚಾರಣರಿಂದ ವಂದಿಸಲ್ಪಟ್ಟವಳೂ, ಧ್ಯಾನಗಮ್ಯಳೂ, ಜಗತ್ತಿಗೆ ಕಾರಣಳೂ ಮತ್ತು ತನ್ನ ಶಕ್ತಿರೂಪವಾದ ಕಿರಣಗಳಿಂದ ಉಜ್ವಲಳೂ ಆದ ಮಹಾ ಲಕ್ಷ್ಮಿಯು ತನ್ನ ಆ ನಿಲಯದಲ್ಲಿ ವಾಸಮಾಡುತ್ತಿರುವಳು.

೩೬. ಅಲ್ಲಿಯೇ ದೇವೋತ್ತಮನಾದ ಮಹಾವಿಷ್ಣುವಿನ ಒಂದು ಮಹತ್ತಾದ ಆಲಯವು ಇರುವುದು. ಅದರ ಸಮೀಪದಲ್ಲಿ ವಿಚಿತ್ರವಾದ ಕಮಲಗಳಿಂದ ಕೂಡಿದ ನಾಲ್ಕು ಸರೋವರಗಳು ಪ್ರಕಾಶಿಸುವುವು.

೩೭. ಹಾಗೆ ಸಹಸ್ರ ಶಿಖರ ಎಂಬ ಪರ್ವತದಲ್ಲಿ ರತ್ನಮಯವಾದ ಸೋಪಾನಗಳಿಂದ ಶೋಭಿತವೂ ಅನೇಕ ಸರೋವರಗಳಿಂದ ಕೂಡಿರುವುದೂ ಆದ ಎಂಟು ವಿದ್ಯಾಧರರ ನಗರಗಳು ಇರುತ್ತವೆ.

೩೮. ಅಲ್ಲಿ ನಿರ್ಮಲವಾದ ಪಾನೀಯದಿಂದಲೂ ವಿಚಿತ್ರವಾದ ಕನ್ನೈದಿಲೆಗಳಿಂದಲೂ ಕೂಡಿರುವ ಅನೇಕ ನದಿಗಳು ಹರಿಯುತ್ತಿವೆ. ಅಲ್ಲಿ ಒಂದು ದಿವ್ಯವಾದ ಕರ್ಣಿಕಾರವನವು ಪ್ರಸಿದ್ಧವಾಗಿದೆ. ಅದರಲ್ಲಿ ಶಂಕರನು ಸಾಕ್ಷಾತ್ತಾಗಿ ವಾಸಮಾಡುವನು.

ಪಾರಿಜಾತೇ ಮಹಾಲಕ್ಷ್ಮ್ಯಾಃ ಪರ್ವತೇ ತು ಪುರಂ ಶುಭಮ್ ।
ರಮ್ಯಪ್ರಾಸಾದಸಂಯುಕ್ತಂ ಘಂಟಾಚಾಮರಭೂಷಿತಮ್ ॥ ೩೯ ॥

ನೃತ್ಯದ್ಭಿರಪ್ಸರಃಸಂಘೈರಿತಶ್ಚೇತಶ್ಚ ಶೋಭಿತಮ್ ।
ಮೃದಂಗಪಣವೋದ್ಘುಷ್ಟಂ ವೇಣುವೀಣಾನಿನಾದಿತಮ್ ॥ ೪೦ ॥

ಗಂಧರ್ವಕಿನ್ನರಾಕೀರ್ಣಂ ಸಂವೃತಂ ಸಿದ್ಧಪುಂಗವೈಃ ।
ಭಾಸ್ವದ್ಭಿರ್ಭೃಶಸಮಾಯುಕ್ತಂ ಮಹಾಪ್ರಾಸಾದಸಂಕುಲಮ್ ॥ ೪೧ ॥

ಮಹಾಗಣೇಶ್ವರೈರ್ಜುಷ್ಟಂ ಧಾರ್ಮಿಕಾಣಾಂ ಸುದರ್ಶನಮ್ ।
ತತ್ರ ಸಾ ವಸತೇ ದೇವೀ ನಿತ್ಯಂ ಯೋಗಪರಾಯಣಾ ॥ ೪೨ ॥

---

೩೯. ಪಾರಿಜಾತ ಗಿರಿಯಲ್ಲಿ ಘಂಟಾ ಚಾಮರಗಳಿಂದಲೂ, ರಮ್ಯವಾದ ಪ್ರಾಸಾದಗಳಿಂದಲೂ ಭೂಷಿಸಲ್ಪಟ್ಟಿರುವ ಮಂಗಳಮಯವಾದ ಮಹಾಲಕ್ಷ್ಮಿಯ ಪುರವು ಇರುತ್ತದೆ.

೪೦. ಆ ಮಹಾಲಕ್ಷ್ಮಿಯಪುರವು ನರ್ತನಮಾಡುತ್ತಿರುವ ಅಪ್ಸರಾಂಗನೆಯರ ಸಂಘದಿಂದ ಸುತ್ತಲೂ ವ್ಯಾಪಿಸಲ್ಪಟ್ಟಿರುವುದೂ, ಮೃದಂಗ-ಪಣವ ವೀಣಾ-ವೇಣು ಮುಂತಾದ ವಾದ್ಯ ಧ್ವನಿಗಳಿಂದ ಶಬ್ದಾಯಮಾನವೂ ಆಗಿದೆ.

೪೧. ಹಾಗೂ ಗಂಧರ್ವ, ಕಿನ್ನರರಿಂದ ವ್ಯಾಪಿಸಲ್ಪಟ್ಟಿರುವುದೂ, ಸಿದ್ಧೋತ್ತಮರಿಂದ ತುಂಬಿರುವುದೂ, ಪ್ರಕಾಶಿಸುವ ಅನೇಕ ಗೋಡೆಗಳಿಂದ ಕೂಡಿರುವುದೂ ಮತ್ತು ದೊಡ್ಡ ಪ್ರಾಸಾದಗಳಿಂದ ರಮಣೀಯವೂ ಆಗಿದೆ.

೪೨. ಮತ್ತು ಮಹಾಗಣಾಧಿಪತಿಗಳಿಂದ ಸೇವಿಸಲ್ಪಟ್ಟಿರುವುದೂ ಧಾರ್ಮಿಕ ಪುರುಷರಿಗೆ ದರ್ಶನೀಯವೂ ಆದ ಆ ಲಕ್ಷ್ಮೀಪುರದಲ್ಲಿ ಮಹಾಲಕ್ಷ್ಮೀದೇವಿಯು ಯಾವಾಗಲೂ ಯೋಗಸಮಾಧಿಸ್ಥಳಾಗಿ ವಾಸಮಾಡುವಳು.

ಮಹಾಲಕ್ಷ್ಮೀರ್ಮಹಾದೇವೀ ತ್ರಿಶೂಲವರಧಾರಿಣೀ ।
ತ್ರಿನೇತ್ರಾ ಸರ್ವಶಕ್ತ್ಯೌಘಸಂವೃತಾ ಸಾ ಚ ತನ್ಮಯೀ ॥ ೪೩ ॥

ಪಶ್ಯಂತಿ ತತ್ರ ಮುನಯಃ ಸಿದ್ಧಾ ಯೇ ಬ್ರಹ್ಮವಾದಿನಃ ।
ಸುಪಾರ್ಶ್ವಸ್ಯೋತ್ತರೇ ಭಾಗೇ ಸರಸ್ವತ್ಯಾಃ ಪುರೋತ್ತಮಮ್ ॥ ೪೪ ॥

ಸರಾಂಸಿ ಸಿದ್ಧಜುಷ್ಟಾನಿ ದೇವಭೋಗ್ಯಾನಿ ಸತ್ತಮಾಃ ।
ಪಾಂಡುರಸ್ಯ ಗಿರೇಃ ಶೃಂಗೇ ವಿಚಿತ್ರದ್ರುಮಸಂಕುಲಮ್ ॥ ೪೫ ॥

ಗಂಧರ್ವಾಣಾಂ ಪುರಶತಂ ದಿವ್ಯಸ್ತ್ರೀಭಿಃ ಸಮಾವೃತಮ್ ।
ತತ್ರ ನಿತ್ಯಂ ಮದೋತ್ಸಿಕ್ತಾ ನರಾ ನಾರ್ಯಸ್ತಥೈವ ಚ ॥ ೪೬ ॥

---

೪೩. ಮಹಾದೇವಿಯೂ, ಉತ್ತಮವಾದ ತ್ರಿಶೂಲವನ್ನು ಧರಿಸಿದವಳೂ, ಮೂರು ನೇತ್ರಗಳಿಂದ ಅಲಂಕೃತಳೂ, ಸರ್ವವಿಧವಾದ ಶಕ್ತಿಬೃಂದದಿಂದ ಸುತ್ತಲ್ಪಟ್ಟವಳೂ ಮತ್ತು ಸರ್ವಶಕ್ತಿಮಯಳೂ ಆದ ಮಹಾಲಕ್ಷ್ಮಿಯು ಅಲ್ಲಿ ಪ್ರಕಾಶಿಸುವಳು.

೪೪. ಅಲ್ಲಿ ಸಿದ್ಧರೂ, ಬ್ರಹ್ಮವಾದಿಗಳೂ ಆದ ಮಹರ್ಷಿಗಳು ಲಕ್ಷ್ಮೀದೇವಿಯನ್ನು ಸಾಕ್ಷಾತ್ಕರಿಸುತ್ತಾರೆ. ಸುಪಾರ್ಶ್ವ ಪರ್ವತದ ಉತ್ತರಭಾಗದಲ್ಲಿ ಸರಸ್ವತಿಯ ಉತ್ತಮವಾದ ನಗರವು ಇರುವುದು.

೪೫. ಶ್ರೇಷ್ಠರಾದ ಸಾಧುಗಳೇ ! ಮತ್ತು ಸಿದ್ಧರಿಂದ ಸೇವಿಸಲ್ಪಡುವುದೂ ದೇವತೆಗಳಿಗೆ ಭೋಗ್ಯವೂ ಆದ ಅನೇಕ ಸರೋವರಗಳು ಇರುತ್ತವೆ. ವಿಚಿತ್ರವಾದ ವೃಕ್ಷಗಳಿಂದ ಒತ್ತಟ್ಟಾಗಿರುವ ಗಂಧರ್ವರ ಅನೇಕ ನಗರಗಳು ಪಾಂಡುರ ಗಿರಿಯ ಶಿಖರದಲ್ಲಿವೆ.

೪೬. ಯಾವಾಗಲೂ ಮದೋದ್ಯುಕ್ತರಾಗಿರುವ ನರ-ನಾರಿಯರಿಗೆ ಆಶ್ರಯವೂ ದಿವ್ಯಾಂಗನೆಯರಿಂದ ಸಂಪೂರ್ಣವೂ ಆದ ಗಂಧರ್ವನಗರಗಳು ಅಲ್ಲಿ ಸಮೃದ್ಧಿಯಿಂದ ಶೋಭಿಸುತ್ತವೆ.

ಕ್ರೀಡಂತಿ ಮುದಿತಾ ನಿತ್ಯಂ ವಿಲಾಸೈರ್ಭೋಗತತ್ಪರಾಃ ।
ಅಂಜನಸ್ಯ ಗಿರೇಃ ಶೃಂಗೇ ನಾರೀಪುರಮನುತ್ತಮಮ್ ॥ ೪೭ ॥

ವಸಂತಿ ತತ್ರಾಪ್ಸರಸೋ ರಂಭಾದ್ಯಾ ರತಿಲಾಲಸಾಃ ।
ಚಿತ್ರಸೇನಾದಯೋ ಯತ್ರ ಸಮಾಯಾಂತ್ಯರ್ಥಿನಃ ಸದಾ ॥ ೪೮ ॥

ಸಾ ಪುರೀ ಸರ್ವರತ್ನಾಢ್ಯಾ ನೈಕಪ್ರಸ್ರವಣೈರ್ಯುತಾ ।
ಅನೇಕಾನಿ ಪುರಾಣಿ ಸ್ಯುಃ ಕೌಮುದೇ ಚಾಪಿ ಸತ್ತಮಾಃ ॥ ೪೯ ॥

ರುದ್ರಾಣಾಂ ಶಾಂತರಜಸಾಮೀಶ್ವರಾಸಕ್ತಚೇತಸಾಮ್ ।
ತೇಷು ರುದ್ರಾ ಮಹಾಯೋಗಾ ಮಹೇಶಾಂತರಚಾರಿಣಃ ॥ ೫೦ ॥

---

೪೭. ಅಲ್ಲಿ ಸಂತುಷ್ಟರಾದ ಕಾಮುಕರು ಭೋಗಸುಖದಲ್ಲಿ ತತ್ಪರರಾಗಿ ವಿಲಾಸಗಳಿಂದ ಕ್ರೀಡಿಸುತ್ತಿರುವರು. ಅಂಜನಗಿರಿಯ ಶೃಂಗದಲ್ಲಿ ಸರ್ವೋತ್ತಮವಾದ ನಾರಿಯರ ಪುರವು ಇರುವುದು.

೪೮. ಆ ನಾರೀನಗರದಲ್ಲಿ ಚಿತ್ರಸೇನ ಮುಂತಾದ ಅನೇಕ ಅರ್ಥಿಗಳಿಂದ ಪ್ರಾರ್ಥಿಸಲ್ಪಡುತ್ತಿರುವ ಅಪ್ಸರ ಸ್ತ್ರೀಯರೂ ರತಿವಿಹಾರದಲ್ಲಿ ಲಾಲಸೆಯುಳ್ಳ ರಂಭಾ ಮುಂತಾದ ಅಪ್ಸರ ಸ್ತ್ರೀಯರೂ ಯಾವಾಗಲೂ ವಾಸಮಾಡುತ್ತಾರೆ.

೪೯. ಆ ನಗರಿಯು ಸರ್ವರತ್ನಗಳ ಸಮೃದ್ಧಿಯುಳ್ಳದ್ದೂ ಅನೇಕವಿಧ ಪ್ರವಾಹ ಗಳಿಂದ ಸುಂದರವೂ ಆಗಿದೆ. ಸಾಧೂತ್ತಮರೇ ! ಕುಮುದ ಪರ್ವತದಲ್ಲಿ ಅನೇಕ ನಗರಗಳು ಪ್ರಖ್ಯಾತವಾಗಿವೆ.

೫೦. ರಜೋಗುಣವನ್ನು ಕಳೆದುಕೊಂಡು ಈಶ್ವರನಲ್ಲಿ ಮನಸ್ಸಿನ ಆಸಕ್ತಿ ಯನ್ನು ಹೊಂದಿರುವ ರುದ್ರಮೂರ್ತಿಗಳು ಆ ನಗರಗಳಲ್ಲಿ ಮಹಾಯೋಗಾಭ್ಯಾಸ ಪರರೂ, ಸರ್ವೇಶ್ವರನ ಸಮೀಪದಲ್ಲಿ ಸಂಚರಿಸುವವರೂ ಆಗಿರುವರು.

ಸಮಾಸತೇ ಪುರಂ ಜ್ಯೋತಿರಾರೂಢಾಃ ಸ್ಥಾನಮೈಶ್ವರಮ್ ।
ಪಿಂಜರಸ್ಯ ಗಿರೇಃ ಶೃಂಗೇ ಗಣೇಶಾನಾಂ ಪುರತ್ರಯಮ್ ॥ ೫೧ ॥

ನಂದೀಶ್ವರಸ್ಯ ಕಪಿಲಾ ತತ್ರಾಸ್ತೇ ಸ ಮಹಾಮತಿಃ ।
ತಥಾ ಚ ಜಾರುಧೇಃ ಶೃಂಗೇ ದೇವದೇವಸ್ಯ ಧೀಮತಃ ॥ ೫೨ ॥

ದೀಪ್ತಮಾಯತನಂ ಪುಣ್ಯಂ ಭಾಸ್ಕರಸ್ಯಾಮಿತೌಜಸಃ ।
ತಸ್ಯೈವೋತ್ತರದಿಗ್ಭಾಗೇ ಚಂದ್ರಸ್ಥಾನಮನುತ್ತಮಮ್ ॥ ೫೩ ॥

ವಸತೇ ತತ್ರ ರಮ್ಯಾತ್ಮಾ ಭಗವಾನ್ ಶೀತದೀಧಿತಿಃ ।
ಅನ್ಯತ್ರ ಭವನಂ ದಿವ್ಯಂ ಹಂಸಶೈಲೇ ಮಹರ್ಷಯಃ ॥ ೫೪ ॥

---

೫೧. ಆ ರುದ್ರಮೂರ್ತಿಗಳು ಯೋಗಬಲದಿಂದ ಈಶ್ವರನ ಸ್ಥಾನವಾದ ಜ್ಯೋತಿಪುರವನ್ನು ಹೊಂದಿ ವಾಸಮಾಡುತ್ತಿರುವರು. ಪಿಂಜರಾದ್ರಿಯ ಶೃಂಗದಲ್ಲಿ ಗಣಾಧಿಪತಿಗಳ ಮೂರು ಪುರಗಳು ಇರುತ್ತವೆ.

೫೨. ಅವುಗಳಲ್ಲಿ ನಂದೀಶ್ವರನ ಕಪಿಲಾನಗರವ ಸೇರಿಕೊಂಡಿದೆ. ಮಹಾ ವಿವೇಕಿಯಾದ ನಂದೀಶ್ವರನು ಅಲ್ಲಿ ವಾಸಮಾಡುವನು. ಹಾಗೆ ದೇವೋತ್ತಮನೂ ಸರ್ವಜ್ಞನೂ ಆದ ಸೂರ್ಯನ ಆಲಯವು ಜಾರುಧಿ ಪರ್ವತದ ಶಿಖರದಲ್ಲಿದೆ

೫೩. ಗಣನಾತೀತವಾದ ತೇಜಸ್ಸುಳ್ಳ ಸೂರ್ಯನ ಆ ಪವಿತ್ರ ಆಯತನವು ದೀಪ್ತವಾಗಿರುವುದು. ಅದರ ಉತ್ತರದಿಕ್ಕಿನ ಭಾಗದಲ್ಲಿ ಶ್ರೇಷ್ಠವಾದ ಚಂದ್ರನ ಸ್ಥಾನವು ಇರುವುದು.

೫೪. ಮಹರ್ಷಿಗಳೇ! ಆ ಚಂದ್ರಸ್ಥಾನದಲ್ಲಿ ಭಗವಂತನೂ ಶೀತವಾದ ಕಿರಣವುಳ್ಳವನೂ, ಸುಂದರಮೂರ್ತಿಯೂ ಆದ ಚಂದ್ರನು ವಾಸಮಾಡುತ್ತಾನೆ. ಮತ್ತೊಂದುಕಡೆ ಹಂಸ ಶೈಲದಲ್ಲಿ ದಿವ್ಯವಾದ ಬ್ರಹ್ಮನ ಭವನವು ಇರುವುದು.

ಸಹಸ್ರಯೋಜನಾಯಾಮಂ ಸುವರ್ಣಮಣಿತೋರಣಮ್ ।
ತತ್ರಾಸ್ತೇ ಭಗವಾನ್ ಬ್ರಹ್ಮಾ ಸಿದ್ಧಸಂಘೈರಭಿಷ್ಟುತಃ ॥ ೫೫ ॥

ಸಾವಿತ್ರ್ಯಾ ಸಹ ವಿಶ್ವಾತ್ಮಾ ವಾಸುದೇವಾದಿಭಿರ್ಯುತಃ ।
ತಸ್ಯ ದಕ್ಷಿಣದಿಗ್ಭಾಗೇ ಸಿದ್ಧಾನಾಂ ಪುರಮುತ್ತಮಮ್ ॥ ೫೬ ॥

ಸನಂದನಾದಯೋ ಯತ್ರ ವಸಂತಿ ಮುನಿಪುಂಗವಾಃ ।
ಪಂಚಶೈಲಸ್ಯ ಶಿಖರೇ ದಾನವಾನಾಂ ಪುರತ್ರಯಮ್ ॥ ೫೭ ॥

ನಾತಿದೂರೇಣ ತಸ್ಮಾಚ್ಚ ದೈತ್ಯಾಚಾರ್ಯಸ್ಯ ಧೀಮತಃ ।
ಸುಗಂಧಶೈಲಶಿಖರೇ ಸರಿದ್ಭಿರುಪಶೋಭಿತಮ್ ॥ ೫೮ ॥

---

೫೫. ಒಂದು ಸಹಸ್ರಯೋಜನ ದೀರ್ಘ ಪರಿಮಾಣದಿಂದಲೂ ಸುವರ್ಣ ಮತ್ತು ಮಣಿಮಯವಾದ ತೋರಣಗಳಿಂದಲೂ ಕೂಡಿರುವ ಆ ಭವನದಲ್ಲಿ ಭಗವಂತನಾದ ಬ್ರಹ್ಮದೇವನು ಸಿದ್ಧರ ಸಂಘಗಳಿಂದ ಸ್ತುತಿಸಲ್ಪಡುತ್ತಲಿರುವನು.

೫೬. ವಿಶ್ವರೂಪಿಯೂ ವಾಮದೇವಾದಿ ಮಹರ್ಷಿಗಳಿಂದ ಕೂಡಿದವನೂ ಆದ ಆ ಬ್ರಹ್ಮದೇವನು ಸಾವಿತ್ರೀದೇವಿಯೊಡನೆ ಪ್ರಕಾಶಿಸುತ್ತಿರುವನು. ಅವರ ದಕ್ಷಿಣದಿಕ್ಕಿನ ಭಾಗದಲ್ಲಿ ಶ್ರೇಷ್ಠವಾದ ಸಿದ್ಧದೇವತೆಗಳ ನಗರವು ಇರುವುದು.

೫೭. ಅಲ್ಲಿ ಸನಂದನ ಮುಂತಾದ ಮುನಿಶ್ರೇಷ್ಠರು ವಾಸಮಾಡುವರು. ಪಂಚ ಶೈಲ ಎಂಬ ಪರ್ವತದ ಶಿಖರದಲ್ಲಿ ರಾಕ್ಷಸರು :ವಾಸಮಾಡುವ ಮೂರು ಪುರಗಳು ಇವೆ.

೫೮. ಆ ಪಂಚಶೈಲ ಶಿಖರದ ಸಮೀಪದಲ್ಲಿರುವ ಸುಗಂಧಶೈಲದ ಶಿಖರದಲ್ಲಿ ನದಿಗಳಿಂದ ಶೃಂಗರಿಸಲ್ಪಟ್ಟ ಜ್ಞಾನಿಯೂ ದೈತ್ಯಗುರುವೂ ಆದ ಕರ್ದಮ ಮುನಿಯ ಆಶ್ರಮವಿರುತ್ತದೆ.

ಕರ್ದಮಸ್ಯಾಶ್ರಮಂ ಪುಣ್ಯಂ ತತ್ರಾಸ್ತೇ ಭಗವಾನ್ನೃಷಿಃ ।
ತಸ್ಯೈವ ಪೂರ್ವದಿಗ್ಭಾಗೇ ಕಿಂಚಿದ್ವೈ ದಕ್ಷಿಣಾಶ್ರಿತೇ ॥ ೫೯ ॥

ಸನತ್ಕುಮಾರೋ ಭಗವಾಂಸ್ತತ್ರಾಸ್ತೇ ಬ್ರಹ್ಮವಿತ್ತಮಃ ।
ಸರ್ವೇಷ್ವೇತೇಷು ಶೈಲೇಷು ತಥಾನ್ಯೇಷು ಮುನೀಶ್ವರಾಃ ॥ ೬೦ ॥

ಸರಾಂಸಿ ವಿಮಲಾ ನದ್ಯೋ ದೇವಾನಾಮಾಲಯಾನಿ ಚ ।
ಸಿದ್ಧಲಿಂಗಾನಿ ಪುಣ್ಯಾನಿ ಮುನಿಭಿಃ ಸ್ಥಾಪಿತಾನಿ ಚ । ॥ ೬೦ ॥

ತಾನಿ ಚಾಯತನಾನ್ಯಾಶು ಸಂಖ್ಯಾತುಂ ನೈವ ಶಕ್ಯತೇ ।
ಏಷ ಸಂಕ್ಷೇಪತಃ ಪ್ರೋಕ್ತೋ ಜಂಬೂದ್ವೀಪಸ್ಯ ವಿಸ್ತರಃ ॥ ೬೨ ॥

---

೫೯. ಪವಿತ್ರವಾದ ಆಶ್ರಮದಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ಕರ್ದಮ ಮುನಿಯು ವಾಸಮಾಡಿದ್ದಾನೆ. ಆ ಆಶ್ರಮಕ್ಕಿಂತ ಸ್ವಲ್ಪ ದಕ್ಷಿಣದಿಕ್ಕನ್ನು ಆಶ್ರಯಿಸಿದ ಪೂರ್ವದಿಕ್ಕಿನ ಭಾಗದಲ್ಲಿ ಮತ್ತೊಂದು ಆಶ್ರಮವಿರುವುದು.

೬೦. ಮುನೀಶ್ವರರೇ ! ಆ ಆಶ್ರಮದಲ್ಲಿ ಬ್ರಹ್ಮಜ್ಞಾನಿಗಳಲ್ಲಿ ಗಣ್ಯನೂ, ಭಗವಂತನೂ ಆದ ಸನತ್ಕುಮಾರ ಮುನಿಯು ಧ್ಯಾನಾರೂಢನಾಗಿದ್ದಾನೆ. ಆಯಾಯ ಪರ್ವತಗಳು ಅನೇಕ ಸ್ಥಾನಗಳಿಂದ ಪೂರ್ಣವಾಗಿವೆ.

೬೧ ಮತ್ತು ಆ ಪರ್ವತಗಳಲ್ಲಿ ವಿಶಾಲವಾದ ಸರೋವರಗಳೂ ನಿರ್ಮಲವಾದ ನದಿಗಳೂ, ರಮ್ಯವಾದ ದೇವಾಲಯಗಳೂ ಮತ್ತು ಮಹರ್ಷಿಗಳಿಂದ ಸ್ಥಾಪಿಸಲ್ಪಟ್ಟ ಪವಿತ್ರವಾದ ಸಿದ್ಧಲಿಂಗಗಳೂ ಗಣನಾತೀತವಾಗಿವೆ.

೬೨. ಆ ಎಲ್ಲಾ ಸ್ಥಾನಗಳನ್ನೂ ಬೇಗ ಎಣಿಸಿ ಹೇಳುವುದು ಸಾಧ್ಯವಲ್ಲ ಈರೀತಿಯಾಗಿ ಜಂಬೂ ದ್ವೀಪದ ವಿಸ್ತಾರವು ನನ್ನಿಂದ ಸಂಗ್ರಹವಾಗಿ ಹೇಳಲ್ಪಟ್ಟಿದೆ.

ನ ಶಕ್ಯೋ ವಿಸ್ತರಾದ್ವಕ್ತುಂ ಮಯಾ ವರ್ಷಶತೈರಪಿ ॥೬೩॥

ಇತಿ ಶ್ರೀ ಕೂರ್ಮಪುರಾಣೇ ಅಷ್ಟಾಚತ್ವಾರಿಂಶತ್ತಮೋಽಧ್ಯಾಯಃ.

---

೬೩. ಇದನ್ನು ನನ್ನಿಂದ ನೂರಾರು ವರ್ಷಗಳಲ್ಲಿಯೂ ವಿಸ್ತಾರವಾಗಿ ವರ್ಣಿಸಲು ಶಕ್ಯವಲ್ಲ. ಆದುದರಿಂದ ಪ್ರಧಾನವಾದ ವಿಷಯಗಳನ್ನು ಮಾತ್ರ ಸಂಗ್ರಹಿಸಿ ಜಂಬೂದ್ವೀಪದ ವರ್ಣನೆಯನ್ನು ಮುಗಿಸಿದ್ದೇನೆ.

( ಕೂರ್ಮ ಪುರಾಣದಲ್ಲಿ ನಲವತ್ತೆಂಟನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮ ಪುರಾಣಂ



## ಏಕೋನಪಂಚಾಶತ್ತಮೋಽಧ್ಯಾಯಃ.

**ಸೂತ ಉವಾಚ :—**

**ಜಂಬೂದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ಸಮಂತತಃ ।**
**ಸಂವೇಷ್ಟಯಿತ್ವಾ ಕ್ಷೀರೋದಂ ಪ್ಲಕ್ಷದ್ವೀಪೋ ವ್ಯವಸ್ಥಿತಃ ॥ ೧ ॥**

**ಪ್ಲಕ್ಷದ್ವೀಪೇ ಚ ವಿಪ್ರೇಂದ್ರಾಃ ಸಪ್ತಾಸನ್ ಕುಲಪರ್ವತಾಃ ।**
**ಸಿದ್ಧಾಯತಾಃ ಸುಪರ್ವಾಣಃ ಸಿದ್ಧಸಂಘನಿಷೇವಿತಾಃ ॥ ೨ ॥**

---

## ನಲವತ್ತೊಂಭತ್ತನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು :–ಜಂಬೂ ದ್ವೀಪದ ವಿಸ್ತಾರಕ್ಕೆ ದ್ವಿಗುಣ ವಿಸ್ತಾರದಿಂದ ಕೂಡಿದ ಪ್ಲಕ್ಷ ದ್ವೀಪವು ಸುತ್ತಲೂ ಕ್ಷೀರ ಸಮುದ್ರವನ್ನು ಆವರಿಸಿ ನಿಂತುಕೊಂಡಿದೆ.

೨. ವಿಪ್ರೋತ್ತಮರೇ ! ಪ್ಲಕ್ಷದ್ವೀಪದಲ್ಲಿ ಅನೇಕ ಮಂದಿ ಸಿದ್ಧರಿಂದಲೂ, ದೇವತೆಗಳಿಂದಲೂ ಗುಂಪಾಗಿ ಸೇವಿಸಲ್ಪಟ್ಟ ಏಳು ಕುಲಪರ್ವತಗಳಿವೆ.

ಗೋಮೇದಃ ಪ್ರಥಮಸ್ತೇಷಾಂ ದ್ವಿತೀಯಶ್ಚಂದ್ರ ಉಚ್ಯತೇ ।
ನಾರದೋ ದುಂದುಭಿಶ್ಚೈವ ಮಣಿಮಾನ್ ಮೇಘನಿಸ್ವನಃ ॥ ೩ ॥

ವೈಭ್ರಾಜಃ ಸಪ್ತಮಸ್ತೇಷಾಂ ಬ್ರಹ್ಮಣೋಽತ್ಯಂತವಲ್ಲಭಃ ।
ತತ್ರ ದೇವರ್ಷಿಗಂಧರ್ವೈಃ ಸಿದ್ಧೈಶ್ಚ ಭಗವಾನಜಃ ॥ ೪ ॥

ಉಪಾಸ್ಯತೇ ಸ ವಿಶ್ವಾತ್ಮಾ ಸಾಕ್ಷೀ ಸರ್ವಸ್ಯ ವಿಶ್ವದೃಕ್ ।
ತೇಷು ಪುಣ್ಯಾ ಜನಪದಾ ಆಧಯೋ ವ್ಯಾಧಯೋ ನ ಚ ॥ ೫ ॥

ನ ತತ್ರ ಪಾಪಕರ್ತಾರಃ ಪುರುಷಾ ವೈ ಕಥಂಚನ ।
ತೇಷಾಂ ನದ್ಯಶ್ಚ ಸಪ್ತೈವ ವರ್ಷಾಣಾಂ ತು ಸಮುದ್ರಗಾಃ ॥ ೬ ॥

---

೩. ಆ ಏಳು ಕುಲಪರ್ವತಗಳಲ್ಲಿ, ಗೋಮೇದ, ಚಂದ್ರ, ನಾರದ, ದುಂದುಭಿ, ಮಣಿವರ್ಣ ಮತ್ತು ಮೇಘನಿಸ್ವನ ಎಂಬ ನಾಮಾಂಕಿತಗಳಾಗಿರುವ ಆರು ಪರ್ವತಗಳು ಸೇರಿಕೊಂಡಿವೆ.

೪. ಏಳನೆಯದಾದ ವೈಭ್ರಾಜ ಎಂಬ ಪರ್ವತವು ಎಲ್ಲಾ ಪರ್ವತಗಳಿಗಿಂತ ಬ್ರಹ್ಮದೇವನಿಗೆ ಅತ್ಯಂತ ಪ್ರಿಯವಾಗಿರುವುದು. ಅಲ್ಲಿ ದೇವ-ಋಷಿ-ಗಂಧರ್ವ ಮತ್ತು ಸಿದ್ಧರಿಂದ ಪೂಜ್ಯನಾದ ಬ್ರಹ್ಮನು ಸೇವಿಸಲ್ಪಡುತ್ತಾನೆ.

೫. ಅಲ್ಲಿ ವಿಶ್ವರೂಪಿಯೂ, ಸರ್ವ ಸಾಕ್ಷಿಯೂ ಪ್ರಪಂಚವನ್ನು ಪ್ರತ್ಯಕ್ಷವಾಗಿ ನೋಡುವವನೂ ಆದ ಬ್ರಹ್ಮದೇವನನ್ನು ಸೇವಿಸುತ್ತಾರೆ. ಅವುಗಳಲ್ಲಿ ಪವಿತ್ರವಾದ ದೇಶಗಳಲ್ಲಿ ವಾಸಮಾಡುವ ಪ್ರಜೆಗಳಿಗೆ ಆಧಿ-ವ್ಯಾಧಿಗಳ ಭಯವು ಇರುವುದಿಲ್ಲ.

೬. ಅಲ್ಲಿ ಪಾಪವನ್ನು ಮಾಡುವ ಮಾನವರು ಎಲ್ಲೆಲ್ಲಿಯೂ ಇಲ್ಲ. ಆ ದ್ವೀಪದ ವರ್ಷಗಳಲ್ಲಿ ಏಳು ಮಹಾನದಿಗಳು ಹರಿಯುತ್ತ ಸಮುದ್ರಕ್ಕೆ ಸೇರುತ್ತವೆ.

ತಾಸು ಬ್ರಹ್ಮರ್ಷಯೋ ನಿತ್ಯಂ ಪಿತಾಮಹಮುಪಾಸತೇ ।
ಅನುತಪ್ತಾಶಿಖೇ ಚೈವ ವಿಪಾಪಾ ತ್ರಿದಿವಾ ಕೃತಾ ॥ ೭ ॥

ಅಮೃತಾ ಸುಕೃತಾ ಚೈವ ನಾಮತಃ ಪರಿಕೀರ್ತಿತಾಃ ।
ಕ್ಷುದ್ರನದ್ಯಸ್ತ್ತು ವಿಖ್ಯಾತಾಃ ಸರಾಂಸಿ ಚ ಬಹೂನ್ಯಪಿ ॥ ೮ ॥

ನ ಚೈತೇಷು ಯುಗಾವಸ್ಥಾ ಪುರುಷಾ ವೈ ಚಿರಾಯುಷಃ ।
ಆರ್ಯಕಾಃ ಕುರುರಾಶ್ಚೈವ ವಿದೇಹಾ ಭಾವಿನಸ್ತಥಾ ॥ ೯ ॥

ಬ್ರಹ್ಮಕ್ಷತ್ರಿಯವಿಟ್ಛೂದ್ರಾಸ್ತಸ್ಮಿನ್ ದ್ವೀಪೇ ಪ್ರಕೀರ್ತಿತಾಃ ।
ಇಜ್ಯತೇ ಭಗವಾನೀಶೋ ವರ್ಣೈಸ್ತತ್ರ ನಿವಾಸಿಭಿಃ ॥ ೧೦ ॥

---

೭. ಅವುಗಳಲ್ಲಿ ಬ್ರಹ್ಮರ್ಷಿಗಳು ಯಾವಾಗಲೂ ಬ್ರಹ್ಮದೇವನನ್ನು ಪೂಜಿಸುತ್ತಾರೆ. ಆ ನದಿಗಳಲ್ಲಿ ಕೆಲವು ಅನುತಪ್ತಾ, ಶಿಖಾ, ವಿಪಾಪಾ, ತ್ರಿದಿವಾ ಮತ್ತು ಕೃತಾ ಎಂಬ ನಾಮಾಂಕಿತವಾಗಿವೆ.

೮. ಮಿಕ್ಕ ಎರಡು ನದಿಗಳು ಅಮೃತಾ, ಸುಕೃತಾ ಎಂಬ ಹೆಸರಿನಿಂದ ಕೀರ್ತಿಸಲ್ಪಟ್ಟಿವೆ. ಹಾಗೂ ಇಲ್ಲಿ ಅನೇಕ ಚಿಕ್ಕನದಿಗಳೂ ಸರೋವರಗಳೂ ಪ್ರಸಿದ್ಧವಾಗಿವೆ.

೯. ಆ ದೇಶಗಳಲ್ಲಿ ಯುಗಗಳ ಪರಿಣಾಮಗಳು ಆಗುವುದಿಲ್ಲ. ಅಲ್ಲಿರುವ ಮಾನವರು ಚಿರಜೀವಿಗಳಾಗಿರುವರು. ಆ ಪ್ರಜೆಗಳು ಆರ್ಯಕ, ಕುರುರ, ವಿದೇಹ, ಭಾವಿ ಎಂಬ ವರ್ಣಭೇದಗಳನ್ನು ಹೊಂದಿರುವರು.

೧೦. ಆರ್ಯಕ ಮುಂತಾದವರೇ ಆ ದ್ವೀಪದಲ್ಲಿ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ಕೀರ್ತಿಸಲ್ಪಟ್ಟಿದ್ದಾರೆ. ಅಲ್ಲಿ ವಾಸಮಾಡುವ ವರ್ಣಗಳಿಂದ ಭಗವಂತನಾದ ಈಶ್ವರನು ಪೂಜಿಸಲ್ಪಡುವನು.

ತೇಷಾಂ ಚ ಸೋಮಸಾಮ್ರಾಜ್ಯಂ ಸಾರೂಪ್ಯಂ ಮುನಿಪುಂಗವಾಃ ।
ಸರ್ವೇ ಧರ್ಮರತಾ ನಿತ್ಯಂ ಸರ್ವೇ ಮುದಿತಮಾನಸಾಃ ॥ ೧೧ ॥

ಪಂಚವರ್ಷಸಹಸ್ರಾಣಿ ಜೀವಂತಿ ಚ ನಿರಾಮಯಾಃ ।
ಪ್ಲಕ್ಷದ್ವೀಪಪ್ರಮಾಣಂ ತು ದ್ವಿಗುಣೇನ ಸಮಂತತಃ ॥ ೧೨ ॥

ಸಂವೇಷ್ಟ್ಯೇಕ್ಷುರಸಾಂಭೋಧಿಂ ಶಾಲ್ಮಲಿಃ ಸಂವ್ಯವಸ್ಥಿತಃ ।
ಸಪ್ತವರ್ಷಾಣಿ ತತ್ರಾಪಿ ಸಪ್ತೈವ ಕುಲಪರ್ವತಾಃ ॥ ೧೩ ॥

ಋಜ್ವಾಯತಾಃ ಸುಪರ್ವಾಣಃ ಸಪ್ತ ನದ್ಯಶ್ಚ ಸುವ್ರತಾಃ ।
ಕುಮುದಶ್ಚಾನ್ನದಶ್ಚೈವ ತೃತೀಯಶ್ಚ ಬಲಾಹಕಃ ॥ ೧೪ ॥

---

೧೧. ಮುನಿಶ್ರೇಷ್ಠರೇ ! ಆ ಪ್ರಜೆಗಳಿಗೆ ಚಂದ್ರನ ಸಾಮ್ರಾಜ್ಯ ಮತ್ತು ಸಾರೂಪ್ಯ ಸುಖಗಳು ದೊರೆಯುವುವು. ಎಲ್ಲ ಮಾನವರು ಧರ್ಮದಲ್ಲಿ ಆಸಕ್ತರಾಗಿ ಯಾವಾಗಲೂ ಸುಖಗೊಂಡ ಮಾನಸವುಳ್ಳವರಾಗಿರುವರು.

೧೨. ಮತ್ತು ಐದು ಸಹಸ್ರ ವರ್ಷಗಳವರೆಗೆ ನೀರೋಗರಾಗಿ ಜೀವಿಸುವರು. ಇಂತಹ ಪ್ಲಕ್ಷ ದ್ವೀಪದ ಪ್ರಮಾಣಕ್ಕಿಂತ ದ್ವಿಗುಣ ಪ್ರಮಾಣವನ್ನು ಹೊಂದಿ ಮತ್ತೊಂದು ದ್ವೀಪವಿರುವುದು.

೧೩. ಶಾಲ್ಮಲಿ ಎಂಬ ಆ ದ್ವೀಪವು ಇಕ್ಷುರಸದ ಸಮುದ್ರವನ್ನು ಸುತ್ತಿಕೊಂಡು ಇರುವುದು. ಆ ದ್ವೀಪದಲ್ಲಿಯೂ ಏಳು ವರ್ಷಗಳೂ, ಏಳು ವರ್ಷಪರ್ವತಗಳೂ ಇರುತ್ತವೆ.

೧೪. ಉತ್ತಮವಾದ ವ್ರತನಿಯಮಧಾರಿಗಳೇ ! ಆ ಪರ್ವತಗಳು ಶ್ಲಾಘ್ಯವಾದ ಪರ್ವ ಭೂಮಿಗಳಿಂದ ಕೂಡಿ ಸರಳ ಮತ್ತು ದೀರ್ಘಗಳಾಗಿವೆ. ಮತ್ತು ಈ ಪರ್ವತಗಳಲ್ಲಿ ಏಳು ಮಹಾನದಿಗಳು ಹರಿಯುತ್ತವೆ. ಈ ಪರ್ವತಗಳಲ್ಲಿ ಕೆಲವು ಕುಮುದ, ಅನ್ನದ, ಬಲಾಹಕಗಳೆಂದು ಪ್ರಸಿದ್ಧವಾಗಿವೆ.

ದ್ರೋಣಃ ಕಂಸಸ್ತು ಮಹಿಷಃ ಕಕುದ್ಮಾನ್ ಸಪ್ತಮಸ್ತಥಾ ।
ಯೋನೀ ತೋಯಾ ವಿತೃಷ್ಣಾ ಚ ಚಂದ್ರಾ ಶುಕ್ಲಾ ವಿಮೋಚನೀ ॥೧೫॥

ನಿವೃತ್ತಿಶ್ಚೇತಿ ತಾ ನದ್ಯಃ ಸ್ಮೃತಾಃ ಪಾಪಹರಾ ನೃಣಾಮ್ ।
ನ ತೇಷು ವಿದ್ಯತೇ ಲೋಭಃ ಕ್ರೋಧೋ ವಾ ದ್ವಿಜಸತ್ತಮಾಃ ॥ ೧೬ ॥

ನ ಚೈವಾಸ್ತಿ ಯುಗಾವಸ್ಥಾ ಜನಾ ಜೀವಂತ್ಯನಾಮಯಾಃ ।
ಯಜಂತಿ ಸತತಂ ತತ್ರ ವರ್ಣಾ ವಾಯುಂ ಸನಾತನಮ್ ॥ ೧೭ ॥

ತೇಷಾಂ ತತ್ಸಾಧನಂ ಯುಕ್ತಂ ಸಾರೂಪ್ಯಂ ಚ ಸಲೋಕತಾ ।
ಕಪಿಲಾ ಬ್ರಾಹ್ಮಣಾಃ ಪ್ರೋಕ್ತಾ ರಾಜಾನಶ್ಚಾರುಣಾಸ್ತಥಾ ॥ ೧೮ ॥

---

೧೫ ಮಿಕ್ಕ ಪರ್ವತಗಳಿಗೆ ದ್ರೋಣ, ಕಂಸ, ಮಹಿಷ ಮತ್ತು ಕುಕುದ್ಮಾ ಎಂಬ ನಾಮಾಂಕನಗಳಿವೆ. ನದಿಗಳಲ್ಲಿ ಕೆಲವಕ್ಕೆ ಯೋನಿ, ತೋಯಾ, ವಿತೃಷ್ಣಾ, ಚಂದ್ರಾ, ಶುಕ್ಲಾ, ವಿಮೋಚನೀ ಎಂಬ ಹೆಸರುಗಳು ಪ್ರಸಿದ್ಧವಾಗಿವೆ.

೧೬. ಏಳನೆಯ ನದಿಯು ನಿವೃತ್ತಿ ಎಂದು ಕರೆಯಲ್ಪಡುವುದು. ಈ ಮಹಾ ನದಿಗಳು ಮನುಷ್ಯರ ಪಾಪಗಳನ್ನು ಕಳೆಯುವುವು. ದ್ವಿಜಶ್ರೇಷ್ಠರೇ ! ಇಲ್ಲಿ ವಾಸ ಮಾಡುವ ಪ್ರಜೆಗಳಿಗೆ ಕ್ರೋಧ, ಲೋಭ ಮುಂತಾದ ದೋಷಗಳು ಸಂಭವಿಸುವುದಿಲ್ಲ.

೧೭. ಹಾಗೂ ಯುಗಗಳ ಅವಸ್ಥೆಗಳು ಬರುವುದಿಲ್ಲ. ಜನರು ವ್ಯಾಧಿಯಿಲ್ಲದೆ ಸುಖವಾಗಿ ಜೀವಿಸುವರು. ಅಲ್ಲಿರುವ ವರ್ಣಗಳು ಸನಾತನನಾದ ವಾಯುದೇವನನ್ನು ಸಂತತವಾಗಿ ಪೂಜಿಸುತ್ತಾರೆ.

೧೮. ಮತ್ತು ವಾಯುದೇವನ ಸಾಯುಜ್ಯ, ಸಾರೂಪ್ಯ, ಸಾಲೋಕ್ಯ ಮುಕ್ತಿಗಳನ್ನು ಹೊಂದುವರು. ಅಲ್ಲಿರುವ ಬ್ರಾಹ್ಮಣರು, ಕಪಿಲವರ್ಣವುಳ್ಳವರೂ, ಕ್ಷತ್ರಿಯರು ರಕ್ತವರ್ಣವುಳ್ಳವರೂ ಆಗಿದ್ದಾರೆ-ಎಂದು ಹೇಳಲ್ಪಟ್ಟಿರುವರು.

ಪೀತಾ ವೈಶ್ಯಾಃ ಸ್ಮೃತಾಃ ಕೃಷ್ಣಾ ದ್ವೀಪೇऽಸ್ಮಿನ್ ವೃಷಲಾ ದ್ವಿಜಾಃ ।
ಶಾಲ್ಮಲಸ್ಯ ತು ವಿಸ್ತಾರಾದ್ದ್ವಿಗುಣೇನ ಸಮಂತತಃ ॥ ೧೯ ॥

ಸಂವೇಷ್ಟ್ಯ ತು ಸುರೋದಾಬ್ಧಿಂ ಕುಶದ್ವೀಪೋ ವ್ಯವಸ್ಥಿತಃ ।
ವಿದ್ರುಮಶ್ಚೈವ ಹೇಮಶ್ಚ ದ್ಯುತಿಮಾನ್ ಪುಷ್ಪವಾಂಸ್ತಥಾ ॥ ೨೦ ॥

ಕುಶೇಶಯೋ ಹರಿಶ್ಚೈವ ಮಂದರಃ ಸಪ್ತ ಪರ್ವತಾಃ ।
ಧೂತಪಾಪಾ ಶಿವಾ ಚೈವ ಪವಿತ್ರಾ ಸಮ್ಮಿತಾ ತಥಾ ॥ ೨೧ ॥

ತಥಾ ವಿದ್ಯುತ್ಪ್ರಭಾ ರಾಮಾ ಮಹಾನದ್ಯಶ್ಚ ಸಪ್ತ ವೈ ।
ಅನ್ಯಾಶ್ಚ ಶತಶೋ ವಿಪ್ರಾ ನದ್ಯೋ ಮಣಿಜಲಾಃ ಶುಭಾಃ ॥ ೨೨ ॥

---

೧೯. ದ್ವಿಜರೇ ! ಈ ದ್ವೀಪದಲ್ಲಿರುವ ವೈಶ್ಯರಿಗೆ ಪೀತವರ್ಣವೂ ಶೂದ್ರರಿಗೆ ಕಪ್ಪುವರ್ಣವೂ ಇರುವುದೆಂದು ಸ್ಮರಿಸಲ್ಪಟ್ಟಿದೆ. ಈ ಶಾಲ್ಮಲ ದ್ವೀಪದ ವಿಸ್ತಾರಕ್ಕಿಂತ ಇದರ ಸುತ್ತಲೂ ದ್ವಿಗುಣ ಪರಿಮಾಣದಿಂದ ಮತ್ತೊಂದು ದ್ವೀಪವಿರುವುದು.

೨೦. ಕುಶದ್ವೀಪವೆಂಬ ಆ ದ್ವೀಪವು ಸುರಾ ಸಮುದ್ರವನ್ನು ವೇಷ್ಟನಮಾಡಿ ಕೊಂಡಿದೆ. ಅಲ್ಲಿರುವ ಏಳು ವರ್ಷಪರ್ವತಗಳಲ್ಲಿ ನಾಲ್ಕು ಪರ್ವತಗಳಿಗೆ ವಿದ್ರುಮ, ಹೇಮ, ದ್ಯುತಿಮಾ೯ ಪುಷ್ಪವಾ೯ ಎಂಬ ನಾಮಾಂಕನಗಳು ಇರುತ್ತವೆ.

೨೧. ಮಿಕ್ಕ ಮೂರು ಪರ್ವತಗಳ ಹೆಸರು ಕುಶೇಶಯ, ಹರಿ, ಮಂದರ, ಎಂಬುದಾಗಿ ಪ್ರಸಿದ್ಧವಾಗಿದೆ. ಹಾಗೂ ಅಲ್ಲಿ ಹರಿಯುವ ನದಿಗಳ ಪೈಕಿ ಧೂತ ಪಾಪಾ, ಶಿವಾ, ಪವಿತ್ರಾ, ಸಮ್ಮಿತಾ ಎಂಬ ನಾಮಾಂಕಿತವಾದ ನದಿಗಳು ಸೇರಿವೆ.

೨೨. ವಿಪ್ರರೇ ! ಮತ್ತು ವಿದ್ಯುತ್, ಪ್ರಭಾ, ರಾಮಾ, ಎಂಬ ನದಿಗಳು ಸೇರಿ ಏಳು ಮಹಾನದಿಗಳು ಅಲ್ಲಿ ಹರಿಯುತ್ತಿವೆ. ಮಣಿಮಯವಾದ ಜಲವುಳ್ಳ ಮಂಗಳಕರವಾದ ಇತರ ಅನೇಕ ನದಿಗಳು ಅಲ್ಲಿ ಹರಿಯುತ್ತಿವೆ.

ತಾಸು ಬ್ರಹ್ಮಾಣಮೀಶಾನಂ ದೇವಾದ್ಯಾಃ ಪರ್ಯುಪಾಸತೇ ।
ಬ್ರಾಹ್ಮಣಾ ದ್ರವಿಣೋ ವಿಪ್ರಾಃ ಕ್ಷತ್ರಿಯಾಃ ಶುಷ್ಮಿಣಸ್ತಥಾ ॥ ೨೩ ॥

ವೈಶ್ಯಾಃ ಸ್ತೋಭಾಸ್ತು ಮಂದೇಹಾಃ ಶೂದ್ರಾಸ್ತತ್ರ ಪ್ರಕೀರ್ತಿತಾಃ ।
ನರೋಽಪಿ ಜ್ಞಾನಸಂಪನ್ನಾ ಮೈತ್ರಾದಿಗುಣಸಂಯುತಾಃ ॥ ೨೪ ॥

ಯಥೋಕ್ತಕಾರಿಣಃ ಸರ್ವೇ ಸರ್ವೇ ಭೂತಹಿತೇ ರತಾಃ ।
ಯಜಂತಿ ಯಜ್ಞೈರ್ವಿವಿಧೈರ್ಬ್ರಹ್ಮಾಣಂ ಪರಮೇಷ್ಠಿನಮ್ ॥ ೨೫ ॥

ತೇಷಾಂ ಚ ಬ್ರಹ್ಮಸಾಯುಜ್ಯಂ ಸಾರೂಪ್ಯಂ ಚ ಸಲೋಕತಾ ।
ಕುಶದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ಸಮಂತತಃ ॥ ೨೬ ॥

---

೨೩. ಆ ನದೀತೀರಗಳಲ್ಲಿ ದೇವಾದಿಗಳು ಸರ್ವೇಶ್ವರನಾದ ಬ್ರಹ್ಮದೇವನನ್ನು ಅರ್ಚಿಸುತ್ತಾರೆ. ಅಲ್ಲಿರುವ ಬ್ರಾಹ್ಮಣರು ದ್ರವಿಣ ಎಂಬುದಾಗಿಯೂ ಕ್ಷತ್ರಿಯರು ಶುಷ್ಮೀ ಎಂಬುದಾಗಿಯೂ ಕರೆಯಲ್ಪಡುವರು.

೨೪. ಹಾಗೆ ವೈಶ್ಯರು ಸ್ತೋಭ ಎಂಬುದಾಗಿಯೂ, ಶೂದ್ರರು ಮಂದೇಹ ಎಂಬುದಾಗಿಯೂ ಕೀರ್ತಿಸಲ್ಪಟ್ಟಿರುವರು. ಆ ಮಾನವರೆಲ್ಲರೂ ಜ್ಞಾನಸಂಪನ್ನರೂ ಮೈತ್ರಿ ಮುಂತಾದ ಗುಣಗಳಿಂದ ಶೋಭಿತರೂ ಆಗಿದ್ದಾರೆ.

೨೫. ಸಮಸ್ತ ಪ್ರಜೆಗಳೂ ಪ್ರಾಣಿಗಳ ಹಿತದಲ್ಲಿ ತತ್ಪರರಾಗಿ ವಿಹಿತ ಕರ್ಮಗಳನ್ನು ಯಥಾವಿಧಿಯಾಗಿ ಮಾಡುತ್ತಾ ಅನೇಕ ಯಜ್ಞಾದಿ ಕರ್ಮಗಳಿಂದ ಉತ್ತಮ ಸ್ಥಾನದಲ್ಲಿರುವ ಬ್ರಹ್ಮನನ್ನು ಸೇವಿಸುತ್ತಾರೆ.

೨೬. ಮತ್ತು ಬ್ರಹ್ಮನ ಸಾಯುಜ್ಯ, ಸಾರೂಪ್ಯ, ಸಾಲೋಕ್ಯಗಳೆಂಬ ಮುಕ್ತಿ ಫಲವನ್ನು ಹೊಂದುವರು. ಈ ಕುಶದ್ವೀಪದ ಹೊರಭಾಗದಲ್ಲಿ ಮತ್ತೊಂದು ದ್ವೀಪವು ಸುತ್ತಲೂ ದ್ವಿಗುಣ ಪರಿಮಾಣದಿಂದ ಕೂಡಿದೆ.

ಕ್ರೌಂಚದ್ವೀಪಃ ಸ್ಥಿತೋ ವಿಪ್ರಾ ವೇಷ್ಟಯಿತ್ವಾ ಘೃತೋದಧಿಮ್ ।
ಕ್ರೌಂಚೋ ವಾಮನಕಶ್ಚೈವ ತೃತೀಯಶ್ಚಾಧಿಕಾರಿಕಃ ॥ ೨೭ ॥

ದೇವಾಬ್ದಶ್ಚ ವಿವೇದಶ್ಚ ಪುಂಡರೀಕಸ್ತಥೈವ ಚ ।
ನಾಮ್ನಾ ಚ ಸಪ್ತಮಃ ಪ್ರೋಕ್ತಃ ಪರ್ವತೋ ದುಂದುಭಿಸ್ವನಃ ॥ ೨೮ ॥

ಗೌರೀ ಕುಮುದ್ವತೀ ಚೈವ ಸಂಧ್ಯಾ ರಾತ್ರಿರ್ಮನೋಜವಾ ।
ಕೋಭಿಶ್ಚ ಪುಂಡರೀಕಾಕ್ಷಾ ನದ್ಯಃ ಪ್ರಾಧಾನ್ಯತಃ ಸ್ಮೃತಾಃ ॥ ೨೯ ॥

ಪುಷ್ಕಲಾಃ ಪುಷ್ಕರಾ ಧನ್ಯಾಸ್ತಿಷ್ಯಾ ವರ್ಣಾಃ ಕ್ರಮೇಣ ವೈ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚೈವ ದ್ವಿಜೋತ್ತಮಾಃ॥೩೦॥

---

೨೭. ವಿಪ್ರರೇ ! ಕ್ರೌಂಚದ್ವೀಪವೆಂದು ಪ್ರಸಿದ್ಧವಾದ ಆ ದ್ವೀಪವು ಘೃತ ಸಮುದ್ರವನ್ನು ಆವರಿಸಿಕೊಂಡಿದೆ. ಅಲ್ಲಿರುವ ವರ್ಷಪರ್ವತಗಳಲ್ಲಿ ಮೂರು ಪರ್ವತಗಳಿಗೆ ಕ್ರಮವಾಗಿ ಕ್ರೌಂಚ, ವಾಮನಕ, ಅಧಿಕಾರಿಕ ಎಂದು ಹೆಸರು ಪ್ರಸಿದ್ಧವಾಗಿದೆ.

೨೮. ಹಾಗೂ ಮಿಕ್ಕ ಪರ್ವತಗಳು ದೇವಾಬ್ದ, ವಿವೇದ, ಪುಂಡರೀಕ ಮತ್ತು ದುಂದುಭಿಸ್ವನ ಎಂಬ ನಾಮಗಳಿಂದ ಅಂಕಿತಗಳಾಗಿ ಪ್ರಸಿದ್ಧಿ ಹೊಂದಿವೆ.

೨೯. ಈ ದ್ವೀಪದಲ್ಲಿ ಹರಿಯುವ ನದಿಗಳಲ್ಲಿ ಗೌರೀ, ಕುಮುದ್ವತೀ, ಸಂಧ್ಯಾ, ರಾತ್ರಿ, ಮನೋಜವಾ, ಕೋಭಿ, ಪುಂಡರೀಕಾಕ್ಷ ಎಂಬ ಮಹಾನದಿಗಳು. ಪ್ರಧಾನವಾಗಿ ಸ್ಮರಿಸಲ್ಪಟ್ಟಿವೆ.

೩೦. ಶ್ರೇಷ್ಠರಾದ ದ್ವಿಜರೇ ! ಈ ದ್ವೀಪವಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಪುಷ್ಕಲ, ಪುಷ್ಕರ, ಧನ್ಯ ಮತ್ತು ತಿಷ್ಯ ಎಂಬ ವರ್ಣಗಳಿಂದ ಕ್ರಮವಾಗಿ ಪ್ರಸಿದ್ಧಿ ಹೊಂದಿರುವರು.

ಅರ್ಚಯಂತಿ ಮಹಾದೇವಂ ಯಜ್ಞದಾನಶಮಾದಿಭಿಃ ।
ವ್ರತೋಪವಾಸೈರ್ವಿವಿಧೈರ್ಹೋಮೈಶ್ಚ ಪಿತೃತರ್ಪಣೈಃ ॥ ೩೧ ॥

ತೇಷಾಂ ವೈ ರುದ್ರಸಾಯುಜ್ಯಂ ಸಾರೂಪ್ಯಂ ಚಾತಿದುರ್ಲಭಮ್ ।
ಸಲೋಕತಾ ಚ ಸಾಮೀಪ್ಯಂ ಜಾಯತೇ ತತ್ಪ್ರಸಾದತಃ ॥ ೩೨ ॥

ಕ್ರೌಂಚದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ಸಮಂತತಃ ।
ಶಾಕದ್ವೀಪಃ ಸ್ಥಿತೋ ವಿಪ್ರಾ ಆವೇಷ್ಟ್ಯ ದಧಿಸಾಗರಮ್ ॥ ೩೩ ॥

ಉದಯೋ ರೈವತಶ್ಚೈವ ಶ್ಯಾಮಾಕಾಸ್ತಗಿರಿಸ್ತಥಾ ।
ಆಂಬಿಕೇಯಸ್ತಥಾ ರಮ್ಯಃ ಕೇಸರೀ ಚೇತಿ ಪರ್ವತಾಃ ॥ ೩೪ ॥

---

೩೧. ಈ ವರ್ಣಗಳು ಯಜ್ಞ, ದಾನ, ಶಮ, ವ್ರತ, ಉಪವಾಸ, ಹೋಮ, ಪಿತೃತರ್ಪಣ, ಮುಂತಾದ ನಾನಾವಿಧ ಕರ್ಮಗಳಿಂದ ಮಹಾದೇವನನ್ನು ಅರ್ಚಿಸುತ್ತಾರೆ.

೩೨. ಈ ಸತ್ಕರ್ಮಗಳಿಗೆ ರುದ್ರನ ಪ್ರಸಾದದಿಂದ ಸಾಯುಜ್ಯ, ಸಾರೂಪ್ಯ, ಸಾಲೋಕ್ಯ ಮತ್ತು ಸಾಮೀಪ್ಯವೆಂಬ ನಾಲ್ಕು ವಿಧದ ದುರ್ಲಭವಾದ ಮುಕ್ತಿಯು ಫಲವಾಗಿ ಲಭಿಸುವುದು.

೩೩. ವಿಪ್ರರೇ ! ಕ್ರೌಂಚದ್ವೀಪದ ಸುತ್ತಲೂ ಅದಕ್ಕಿಂತ ದ್ವಿಗುಣ ವಿಸ್ತಾರದಿಂದ ಕೂಡಿದ ಶಾಕದ್ವೀಪವು ದಧಿಸಾಗರವನ್ನು ಸುತ್ತಿಕೊಂಡು ನಿಂತಿರುವುದು.

೩೪. ಶಾಕದ್ವೀಪದಲ್ಲಿ ಉದಯ, ರೈವತ, ಶ್ಯಾಮ, ಕಾಸ್ತಗಿರಿ, ಆಂಬಿಕೇಯ, ರಮ್ಯ ಮತ್ತು ಕೇಸರಿ ಎಂಬ ನಾಮಾಂಕಿತಗಳಾಗಿ ಏಳು ಕುಲಪರ್ವತಗಳಿರುತ್ತವೆ.

ಸುಕುಮಾರೀ ಕುಮಾರೀ ಚ ನಲಿನೀ ವೇಣಿಕಾ ತಥಾ ।
ಇಕ್ಷುಕಾ ಧೇನುಕಾ ಚೈವ ಗಭಸ್ತಿಶ್ಚೇತಿ ನಿಮ್ನಗಾಃ ॥ ೩೫ ॥

ಆಸಾಂ ಪಿಬಂತಃ ಸಲಿಲಂ ಜೀವಂತಿ ತತ್ರ ಮಾನವಾಃ ।
ಅನಾಮಯಾಶ್ಚಾಶೋಕಾಶ್ಚ ರಾಗದ್ವೇಷವಿವರ್ಜಿತಾಃ ॥ ೩೬ ॥

ಮೃಗಾಶ್ಚ ಮಗಧಾಶ್ಚೈವ ಮಾನಸಾ ಮಂದಗಾಸ್ತಥಾ ।
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾತ್ರ ಕ್ರಮೇಣ ತು ॥ ೩೭ ॥

ಯಜಂತಿ ಸತತಂ ದೇವಂ ಸರ್ವಲೋಕೈಕಸಾಕ್ಷಿಣಮ್ ।
ವ್ರತೋಪವಾಸೈರ್ವಿವಿಧೈರ್ದೇವದೇವಂ ದಿವಾಕರಮ್ ॥ ೩೮ ॥

---

೩೫. ಹಾಗೂ ಸುಕುಮಾರೀ, ಕುಮಾರೀ, ನಳಿನೀ, ವೇಣುಕಾ, ಇಕ್ಷುಕಾ, ಧೇನುಕಾ, ಮತ್ತು ಗಭಸ್ತಿ ಎಂಬ ಪವಿತ್ರ ನಾಮಾಂಕಿತಗಳಾದ ಏಳು ಮಹಾ ನದಿಗಳು ಪ್ರಧಾನವಾಗಿವೆ.

೩೬. ಆ ದ್ವೀಪದ ಮಾನವರು ಈ ಪುಣ್ಯನದಿಯ ಜಲವನ್ನು ಪಾನಮಾಡಿ ರೋಗ, ಶೋಕ, ರಾಗ, ದ್ವೇಷ ಮುಂತಾದ ದೋಷಗಳಿಂದ ವರ್ಜಿತರಾಗಿ ಜೀವಿಸುತ್ತಾರೆ.

೩೭. ಅಲ್ಲಿರುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಕ್ರಮವಾಗಿ ಮೃಗ, ಮಗಧ, ಮಾನಸ ಮತ್ತು ಮಂದಗ ಎಂಬ ವರ್ಣಗಳಿಂದು ಪ್ರಸಿದ್ಧರಾಗಿರುವರು.

೩೮. ಆ ಚಾತುರ್ವರ್ಣ್ಯದವರು ವ್ರತ, ಉಪವಾಸ ಮುಂತಾದ ಅನೇಕ ಸತ್ಕರ್ಮಗಳಿಂದ ಸರ್ವಲೋಕಗಳಿಗೆ ಸಾಕ್ಷಿಯೂ, ದೇವಾಧಿದೇವನೂ ಆದ ಸೂರ್ಯದೇವನನ್ನು ಸಂತತವಾಗಿ ಪೂಜಿಸುತ್ತಾರೆ.

ತೇಷಾಂ ವೈ ಸೂರ್ಯಸಾಯುಜ್ಯಂ ಸಾಮೀಪ್ಯಂ ಚ ಸರೂಪತಾ ।
ಸಲೋಕತಾ ಚ ವಿಪ್ರೇಂದ್ರಾ ಜಾಯತೇ ತತ್ಪ್ರಸಾದತಃ ॥ ೩೯ ॥

ಶಾಕದ್ವೀಪಂ ಸಮಾವೃತ್ಯ ಕ್ಷೀರೋದಃ ಸಾಗರಃ ಸ್ಥಿತಃ ।
ಶ್ವೇತದ್ವೀಪಂ ಚ ತನ್ಮಧ್ಯೇ ನಾರಾಯಣಪರಾಯಣಾಃ ॥ ೪೦ ॥

ತತ್ರ ಪುಣ್ಯಾ ಜನಪದಾ ನಾನಾಶ್ಚರ್ಯಸಮನ್ವಿತಾಃ ।
ಶ್ವೇತಾಸ್ತತ್ರ ನರಾ ನಿತ್ಯಂ ಜಾಯಂತೇ ವಿಷ್ಣುತತ್ಪರಾಃ ॥ ೪೧ ॥

ನಾಧಯೋ ವ್ಯಾಧಯಸ್ತತ್ರ ಜರಾಮೃತ್ಯುಭಯಂ ನ ಚ ।
ಕ್ರೋಧಲೋಭವಿನಿರ್ಮುಕ್ತಾ ಮಾಯಾಮಾತ್ಸರ್ಯವರ್ಜಿತಾಃ ॥ ೪೨ ॥

---

೩೯. ವಿಪ್ರೋತ್ತಮರೇ ! ಅವರು ಸೂರ್ಯನಾರಾಯಣನ ಅನುಗ್ರಹದಿಂದ ಸೂರ್ಯನ ಸಾಯುಜ್ಯ, ಸಾಮೀಪ್ಯ, ಸಾರೂಪ್ಯ, ಸಾಲೋಕ್ಯವೆಂಬ ಶ್ರೇಯಸ್ಸನ್ನು ಹೊಂದುವರು.

೪೦. ಶ್ರೀಮನ್ನಾರಾಯಣನಲ್ಲಿ ಅತಿಶಯವಾದ ಭಕ್ತಿಯುಳ್ಳವರೇ ! ಶಾಕ ದ್ವೀಪವನ್ನು ಸುತ್ತಿಕೊಂಡು ಕ್ಷೀರಸಮುದ್ರವು ಪ್ರಕಾಶಿಸುತ್ತಿರುವುದು. ಆ ಕ್ಷೀರ ಸಮುದ್ರದ ಮಧ್ಯದಲ್ಲಿ ಶ್ವೇತದ್ವೀಪವೆಂಬ ಒಂದು ದ್ವೀಪವಿರುವುದು.

೪೧. ಆ ದ್ವೀಪದಲ್ಲಿ ವಿವಿಧ ಆಶ್ಚರ್ಯಗಳಿಂದಕೂಡಿದ ಪವಿತ್ರವಾದ ಅನೇಕ ದೇಶಗಳಿವೆ. ಅವುಗಳಲ್ಲಿ ಶ್ವೇತವರ್ಣದವರೂ ಮತ್ತು ಯಾವಾಗಲೂ ವಿಷ್ಣುಭಕ್ತರೂ ಆದ ಜನಗಳು ಹುಟ್ಟುತ್ತಾರೆ.

೪೨. ಆ ಜನಗಳು ಕ್ರೋಧ, ಲೋಭ ಮಾಯಾ, ಮಾತ್ಸರ್ಯ ಮುಂತಾದ ಮನೋವಿಕಾರಗಳಿಂದ ವರ್ಜಿತರಾಗಿ ಆಧಿ, ವ್ಯಾಧಿ, ಜರಾ, ಮೃತ್ಯುಗಳ ಭಯವಿಲ್ಲದೆ ಸುಖವಾಗಿ ಜೀವಿಸುತ್ತಾರೆ.

ನಿತ್ಯಪುಷ್ಟಾ ನಿರಾತಂಕಾ ನಿತ್ಯಾನಂದಾಶ್ಚ ಭೋಗಿನಃ ।
ನಾರಾಯಣಸಮಾಃ ಸರ್ವೇ ನಾರಾಯಣಪರಾಯಣಾಃ ॥ ೪೩ ॥

ಕೇಚಿದ್ಧ್ಯಾನಪರಾ ನಿತ್ಯಂ ಯೋಗಿನಃ ಸಂಯತೇಂದ್ರಿಯಾಃ ।
ಕೇಚಿಜ್ಜಪಂತಿ ತಪ್ಯಂತಿ ಕೇಚಿದ್ವಿಜ್ಞಾನಿನೋಽಪರೇ ॥ ೪೪ ॥

ಅನ್ಯೇ ನಿರ್ಬೀಜಯೋಗೇನ ಬ್ರಹ್ಮಭಾವೇನ ಭಾವಿತಾಃ ।
ಧ್ಯಾಯಂತಿ ತತ್ಪರಂ ಬ್ರಹ್ಮ ವಾಸುದೇವಂ ಸನಾತನಮ್ ॥ ೪೫ ॥

ಏಕಾಂತಿನೋ ನಿರಾಲಂಬಾ ಮಹಾಭಾಗವತಾಃ ಪರೇ ।
ಪಶ್ಯಂತಿ ತತ್ಪರೇ ಬ್ರಹ್ಮ ವಿಷ್ಣ್ವಾಖ್ಯಂ ತಮಸಃ ಪರಮ್ ॥ ೪೬ ॥

---

೪೩. ಮತ್ತು ನಿತ್ಯಪುಷ್ಟರೂ, ಆತಂಕಶೂನ್ಯರೂ, ಭೋಗಿಗಳೂ, ನಿತ್ಯಾನಂದಾನುಭವಿಗಳೂ ಆದ ಸಮಸ್ತ ಜನರು ನಾರಾಯಣನಲ್ಲಿ ಪರಮಾದರವುಳ್ಳವರೂ, ನಾರಾಯಣನಿಗೆ ಸಮಾನರೂ ಆಗಿರುವರು.

೪೪. ಕೆಲವರು ಜಿತೇಂದ್ರಿಯರಾದ ಯೋಗಿಗಳಾಗಿ ಯಾವಾಗಲೂ ನಾರಾಯಣನ ಧ್ಯಾನದಲ್ಲಿ ಆಸಕ್ತರಾಗುವರು. ಮತ್ತೆ ಕೆಲವರು ಜ್ಞಾನಿಗಳಾಗಿ ಜಪ-ತಪಗಳನ್ನು ಆಚರಿಸುವರು.

೪೫. ಇನ್ನು ಕೆಲವರು ನಿರ್ಬೀಜವೆಂಬ ನಿರ್ವಿಕಲ್ಪ ಸಮಾಧಿಯಲ್ಲಿ ಬ್ರಹ್ಮಭಾವನೆಯಿಂದ ಕೂಡಿದವರಾಗಿ ಸನಾತನವೂ, ಜಗದ್ರಕ್ಷಕವೂ ಆದ ಪರಬ್ರಹ್ಮತತ್ವವನ್ನು ಧ್ಯಾನಿಸುತ್ತಾರೆ.

೪೬. ಇನ್ನು ಕೆಲವರು ಏಕಾಂತಿಯತಿಗಳೂ, ಆಲಂಬಶೂನ್ಯರೂ, ಮಹಾಭಗವದ್ಭಕ್ತರೂ ಆಗಿ ವಿಷ್ಣು ಎಂಬ ಹೆಸರುಳ್ಳ ತಮೋಗುಣಾತೀತವಾದ ಪರಬ್ರಹ್ಮವಸ್ತುವನ್ನು ಸಾಕ್ಷಾತ್ಕರಿಸುತ್ತಾರೆ.

ಸರ್ವೇ ಚತುರ್ಭುಜಾಕಾರಾಃ ಶಂಖಚಕ್ರಗದಾಧರಾಃ ।
ಸುಪೀತವಾಸಸಃ ಸರ್ವೇ ಶ್ರೀವತ್ಸಾಂಕಿತವಕ್ಷಸಃ ॥ ೪೭ ॥

ಅನ್ಯೇ ಮಹೇಶ್ವರಪರಾಸ್ತ್ರಿಪುಂಡ್ರಾಂಕಿತಮಸ್ತಕಾಃ ।
ಸುಯೋಗಾದ್ಭೂತಿಕರಣಾ ಮಹಾಗರುಡವಾಹನಾಃ ॥ ೪೮ ॥

ಸರ್ವೇ ಶಕ್ತಿಸಮಾಯುಕ್ತಾ ನಿತ್ಯಾನಂದಾಶ್ಚ ನಿರ್ಮಲಾಃ ।
ವಸಂತಿ ತತ್ರ ಪುರುಷಾ ವಿಷ್ಣೋರಂತರಚಾರಿಣಃ ॥ ೪೯ ॥

ತತ್ರ ನಾರಾಯಣಸ್ಯಾನ್ಯದ್ದುರ್ಗಮಂ ದುರತಿಕ್ರಮಮ್ ।
ನಾರಾಯಣಂ ನಾಮ ಪುರಂ ಪ್ರಾಸಾದೈರುಪಶೋಭಿತಮ್ ॥ ೫೦ ॥

---

೪೭. ಅಲ್ಲಿರುವ ಸಮಸ್ತ ಮಾನವರೂ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ ನಾಲ್ಕು ಭುಜಗಳಿಂದಲೂ, ಪೀತಾಂಬರದಿಂದಲೂ, ಶ್ರೀ ವತ್ಸಲಾಂಛನದಿಂದ ಅಂಕಿತವಾದ ವಕ್ಷಸ್ಥಳದಿಂದಲೂ ಕೂಡಿದ ವಿಗ್ರಹವುಳ್ಳವರಾಗಿದ್ದಾರೆ.

೪೮. ಮತ್ತೆ ಕೆಲವರು ಮಹೇಶ್ವರಭಕ್ತರೂ, ಶಿರದಲ್ಲಿ ತ್ರಿಪುಂಡ್ರರೇಖೆಗಳಿಂದ ಅಂಕಿತರೂ, ಧ್ಯಾನಾರ್ಥವಾಗಿ ಭಸ್ಮದ ಉಪಕರಣವುಳ್ಳವರೂ ಮತ್ತು ಗರುಡವಾಹನಾರೂಢರೂ ಆಗಿದ್ದಾರೆ.

೪೯. ಅಲ್ಲಿ ವಿಷ್ಣುವಿನ ಸಮೀಪದಲ್ಲಿ ವಾಸಮಾಡುವ ಸಮಸ್ತ ಪುರುಷರು, ಅನೇಕ ಶಕ್ತಿಗಳಿಂದ ಕೂಡಿದವರೂ, ನಿತ್ಯಾನಂದ ಭೋಗಿಗಳೂ ಮತ್ತು ನಿರ್ಮಲರೂ ಆಗಿ ವಾಸಮಾಡುತ್ತಾರೆ.

೫೦. ಅಲ್ಲಿ ಇತರರಿಂದ ಪ್ರವೇಶಿಸಲು ಅಶಕ್ಯವೂ, ಉಲ್ಲಂಘಿಸಲು ಅಸಾಧ್ಯವೂ, ಅನೇಕ ಪ್ರಾಸಾದಗಳಿಂದ ಶೋಭಿತವೂ, ಆದ ನಾರಾಯಣಪುರ ಎಂಬ ನಾಮಾಂಕಿತವಾದ ವಿಷ್ಣುವಿನ ಒಂದು ನಗರವು ಇರುತ್ತದೆ.

ಹೇಮಪ್ರಾಕಾರಸಂಯುಕ್ತಂ ಸ್ಫಾಟಿಕೈರ್ಮಂಡಪೈರ್ಯುತಮ್ ।
ಪ್ರಭಾಸಹಸ್ರಕಲಿಲಂ ದುರಾಧರ್ಷಂ ಸುಶೋಭನಮ್ ॥ ೫೧ ॥

ಹರ್ಮ್ಯಪ್ರಾಸಾದಸಂಯುಕ್ತಂ ಮಹಾಟ್ಟಾಲಸಮಾಕುಲಮ್ ।
ಹೇಮಗೋಪುರಸಾಹಸ್ರೈರ್ನಾನಾರತ್ನೋಪಶೋಭಿತೈಃ ॥ ೫೨ ॥

ಶುಭ್ರಾಸ್ತರಣಸಂಯುಕ್ತೈರ್ವಿಚಿತ್ರೈಃ ಸಮಲಂಕೃತಮ್ ।
ನಂದನೈರ್ವಿವಿಧಾಕಾರೈಃ ಸ್ರವಂತೀಭಿಶ್ಚ ಶೋಭಿತಮ್ ॥ ೫೩ ॥

ಸರೋಭಿಃ ಸರ್ವತೋ ಯುಕ್ತಂ ವೀಣಾವೇಣುನಿನಾದಿತಮ್ ।
ಪತಾಕಾಭಿರ್ವಿಚಿತ್ರಾಭಿರನೇಕಾಭಿಶ್ಚ ಶೋಭಿತಮ್ ॥ ೫೪ ॥

---

೫೧. ಆ ನಾರಾಯಣಪುರವು ಸುವರ್ಣದ ಪ್ರಾಕಾರಗಳಿಂದ ಕೂಡಿರುವುದೂ, ಸ್ಫಟಿಕ ಶಿಲೆಯ ಮಂಟಪದಿಂದ ಶೋಭಿತವೂ, ಅನೇಕ ಪ್ರಭೆಗಳಿಂದ ಪೂರ್ಣವೂ, ಇತರರಿಂದ ಉಲ್ಲಂಘಿಸಲು ಅಶಕ್ಯವೂ ಮತ್ತು ಮಂಗಳಮಯವೂ ಆಗಿದೆ.

೫೨. ಹಾಗೂ ಅನೇಕ ಮಂದಿರ-ಪ್ರಾಸಾದಗಳಿಂದ ಕೂಡಿರುವುದೂ, ದೊಡ್ಡ ಮಹಡಿಗಳಿಂದ ಪೂರ್ಣವೂ, ಅನೇಕ ರತ್ನಗಳಿಂದ ಶೋಭಿಸಲ್ಪಟ್ಟ ಸಹಸ್ರಾರು ಸುವರ್ಣಗೋಪುರಗಳಿಂದ ಅಲಂಕರಿಸಲ್ಪಟ್ಟಿರುವುದೂ ಆಗಿದೆ.

೫೩. ಮತ್ತು ಶುಭ್ರವಾದ ಮೇಲುಗಟ್ಟುಗಳಿಂದಲೂ, ವಿಚಿತ್ರವಾದ ಗೋಪುರಗಳಿಂದಲೂ, ಅನೇಕ ವಿಧದ ಆಕಾರವುಳ್ಳ ನಂದನವನಗಳಿಂದಲೂ ಮತ್ತು ಅನೇಕ ನದಿಗಳಿಂದಲೂ ಆ ನಾರಾಯಣಪುರವು ಶೋಭಾಯಮಾನವಾಗಿದೆ.

೫೪. ಮತ್ತು ನಾರಾಯಣಪುರವು ಅನೇಕ ವಿಚಿತ್ರ ಪತಾಕೆಗಳಿಂದ ಶೃಂಗರಿಸಲ್ಪಟ್ಟಿರುವುದೂ, ವೀಣಾ-ವೇಣುಧ್ವನಿಗಳಿಂದ ಶಬ್ದಾಯಮಾನವೂ ಸುತ್ತಲೂ ಇರುವ ಅನೇಕ ಸರೋವರಗಳಿಂದ ರಮಣೀಯವೂ ಆಗಿದೆ.

ವೀಥೀಭಿಃ ಸರ್ವತೋಯುಕ್ತಂ ಸೋಪಾನೈ ರತ್ನಭೂಷಿತೈಃ ।
ನದೀಶತಸಹಸ್ರಾಢ್ಯಂ ದಿವ್ಯಗಾನನಿನಾದಿತಮ್ ॥ ೩೫ ॥

ಹಂಸಕಾರಂಡವಾಕೀರ್ಣಂ ಚಕ್ರವಾಕೋಪಶೋಭಿತಮ್ ।
ಚತುರ್ದ್ವಾರಮನೌಪಮ್ಯಮಗಮ್ಯಂ ದೇವವಿದ್ವಿಷಾಮ್ ॥ ೩೬ ॥

ತತ್ರ ತತ್ರಾಪ್ಸರಃಸಂಘೈರ್ನೃತ್ಯದ್ಭಿರುಪಶೋಭಿತಮ್ ।
ನಾನಾಗೀತವಿಧಾನಜ್ಞೈರ್ದೇವಾನಾಮಪಿ ದುರ್ಲಭೈಃ ॥ ೩೭ ॥

ನಾನಾವಿಲಾಸಸಂಪನ್ನೈಃ ಕಾಮುಕೈರತಿಕೋಮಲೈಃ ।
ಪ್ರಭೂತಚಂದ್ರವದನೈರ್ನೂಪುರಾರವಸಂಯುತೈಃ ॥ ೩೮ ॥

---

೩೫. ಹಾಗೂ ಸುತ್ತಲೂ ಅನೇಕ ಬೀದಿಗಳಿಂದಲೂ ರತ್ನಗಳಿಂದ ಭೂಷಿಸಲ್ಪಟ್ಟ ಸೋಪಾನಗಳಿಂದಲೂ ಪ್ರಕಾಶಿಸುತ್ತಿದೆ. ಹಾಗು ಶತ-ಸಹಸ್ರಾದಿ ಅನೇಕ ಸಂಖ್ಯೆಯ ನದಿಗಳಿಂದಲೂ, ದಿವ್ಯವಾದ ಗೀತಧ್ವನಿಯಿಂದಲೂ ರಮಣೀಯವಾಗಿದೆ.

೩೬. ಹಾಗೂ ಹಂಸ, ಕಾರಂಡವ ಮುಂತಾದ ಜಲಚರ ಪಕ್ಷಿಗಳಿಂದ ರಮ್ಯವೂ, ಚಕ್ರವಾಕಗಳಿಂದ ಶೋಭಿತವೂ, ನಾಲ್ಕು ದ್ವಾರಗಳಿಂದ ಕೂಡಿರುವುದೂ, ಅಸುರರಿಗೆ ಪ್ರವೇಶಿಸಲು ಅಶಕ್ಯವೂ ಮತ್ತು ನಿರುಪಮವೂ ಆಗಿದೆ.

೩೭. ಅಲ್ಲಲ್ಲಿ ದೇವತೆಗಳಿಗೂ, ದುರ್ಲಭವಾದ ಅನೇಕ ಗೀತ ವಿಧಾನಗಳನ್ನು ತಿಳಿದಿರುವ ಅಪ್ಸರಾಂಗನೆಯರ ನರ್ತನಗಳಿಂದ ಶೋಭಿತವಾಗಿದೆ.

೩೮. ಅನೇಕ ವಿಲಾಸಗಳಿಂದ ಕೂಡಿದ, ಅತಿ ಕೋಮಲ ಸ್ವಭಾವದ, ಪೂರ್ಣ ಚಂದ್ರನಂತೆ ಮುಖವುಳ್ಳ ಮತ್ತು ಕಾಲುಗೆಜ್ಜೆಗಳ ಶಬ್ದದಿಂದ ಕೂಡಿದ ಕಾಮುಕ ಜನರಿಂದ ತುಂಬಿರುವುದು.

ಈಷತ್ಸ್ಮಿತೈಃ ಸುಬಿಂಬೋಷ್ಠೈರ್ಬಾಲಮುಗ್ಧಮೃಗೇಕ್ಷಣೈಃ
ಅಶೇಷವಿಭವೋಪೇತೈಸ್ತನುಮಧ್ಯವಿಭೂಷಿತೈಃ ॥ ೫೯ ॥

ಸುರಾಜಹಂಸಚಲನೈಃ ಸುವೇಷೈರ್ಮಧುರಸ್ವನೈಃ ।
ಸಂಲಾಪಾಲಾಪಕುಶಲೈರ್ದಿವ್ಯಾಭರಣಭೂಷಿತೈಃ ॥ ೬೦ ॥

ಸ್ತನಭಾರವಿನಮ್ರೈಶ್ಚ ಮಧುಘೂರ್ಣಿತಲೋಚನೈಃ ।
ನಾನಾವರ್ಣವಿಚಿತ್ರಾಂಗೈರ್ನಾನಾಭೋಗರತಿಪ್ರಿಯೈಃ ॥ ೬೧ ॥

ಉತ್ಫುಲ್ಲಕುಸುಮೋದ್ಯಾನೈಸ್ತದ್ಭೂತಶತಶೋಭಿತಮ್ ।
ಅಸಂಖ್ಯೇಯಗುಣಂ ಶುದ್ಧಮಸಂಖ್ಯೈಸ್ತ್ರಿದಶೈರಪಿ ॥ ೬೨ ॥

---

೫೯. ಮತ್ತು ಸ್ವಲ್ಪ ಮಂದಹಾಸವುಳ್ಳವರೂ ಬಿಂಬ ಫಲದಂತೆ ರಮ್ಯವಾದ ಓಷ್ಠವುಳ್ಳವರೂ, ಸುಂದರವಾದ ಎಳೆ ಜಿಂಕೆಯಂತೆ ಕಣ್ಣುಳ್ಳವರೂ, ಸಂಪೂರ್ಣ ವೈಭವದಿಂದ ಕೂಡಿದವರೂ, ಕೃಶವಾದ ಮಧ್ಯಭಾಗದಿಂದ ಭೂಷಿತರೂ ಆದ ಕಾಮಿನೀ ಜನರಿಂದ ಪೂರ್ಣವಾಗಿದೆ.

೬೦. ಮತ್ತು ರಾಜಹಂಸಗಳಂತೆ ಮಂದಗಮನ, ಶ್ಲಾಘ್ಯವಾದ ವೇಷ, ಇಂಪಾದ ಧ್ವನಿಗಳಿಂದ ಕೂಡಿದವರೂ, ಸಲ್ಲಾಪ, ಆಲಾಪಗಳಲ್ಲಿ ಕುಶಲರೂ ಮತ್ತು ಅನೇಕ ದಿವ್ಯಾಭರಣಗಳಿಂದ ಭೂಷಿತರೂ ಆದ ಕಾಮಿನೀ ಜನರಿಂದ ವ್ಯಾಪ್ತವಾಗಿದೆ.

೬೧. ಮತ್ತು ಸ್ತನಗಳ ಭಾರದಿಂದ ನಮ್ರರೂ, ಮದ್ಯದ ಮದದಿಂದ ಸುತ್ತುತ್ತಿರುವ ನೇತ್ರವುಳ್ಳವರೂ, ಅನೇಕ ವರ್ಣಗಳಿಂದ ವಿಚಿತ್ರವಾದ ಅಂಗವುಳ್ಳವರೂ, ಅನೇಕ ಭೋಗಗಳಿಂದ ಕೂಡಿದ ರತಿ ವಿಹಾರದಲ್ಲಿ ಪ್ರಿಯರೂ ಆದ ಕಾಮಿನಿಯರಿಂದ ತುಂಬಿಕೊಂಡಿದೆ.

೬೨. ಮತ್ತು ಅರಳಿದ ಹೂಗಳಿಂದ ಕೂಡಿದ ಅನೇಕ ಉದ್ಯಾನಗಳಿಂದಲೂ, ನೂರಾರು ಭೂತ ಸಂಘಗಳಿಂದಲೂ, ಶೋಭಿಸಲ್ಪಟ್ಟಿದೆ. ಹಾಗೂ ಸಂಖ್ಯಾತೀತವಾದ ಗುಣಗಳಿಂದ ಕೂಡಿದ ಶುದ್ಧವಾದ ಆ ನಾರಾಯಣಪುರವು ಅನೇಕ ದೇವತೆಗಳಿಂದ ಕೂಡಿಕೊಂಡಿದೆ.

ಶ್ರೀಮತ್ಪವಿತ್ರಂ ದೇವಸ್ಯ ಶ್ರೀಪತೇರಮಿತೌಜಸಃ ।
ತಸ್ಯ ಮಧ್ಯೇಽತಿತೇಜಸ್ಕಮುದ್ಯತ್ಪ್ರಾಕಾರತೋರಣಮ್ ॥ ೬೩ ॥

ಸ್ಥಾನಂ ತದ್ವೈಷ್ಣವಂ ದಿವ್ಯಂ ಯೋಗಿನಾಂ ಸಿದ್ಧಿದಾಯಕಮ್ ।
ತನ್ಮಧ್ಯೇ ಭಗವಾನೇಕಃ ಪುಂಡರೀಕದಲದ್ಯುತಿಃ ॥ ೬೪ ॥

ಶೇತೇಽಶೇಷಜಗತ್ಸೂತಿಃ ಶೇಷಾಹಿಶಯನೇ ಹರಿಃ ।
ವಿಚಿಂತ್ಯಮಾನೋ ಯೋಗೀಂದ್ರೈಃ ಸನಂದನಪುರೋಗಮೈಃ ॥ ೬೫ ॥

ಸ್ವಾತ್ಮಾನಂದಾಮೃತಂ ಪೀತ್ವಾ ಪುರಸ್ತಾತ್ತಮಸಃ ಪರಃ ।
ಪೀತವಾಸಾ ವಿಶಾಲಾಕ್ಷೋ ಮಹಾಮಾಯೋ ಮಹಾಭುಜಃ ॥ ೬೬ ॥

---

೬೩. ಅಪಾರಮಹಿಮೆಯುಳ್ಳ ಲಕ್ಷ್ಮೀಕಾಂತನಾದ ನಾರಾಯಣನಪುರವು ಕಾಂತಿಯುಕ್ತವೂ, ಪವಿತ್ರವೂ ಆಗಿದೆ. ಆ ನಗರದ ಮಧ್ಯದಲ್ಲಿ ಅತಿ ತೇಜಸ್ವಿಯೂ, ಉನ್ನತವಾದ ಪ್ರಾಕಾರ-ತೋರಣಗಳಿಂದ ಕೂಡಿರುವುದೂ ಆದ ಒಂದು ವೈಷ್ಣವ ಸ್ಥಾನವಿರುವುದು.

೬೪. ಆ ವೈಷ್ಣವಸ್ಥಾನವು ದಿವ್ಯವೂ, ಯೋಗಿಗಳಿಗೆ ಸಿದ್ಧಿಯನ್ನು ನೀಡುವುದೂ ಆಗಿದೆ. ಆ ಸ್ಥಾನದ ಮಧ್ಯದಲ್ಲಿ ಕಮಲದ ದಳದಂತೆ ಕಾಂತಿಯುಳ್ಳ ಅದ್ವಿತೀಯನಾದ ಭಗವಂತನು ವಾಸಮಾಡಿಕೊಂಡಿರುವನು.

೬೫. ಅಲ್ಲಿ ಸಮಸ್ತ ಜಗತ್ಕಾರಣನಾದ ಶ್ರೀಹರಿಯು ಸನಂದನ ಮುಂತಾದ ಅನೇಕ ಯೋಗೀಂದ್ರರಿಂದ ಧ್ಯಾನಿಸಲ್ಪಡುತ್ತಾ ಆದಿಶೇಷನೆಂಬ ಸರ್ಪಶಯನದಲ್ಲಿ ಶಯನಮಾಡಿಕೊಂಡಿರುವನು.

೬೬. ಪೀತಾಂಬರಧಾರಿಯೂ, ವಿಶಾಲವಾದ ನೇತ್ರವುಳ್ಳವನೂ, ಮಹಾಮಾಯಾವಿಯೂ ಮಹಾಭುಜಬಲವುಳ್ಳವನೂ, ತಮೋಗುಣಬಾಹ್ಯನೂ ಆದ ಶ್ರೀಮನ್ನಾರಾಯಣನು ಆತ್ಮಾನಂದವೆಂಬ ಅಮೃತ ಸುಖವನ್ನು ಪಾನಮಾಡುತ್ತಲಿರುವನು.

ಕ್ಷೀರೋದಕನ್ಯಯಾ ನಿತ್ಯಂ ಗೃಹೀತಚರಣದ್ವಯಃ ।
ಸಾ ಚ ದೇವೀ ಜಗದ್ವಂದ್ಯಾ ಪಾದಮೂಲೇ ಹರಿಪ್ರಿಯಾ ॥ ೬೭ ॥

ಸಮಾಸ್ತೆ ತನ್ಮನಾ ನಿತ್ಯಂ ಪೀತ್ವಾ ನಾರಾಯಣಾಮೃತಮ್ ।
ನ ತತ್ರಾಧಾರ್ಮಿಕಾ ಯಾಂತಿ ನ ಚ ದೇವಾಂತರಾಲಯಾಃ ॥ ೬೮ ॥

ವೈಕುಂಠಂ ನಾಮ ತತ್ ಸ್ಥಾನಂ ತ್ರಿದಶೈರಪಿ ವಂದಿತಮ್ ।
ನ ಮೇ ಪ್ರಭವತಿ ಪ್ರಜ್ಞಾ ಕೃತ್ಸ್ನಶಾಸ್ತ್ರನಿರೂಪಣೇ ॥ ೬೯ ॥

ಏತಾವತ್ ಶಕ್ಯತೇ ವಕ್ತುಂ ನಾರಾಯಣಪುರಂ ಹಿ ತತ್ ।
ಸ ಏವ ಪರಮಂ ಬ್ರಹ್ಮ ವಾಸುದೇವಃ ಸನಾತನಃ ॥ ೭೦ ॥

---

೬೭. ಮತ್ತು ಕ್ಷೀರಸಮುದ್ರದ ಕನ್ಯೆಯಾದ ಲಕ್ಷ್ಮೀದೇವಿಯಿಂದ ಯಾವಾಗಲೂ ಸೇವಿಸಲ್ಪಟ್ಟ ಚರಣವುಳ್ಳವನಾಗಿರುವನು. ಆ ವಿಷ್ಣುವಿನ ವಲ್ಲಭೆಯೂ ಜಗತ್ತಿಗೆ ವಂದ್ಯಳೂ, ಆದ ಲಕ್ಷ್ಮೀದೇವಿಯು ವಿಷ್ಣುವಿನ ಪಾದ ಮೂಲದಲ್ಲಿ ವಾಸಿಸುವಳು.

೬೮. ಮತ್ತು ಆ ಲಕ್ಷ್ಮೀದೇವಿಯು ವಿಷ್ಣುವಿನಲ್ಲಿ ಯಾವಾಗಲೂ ಮನಸ್ಸಂಗವುಳ್ಳವಳಾಗಿ ಆ ನಾರಾಯಣನೆಂಬ ಆನಂದಾಮೃತವನ್ನು ಯಾವಾಗಲೂ ಆಸ್ವಾದಿಸುತ್ತಿರುವಳು. ಆ ಸ್ಥಾನಕ್ಕೆ ಇತರ ದೇವತಾಭಕ್ತರೂ, ಅಧಾರ್ಮಿಕರೂ ಪ್ರವೇಶಿಸುವುದಿಲ್ಲ.

೬೯. ವೈಕುಂಠವೆಂಬ ಹೆಸರುಳ್ಳ ಆ ಸ್ಥಾನವು ದೇವತೆಗಳಿಗೂ ನಮಸ್ಕಾರಾರ್ಹವಾಗಿದೆ. ಆ ನಾರಾಯಣ ಪುರವನ್ನು ಸಂಪೂರ್ಣವಾಗಿ ವರ್ಣಿಸುವುದರಲ್ಲಿ ನನ್ನ ಪ್ರಜ್ಞೆಯು ಸಮರ್ಥವಾಗಿಲ್ಲ.

೭೦. ಆ ನಾರಾಯಣಪುರದ ವಿಷಯದಲ್ಲಿ ಇಷ್ಟುಮಾತ್ರ ಹೇಳುವುದು ನನಗೆ ಶಕ್ಯವಾಗಿದೆ. ಸನಾತನನೂ, ವಾಸುದೇವನೂ ಆದ ನಾರಾಯಣನೇ ಪರಬ್ರಹ್ಮ ವಸ್ತುವು.

ಶೇತೇ ನಾರಾಯಣಃ ಶ್ರೀಮಾನ್ ಮಾಯಯಾ ಮೋಹಯನ್ ಜಗತ್

ನಾರಾಯಣಾದಿದಂ ಜಾತಂ ತಸ್ಮಿನ್ನೇವ ವ್ಯವಸ್ಥಿತಮ್ ।
ತಮಾಶ್ರಯತಿ ಕಾಲಾಂತೇ ಸ ಏವ ಪರಮಾ ಗತಿಃ　　॥ ೭೨ ॥

ಇತಿ ಶ್ರೀ ಕೂರ್ಮಪುರಾಣೇ ಏಕೋನಪಂಚಾಶೋಽಧ್ಯಾಯಃ.

---

೭೧. ಆ ವೈಕುಂಠಸ್ಥಾನದಲ್ಲಿ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಸಮಸ್ತ ಜಗತ್ತನ್ನೂ ತನಗೆ ಅಧೀನವಾದ ಮಾಯೆಯಿಂದ ಮೋಹಸಾಗರದಲ್ಲಿ ಮುಳುಗಿಸುತ್ತಾ ಶಯನಮಾಡುತ್ತಿರುವನು.

೭೨. ಈ ಸಮಸ್ತ ಜಗತ್ತು ನಾರಾಯಣನಿಂದ ಹುಟ್ಟುವುದೂ, ನಾರಾಯಣನೆಂಬ ಆಧಾರದಲ್ಲಿ ಸ್ಥಿತಿಯನ್ನು ಹೊಂದಿರುವುದೂ ಮತ್ತು ಅಂತಕಾಲದಲ್ಲಿ ನಾರಾಯಣನನ್ನು ಆಶ್ರಯಿಸುವುದೂ ಆಗಿದೆ. ನಾರಾಯಣನೇ ಉತ್ತಮಸದ್ಗತಿಯು.

( ಕೂರ್ಮಪುರಾಣದಲ್ಲಿ ನಲವತ್ತೊಂಭತ್ತನೆಯ ಅಧ್ಯಾಯವು ಮುಗಿದುದು. )



ಶ್ರೀಃ

# ಕೂರ್ಮಪುರಾಣಂ

—wwww—

## ಪಂಚಾಶೋಽಧ್ಯಾಯಃ.

**ಸೂತ ಉವಾಚ :—**

**ಶಾಕದ್ವೀಪಸ್ಯ ವಿಸ್ತಾರಾದ್ದ್ವಿಗುಣೇನ ವ್ಯವಸ್ಥಿತಃ ।**
**ಕ್ಷೀರಾರ್ಣವಂ ಸಮಾಶ್ರಿತ್ಯ ದ್ವೀಪಂ ಪುಷ್ಕರಸಂಜ್ಞಿತಮ್ ॥ ೧ ॥**

**ಏಕ ಏವಾತ್ರ ವಿಪ್ರೇಂದ್ರಾಃ ಪರ್ವತೋ ಮಾನಸೋತ್ತರಃ ।**
**ಯೋಜನಾನಾಂ ಸಹಸ್ರಾಣಿ ಚೋರ್ಧ್ವಂ ಪಂಚಾಶದುಚ್ಛ್ರಿತಃ ॥ ೨ ॥**

---

## ಐವತ್ತನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು:—ಶಾಕದ್ವೀಪದ ಸುತ್ತಲೂ ದ್ವಿಗುಣವಿಸ್ತಾರದಿಂದ ಕೂಡಿದ ಪುಷ್ಕರದ್ವೀಪವೆಂಬ ಸಂಜ್ಞೆಯುಳ್ಳ ದ್ವೀಪವು ಕ್ಷೀರ ಸಮುದ್ರವನ್ನು ಆಶ್ರಯಿಸಿಕೊಂಡು ಇರುವುದು.

೨. ವಿಪ್ರೇಂದ್ರರೇ ! ಸಹಸ್ರಯೋಜನಗಳ ವಿಸ್ತಾರವುಳ್ಳದ್ದೂ, ಮೇಲು ಭಾಗದಲ್ಲಿ ಐವತ್ತು ಯೋಜನದಷ್ಟು ಉನ್ನತವೂ ಆದ ಮಾನಸೋತ್ತರವೆಂಬ ಒಂದು ಪರ್ವತವು ಈ ದ್ವೀಪದಲ್ಲಿದೆ.

ತಾವದೇವ ಚ ವಿಸ್ತೀರ್ಣಃ ಸರ್ವತಃ ಪಾರಿಮಂಡಲಃ ।
ಸ ಏವ ದ್ವೀಪಶ್ಚಾರ್ಧೇನ ಮಾನಸೋತ್ತರಸಂಸ್ಥಿತಃ ॥ ೩ ॥

ಏಕ ಏವ ಮಹಾಭಾಗಃ ಸನ್ನಿವೇಶೋ ದ್ವಿಧಾಕೃತಃ ।
ತಸ್ಮಿನ್ ದ್ವೀಪೇ ಸ್ಮೃತೌ ದ್ವೌ ತು ಪುಣ್ಯೌ ಜನಪದೌ ಶುಭೌ ॥ ೪ ॥

ಅಪರೌ ಮಾನಸಸ್ಯಾಥ ಪರ್ವತಸ್ಯಾನುಮಂಡಲೌ ।
ಮಹಾವೀತಂ ಸ್ಮೃತಂ ವರ್ಷಂ ಧಾತಕೀಖಂಡಮೇವ ಚ ॥ ೫ ॥

ಸ್ವಾದೂದಕೇನೋದಧಿನಾ ಪುಷ್ಕರಃ ಪರಿವಾರಿತಃ ।
ತಸ್ಮಿನ್ ದ್ವೀಪೇ ಮಹಾವೃಕ್ಷೋ ನ್ಯಗ್ರೋಧೋಽಮರಪೂಜಿತಃ ॥ ೬ ॥

ತಸ್ಮಿನ್ನಿವಸತಿ ಬ್ರಹ್ಮಾ ವಿಶ್ವಾತ್ಮಾ ವಿಶ್ವಭಾವನಃ ।
ತತ್ರೈವ ಮುನಿಶಾರ್ದೂಲ ಶಿವನಾರಾಯಣಾಲಯಃ ॥ ೭ ॥

---

೩. ಅಷ್ಟೇ ವಿಸ್ತಾರವುಳ್ಳದ್ದೂ, ಸುತ್ತಲೂ ವರ್ತುಲಾಕಾರವುಳ್ಳದ್ದೂ ಆದ ಆ ದ್ವೀಪವು ತನ್ನ ಅರ್ಧಭಾಗದಷ್ಟು ಮಾನಸೋತ್ತರ ಗಿರಿಯನ್ನು ಆಕ್ರಮಿಸಿದೆ.

೪. ಮಹಾಭಾಗ್ಯಶಾಲಿಯಾದ ಆ ದ್ವೀಪದ ಒಂದು ಸನ್ನಿವೇಶವು ಎರಡಾಗಿ ಭಾಗಿಸಲ್ಪಟ್ಟಿದೆ. ಆ ದ್ವೀಪದಲ್ಲಿ ಪವಿತ್ರವೂ, ಮಂಗಳಕರವೂ ಆದ ಎರಡು ದೇಶಗಳು ಸ್ಮರಿಸಲ್ಪಟ್ಟಿವೆ.

೫. ಮಾನಸ ಪರ್ವತದ ಸುತ್ತಲು ಇರುವ ಭಾಗಗಳನ್ನು ವ್ಯಾಪಿಸಿದ ಮಹಾವೀತ-ಧಾತಕೀಖಂಡವೆಂಬ ಮತ್ತೆರಡು ವರ್ಷಗಳು ಇರುವುವೆಂದು ಸ್ಮರಿಸಲ್ಪಟ್ಟಿವೆ.

೬. ಪುಷ್ಕರವೆಂಬ ದ್ವೀಪವು ಸ್ವಾದೂದಕ ಸಮುದ್ರದಿಂದ ಸುತ್ತಲು ಆವರಿಸಲ್ಪಟ್ಟಿದೆ. ಆ ದ್ವೀಪದಲ್ಲಿ ಮಹತ್ತಾದ ಒಂದು ನ್ಯಗ್ರೋಧವೃಕ್ಷವು ದೇವತೆಗಳಿಂದ ಪೂಜಿಸಲ್ಪಡುತ್ತಲಿದೆ.

೭. ಅಲ್ಲಿ ವಿಶ್ವರೂಪಿಯೂ, ವಿಶ್ವಕಾರಣನೂ ಆದ ಬ್ರಹ್ಮದೇವನು ವಾಸ ಮಾಡುತ್ತಲಿರುವನು. ಮುನಿಪುಂಗವನೆ ! ಅಲ್ಲಿ ಒಂದು ಹರಿಹರದೇವಾಲಯವು ಇರುವುದು.

ವಸತ್ಯತ್ರ ಮಹಾದೇವೋ ಹರೋಽರ್ಧಂ ಹರಿರವ್ಯಯಃ ।
ಸಂಪೂಜ್ಯಮಾನೋ ಬ್ರಹ್ಮಾದ್ಯೈಃ ಕುಮಾರಾದ್ಯೈಶ್ಚ ಯೋಗಿಭಿಃ॥ ೮ ॥

ಗಂಧರ್ವೈಃ ಕಿನ್ನರೈರ್ಯಕ್ಷೈರೀಶ್ವರಃ ಕೃಷ್ಣಪಿಂಗಲಃ ।
ಸ್ವಸ್ಥಾಸ್ತತ್ರ ಪ್ರಜಾಃ ಸರ್ವಾ ಬ್ರಾಹ್ಮಣಾಃ ಶತಶಸ್ತ್ವಿಷಃ ॥ ೯ ॥

ನಿರಾಮಯಾ ವಿಶೋಕಾಶ್ಚ ರಾಗದ್ವೇಷವಿವರ್ಜಿತಾಃ ।
ಸತ್ಯಾನೃತೇ ಚ ತತ್ರಾಸ್ತಾಂ ನೋತ್ತಮಾಧಮಮಧ್ಯಮಾಃ ॥ ೧೦ ॥

ನ ವರ್ಣಾಶ್ರಮಧರ್ಮಾಶ್ಚ ನ ನದ್ಯೋ ನ ಚ ಪರ್ವತಾಃ ।
ಪರೇಣ ಪುಷ್ಕರೇಣಾಥ ಸಮಾವೃತ್ಯ ಸ್ಥಿತೋ ಮಹಾನ್ ॥ ೧೧ ॥

---

೮. ಆ ದೇವಾಲಯದಲ್ಲಿ ಅರ್ಧಭಾಗದಲ್ಲಿ ಮಹಾದೇವನಾದ ಹರನೂ ಮತ್ತೊಂದು ಅರ್ಧಭಾಗದಲ್ಲಿ ಹರಿಯೂ ಸೇರಿದ ಹರಿಹರಮೂರ್ತಿಯು ಬ್ರಹ್ಮಾದಿ ದೇವತೆಗಳಿಂದಲೂ ಸನತ್ಕುಮಾರಾದಿ ಯೋಗಿಗಳಿಂದಲೂ ಪೂಜಿಸಲ್ಪಡುತ್ತಿರುವನು.

೯. ಮತ್ತು ಕೃಷ್ಣ-ಪಿಂಗಲಮೂರ್ತಿಯುಳ್ಳ ಹರಿಹರೇಶ್ವರನನ್ನು ಗಂಧರ್ವ-ಕಿನ್ನರ-ಯಕ್ಷ ಮುಂತಾದವರು ಪೂಜಿಸುತ್ತಾರೆ. ಅಲ್ಲಿ ವಾಸಮಾಡುವ ಸಮಸ್ತ ಪ್ರಜೆಗಳು ಸ್ವಸ್ಥತೆಯಿಂದ ಇರುತ್ತಾರೆ. ಮತ್ತು ಬ್ರಾಹ್ಮಣರು ಹೆಚ್ಚಾಗಿ ತೇಜಸ್ವಿಗಳಾಗಿರುವರು.

೧೦. ಅಲ್ಲಿರುವ ಪ್ರಜೆಗಳು ವ್ಯಾಧಿ-ಶೋಕ-ರಾಗ-ದ್ವೇಷ ಮುಂತಾದ ಪೀಡೆಗಳಿಂದ ವರ್ಜಿತರಾಗಿರುವರು. ಆ ಸ್ಥಾನದಲ್ಲಿ ಸತ್ಯ-ಅನೃತ, ಉತ್ತಮ-ಅಧಮ-ಮಧ್ಯಮ ಎಂಬ ಭೇದಭಾವನೆಗಳು ಇರುವುದಿಲ್ಲ.

೧೧. ಆ ಪುಷ್ಕರ ದ್ವೀಪದಲ್ಲಿ ವರ್ಣಾಶ್ರಮಧರ್ಮಗಳೂ, ನದಿಗಳೂ ಮತ್ತು ಪರ್ವತಗಳೂ ಇರುವುದಿಲ್ಲ. ಆ ಪುಷ್ಕರದ್ವೀಪದ ಹೊರಭಾಗದಲ್ಲಿ ಮಹತ್ತಾದ ಸಮುದ್ರವು ಸುತ್ತಿಕೊಂಡಿದೆ.

ಸ್ವಾದೂದಕಸಮುದ್ರಸ್ತು ಸಮಂತಾದ್ದ್ವಿಜಸತ್ತಮಾಃ ।
ಪರೇಣ ತಸ್ಯ ಮಹತೀ ದೃಶ್ಯತೇ ಲೋಕಸಂಸ್ಥಿತಿಃ । ॥ ೧೨ ॥

ಕಾಂಚನೀ ದ್ವಿಗುಣಾ ಭೂಮಿಃ ಸರ್ವತ್ರೈಕಶಿಲೋಪಮಾ ।
ತಸ್ಯಾಃ ಪರೇಣ ಶೈಲಸ್ತು ಮರ್ಯಾದಾ ಭಾನುಮಂಡಲಃ ॥ ೧೩ ॥

ಪ್ರಕಾಶಶ್ಚಾಪ್ರಕಾಶಶ್ಚ ಲೋಕಾಲೋಕಃ ಸ ಉಚ್ಯತೇ ।
ಯೋಜನಾನಾಂ ಸಹಸ್ರಾಣಿ ದಶ ತಸ್ಯೋಚ್ಛ್ರಯಃ ಸ್ಮೃತಃ ॥ ೧೪ ॥

ತಾವಾನೇವ ಚ ವಿಸ್ತಾರೋ ಲೋಕಾಲೋಕಮಹಾಗಿರೇಃ ।
ಸಮಾವೃತ್ಯ ತು ತಂ ಶೈಲಂ ಸರ್ವತೋ ವೈ ಸಮಸ್ಥಿತಮ್ ॥ ೧೫ ॥

---

೧೨. ದ್ವಿಜೋತ್ತಮರೇ ! ಪುಷ್ಕರದ್ವೀಪದ ಸುತ್ತಲೂ ಇರುವ ಸಮುದ್ರವು ಸ್ವಾದೂದಕ ಸಮುದ್ರವೆಂದು ಪ್ರಖ್ಯಾತವಾಗಿದೆ. ಆ ಸಮುದ್ರದ ಪರಭಾಗದಲ್ಲಿ ಮಹತ್ತಾದ ಲೋಕಗಳ ಸನ್ನಿವೇಶವು ಕಾಣುವುದು.

೧೩. ಮತ್ತು ಲೋಕ ಸನ್ನಿವೇಶದಲ್ಲಿ ಎಲ್ಲಾ ಭಾಗದಲ್ಲಿಯೂ ಒಂದೇ ಶಿಲೆಯಂತೆ ಇರುವ ದ್ವಿಗುಣವಾದ ಸುವರ್ಣ ಭೂಮಿಯು ಕಾಣಿಸುವುದು. ಆ ಭೂಮಿಯ ಬಹಿರ್ಭಾಗದಲ್ಲಿ ಸೂರ್ಯಮಂಡಲವೇ ಅವಧಿಯಾಗಿ ಉಳ್ಳ ಒಂದು ಪರ್ವತವಿರುವುದು.

೧೪. ಪ್ರಕಾಶ ಮತ್ತು ಅಪ್ರಕಾಶಗಳಿಂದ ಕೂಡಿದ ಆ ಪರ್ವತವು ಲೋಕಾಲೋಕಗಿರಿ ಎಂದು ಕರೆಯಲ್ಪಡುವುದು. ಆ ಪರ್ವತದ ಎತ್ತರವು ಒಂದು ಸಾವಿರದ ಹತ್ತು ಯೋಜನ ಪರಿಮಾಣವೆಂದು ಸ್ಮರಿಸಲ್ಪಟ್ಟಿದೆ.

೧೫. ಆ ಲೋಕಾಲೋಕ ಮಹಾಪರ್ವತದ ವಿಸ್ತಾರವು ಅಷ್ಟೇ ಪರಿಮಾಣವುಳ್ಳದ್ದಾಗಿದೆ. ಆ ಪರ್ವತವನ್ನು ಆವರಿಸಿಕೊಂಡು ತಮಸ್ಸು ವ್ಯಾಪಿಸಿದೆ.

ತಮಶ್ಚಾಂಡಕಟಾಹೇನ ಸಮಂತಾತ್ಪರಿವೇಷ್ಟಿತಮ್ ।
ಏತೇ ಸಪ್ತ ಮಹಾಲೋಕಾಃ ಪಾತಾಲಾಃ ಸಂಪ್ರಕೀರ್ತಿತಾಃ ॥ ೧೬ ॥

ಬ್ರಹ್ಮಾಂಡಾಶೇಷವಿಸ್ತಾರಃ ಸಂಕ್ಷೇಪೇಣ ಮಯೋದಿತಃ ।
ಅಂಡಾನಾಮೀದೃಶಾನಾಂ ತು ಕೋಟ್ಯೋ ಜ್ಞೇಯಾಃ ಸಹಸ್ರಶಃ ॥೧೭॥

ಸರ್ವಗತ್ವಾತ್ ಪ್ರಧಾನಸ್ಯ ಕಾರಣಸ್ಯಾವ್ಯಯಾತ್ಮನಃ ।
ಅಂಡೇಷ್ವೇತೇಷು ಸರ್ವೇಷು ಭುವನಾನಿ ಚತುರ್ದಶ ॥ ೧೮ ॥

ತತ್ರ ತತ್ರ ಚತುರ್ವಕ್ತ್ರಾ ರುದ್ರಾ ನಾರಾಯಣಾದಯಃ ।
ದಶೋತ್ತರಮಥೈಕೈಕಮಂಡಾವರಣಸಪ್ತಕಮ್ ॥ ೧೯ ॥

---

೧೬. ಆ ತಮಸ್ಸು ಬ್ರಹ್ಮಾಂಡ ಕಟಾಹದ ಆಕಾರವಾಗಿ ಸುತ್ತಲೂ ವೇಷ್ಟಿಸಿ ಕೊಂಡಿದೆ. ಹೀಗೆ ಪಾತಾಳ ಮಹಾಲೋಕಗಳು ನನ್ನಿಂದ ನಿಮಗೆ ಕೀರ್ತಿಸಲ್ಪಟ್ಟವೆ.

೧೭. ನನ್ನಿಂದ ಬ್ರಹ್ಮಾಂಡದ ಸಮಸ್ತ ಭಾಗಗಳ ವಿಸ್ತಾರವು ಸಂಕ್ಷೇಪವಾಗಿ ವರ್ಣಿಸಲ್ಪಟ್ಟಿದೆ. ಇಂತಹ ಬ್ರಹ್ಮಾಂಡಗಳು ಒಂದು ಸಹಸ್ರಕೋಟಿ ಸಂಖ್ಯೆಯಲ್ಲಿವೆ ಎಂದು ತಿಳಿಯಬೇಕು.

೧೮. ಅವ್ಯಯಸ್ವರೂಪನೂ, ಪ್ರಧಾನನೂ, ಕಾರಣನೂ ಆದ ಪರಮಾತ್ಮನು ಇವುಗಳಲ್ಲಿ ಸರ್ವವ್ಯಾಪಿಯಾಗಿರುವನು. ಈ ಸಮಸ್ತ ಬ್ರಹ್ಮಾಂಡಗಳಲ್ಲಿ ಹದಿನಾಲ್ಕು ಭುವನಗಳು ಅಡಗಿಕೊಂಡಿವೆ.

೧೯. ಆಯಾಯ ಭುವನಗಳಲ್ಲಿ ಬ್ರಹ್ಮ, ರುದ್ರ, ನಾರಾಯಣ ಮುಂತಾದ ದೇವತೆಗಳು ಅನೇಕರಾಗಿರುವರು. ಒಂದೊಂದು ಬ್ರಹ್ಮಾಂಡದ ಸಪ್ತ ಆವರಣಗಳು ದಶಗುಣಿತವಾಗಿ ಉತ್ತರೋತ್ತರಾಧಿಕ ಪ್ರಮಾಣದಲ್ಲಿವೆ.

ಸಮಂತಾತ್ ಸಂಸ್ಥಿತಂ ವಿಪ್ರಾಸ್ತತ್ರ ಯಾಂತಿ ಮನೀಷಿಣಃ ।
ಅನಂತಮೇವಮವ್ಯಕ್ತಮನಾದಿನಿಧನಂ ಮಹತ್ ॥ ೨೦ ॥

ಅತೀತ್ಯ ವರ್ತತೇ ಸರ್ವಂ ಜಗತ್ ಪ್ರಕೃತಿರಕ್ಷರಮ್ ।
ಅನಂತತ್ವಮನಂತಸ್ಯ ಯತಃ ಸಂಖ್ಯಾ ನ ವಿದ್ಯತೇ ॥ ೨೧ ॥

ತದವ್ಯಕ್ತಮಿದಂ ಜ್ಞೇಯಂ ತದ್ಬ್ರಹ್ಮ ಪರಮಂ ಧ್ರುವಮ್ ।
ಅನಂತ ಏಷ ಸರ್ವತ್ರ ಸರ್ವಸ್ಥಾನೇಷು ಪಠ್ಯತೇ ॥ ೨೨ ॥

ತಸ್ಯ ಪೂರ್ವಂ ಮಯಾಪ್ಯುಕ್ತಂ ಯತ್ತನ್ಮಾಹಾತ್ಮ್ಯಮುತ್ತಮಮ್ ।
ಗತಃ ಸ ಏಷ ಸರ್ವತ್ರ ಸರ್ವಸ್ಥಾನೇಷು ಪೂಜ್ಯತೇ ॥ ೨೩ ॥

---

೨೦. ವಿಪ್ರರೇ ! ಆವರಣವು ಅವ್ಯಾಕೃತರೂಪವಾಗಿ ಸುತ್ತಲೂ ಆವರಿಸಿಕೊಂಡಿದೆ. ಜ್ಞಾನಿಗಳು ಅದನ್ನು ಸೇರುವರು. ಆ ಅವ್ಯಾಕೃತವು ಅಂತಶೂನ್ಯವೂ, ಅವ್ಯಕ್ತವೂ, ಉತ್ಪತ್ತಿ - ಮರಣಗಳಿಂದ ವರ್ಜಿತವೂ ಮತ್ತು ಮಹಾಪ್ರಮಾಣವೂ, ಆಗಿದೆ.

೨೧. ಸಮಸ್ತ ಜಗತ್ತನ್ನೂ ಲಂಘಿಸಿ ನಾಶಶೂನ್ಯವೂ, ಪ್ರಕೃತಿರೂಪವೂ ಆದ ಆ ಅವ್ಯಕ್ತವು ಸ್ಥಿತಿಯನ್ನು ಹೊಂದಿದೆ. ಇದಕ್ಕೆ ಸಂಖ್ಯೆಯೂ ಅಂತವೂ ಇಲ್ಲದಿರುವುದರಿಂದ ಅನಂತರೂಪವನ್ನು ಹೊಂದಿದೆ.

೨೨. ಕಾಣಿಸುವ ತತ್ತ್ವವೆಲ್ಲವೂ ಆ ಅವ್ಯಕ್ತದರೂಪವು, ಆ ಅವ್ಯಕ್ತವು ಪರಬ್ರಹ್ಮರೂಪವೂ, ಶಾಶ್ವತವೂ ಆಗಿದೆ. ಸರ್ವದೇಶಗಳಲ್ಲಿಯೂ, ಸರ್ವಸ್ಥಾನಗಳಲ್ಲಿಯೂ ಅನಂತಸ್ವಾಮಿಯು ಇರುವನೆಂದು ಹೇಳಲ್ಪಡುವನು.

೨೩. ಆ ಅನಂತಸ್ವಾಮಿಯ ಉತ್ತಮವಾದ ಮಾಹಾತ್ಮ್ಯೆಯು ಹಿಂದೆ ನನ್ನಿಂದ ವರ್ಣಿಸಲ್ಪಟ್ಟಿದೆ. ಆ ಅನಂತಸ್ವಾಮಿಯು ಸರ್ವವ್ಯಾಪಿಯಾಗಿದ್ದು ಎಲ್ಲಾ ಸ್ಥಾನಗಳಲ್ಲಿಯೂ ಪೂಜಿಸಲ್ಪಡುತ್ತಾನೆ.

ಭೂಮೌ ರಸಾತಲೇ ಚೈವ ಆಕಾಶೇ ಪವನೇಽನಲೇ ।
ಅರ್ಣವೇಷು ಚ ಸರ್ವೇಷು ದಿವಿ ಚೈವ ನ ಸಂಶಯಃ ॥ ೨೪ ॥

ತಥಾ ತಮಸಿ ತತ್ತ್ವೇ ವಾಪ್ಯೇಷ ಏವ ಮಹಾದ್ಯುತಿಃ ।
ಅನೇಕಧಾ ವಿಭಕ್ತಾಂಗಃ ಕ್ರೀಡತೇ ಪುರುಷೋತ್ತಮಃ ॥ ೨೫ ॥

ಮಹೇಶ್ವರಃ ಪರೋಽವ್ಯಕ್ತಾದಂಡಮವ್ಯಕ್ತಸಂಭವಮ್ ।
ಅಂಡಾದ್ಬ್ರಹ್ಮಾ ಸಮುತ್ಪನ್ನಸ್ತೇನ ಸೃಷ್ಟಮಿದಂ ಜಗತ್ ॥ ೨೬ ॥

ಇತಿ ಶ್ರೀ ಕೂರ್ಮಪುರಾಣೇ ಪಂಚಾಶತ್ತಮೋಽಧ್ಯಾಯಃ.

---

೨೪. ಭೂಮಿ, ಪಾತಾಳ, ಆಕಾಶ, ವಾಯು, ಅಗ್ನಿ, ಸಮಸ್ತ ಸಮುದ್ರಗಳು ಮತ್ತು ದ್ಯುಲೋಕವೆಂಬ ಸರ್ವ ಸ್ಥಾನಗಳಲ್ಲಿ ಅನಂತನು ವ್ಯಾಪಿಸಿಕೊಂಡಿರುವನು. ಇದರಲ್ಲಿ ಸಂಶಯವಿಲ್ಲ.

೨೫. ಹಾಗೆಯೇ ತಮಸ್ಸು ಎಂಬ ತತ್ವದಲ್ಲಿಯೂ ಮಹಾತೇಜಸ್ವಿಯಾದ ಪರಮಾತ್ಮನು ವ್ಯಾಪಿಸಿರುವನು. ಹೀಗೆ ಪುರುಷೋತ್ತಮನು ಅನೇಕ ರೂಪಗಳಿಂದ ವಿಂಗಡಿಸಿದ ಆಕಾರವುಳ್ಳವನಾಗಿ ಕ್ರೀಡಿಸುತ್ತಿರುವನು.

೨೬. ಇಂತಹ ಅವ್ಯಾಕೃತ ತತ್ವಕ್ಕಿಂತಲೂ, ಮಹೇಶ್ವರನು ವಿಲಕ್ಷಣನಾಗಿರುವನು. ಈ ಬ್ರಹ್ಮಾಂಡವು ಅವ್ಯಕ್ತದಿಂದ ಜನಿಸಿರುವುದು. ಬ್ರಹ್ಮಾಂಡದಿಂದ ಚತುರ್ಮುಖನು ಹುಟ್ಟಿರುವನು. ಅವನಿಂದ ಈ ಜಗತ್ತು ಸೃಷ್ಟಿಸಲ್ಪಟ್ಟಿದೆ.

( ಕೂರ್ಮಪುರಾಣದಲ್ಲಿ ಐವತ್ತನೆಯ ಅಧ್ಯಾಯವು ಮುಗಿದುದು. )

---

ಶ್ರೀ

# ಕೂರ್ಮಪುರಾಣಂ

---

## ಏಕಪಂಚಾಶತ್ತಮೋಽಧ್ಯಾಯಃ.

ಋಷಯ ಊಚುಃ :—

ಅತೀತಾನಾಗತಾನೀಹ ಯಾನಿ ಮನ್ವಂತರಾಣಿ ವೈ ।
ತಾನಿ ತ್ವಂ ಕಥಯಾಸ್ಮಭ್ಯಂ ವ್ಯಾಸಂ ಚ ದ್ವಾಪರೇ ಯುಗೇ ॥ ೧ ॥

ವೇದಶಾಖಾಪ್ರಣಯಿನೋ ದೇವದೇವಸ್ಯ ಧೀಮತಃ ।
ಧರ್ಮಾರ್ಥಾನಾಂ ಪ್ರವಕ್ತಾರೋ ಹೀಶಾನಸ್ಯ ಕಲೌ ಯುಗೇ ॥ ೨ ॥

---

## ಐವತ್ತೊಂದನೆಯ ಅಧ್ಯಾಯವು.

೧. ಋಷಿಗಳು ಹೀಗೆಂದು ಹೇಳಿದರು:— ಸೂತಮುನಿಯೇ ಹಿಂದೆ ಎಷ್ಟು ಮನ್ವಂತರಗಳು ಕಳೆದಿವೆಯೋ ಹಾಗೂ ಎಷ್ಟು ಮನ್ವಂತರಗಳು ಮುಂದೆ ಬರುವುವೊ ಆ ಸಮಸ್ತ ಮನ್ವಂತರಗಳನ್ನೂ ಮತ್ತು ದ್ವಾಪರ ಯುಗದಲ್ಲಿ ವೇದಗಳನ್ನು ವಿಂಗಡಿಸಿದ ವ್ಯಾಸಮುನಿಯನ್ನು ನಮಗೆ ಉಪದೇಶಿಸು

೨. ಈ ವೇದಗಳ ಶಾಖೆಗಳನ್ನು ರಚಿಸಿದವನೂ, ದೇವೋತ್ತಮನೂ, ಸರ್ವಜ್ಞನೂ ಮತ್ತು ಸರ್ವೇಶ್ವರನೂ ಆದ ವ್ಯಾಸಮುನಿಯ ಶಿಷ್ಯರಾಗಿ ಕಲಿಯುಗದಲ್ಲಿ ಧರ್ಮಾರ್ಥ ಉಪದೇಶಕರಾಗಿರುವವರನ್ನು ಹೇಳು.

ಕಿಯಂತೋ ದೇವದೇವಸ್ಯ ಶಿಷ್ಯಾಃ ಕಲಿಯುಗೇಽಪಿ ವೈ ।
ಏತತ್ಸರ್ವಂ ಸಮಾಸೇನ ಸೂತ ವಕ್ತುಮಿಹಾರ್ಹಸಿ ॥ ೩ ॥

ಸೂತ ಉವಾಚ :—

ಮನುಃ ಸ್ವಾಯಂಭುವಃ ಪೂರ್ವಂ ತತಃ ಸ್ವಾರೋಚಿಷೋ ಮತಃ ।
ಉತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ॥ ೪ ॥

ಷಡೇತೇ ಮನವೋಽತೀತಾಃ ಸಾಂಪ್ರತಂ ತು ರವೇಃ ಸುತಃ ।
ವೈವಸ್ವತೋಽಯಂ ಸಪ್ತೈತತ್ ಸಪ್ತಮಂ ವರ್ತತೇ ಪರಮ್ ॥ ೫ ॥

ಸ್ವಾಯಂಭುವಂ ತು ಕಥಿತಂ ಕಲ್ಪಾದಾವಂತರಂ ಮಯಾ ।
ಅತ ಊರ್ಧ್ವಂ ನಿಬೋಧಧ್ವಂ ಮನೋಃ ಸ್ವಾರೋಚಿಷಸ್ಯ ತು ॥ ೬ ॥

---

೩. ದೇವೋತ್ತಮನಾದ ವ್ಯಾಸಮುನಿಗೆ ಕಲಿಯುಗದಲ್ಲಿ ಎಷ್ಟುಮಂದಿ ಶಿಷ್ಯರು ಇರುವರು ? ಸೂತಮುನಿಯೇ ! ನೀನು ಇದೆಲ್ಲವನ್ನೂ ಸಂಕ್ಷೇಪವಾಗಿ ಹೇಳಲು ಅರ್ಹನಾಗಿದ್ದೀಯೆ.

೪. ಸೂತಮುನಿಯು ಹೀಗೆಂದು ಹೇಳಿದನು :—ಮನುಗಳಲ್ಲಿ ಮೊದಲು ಸ್ವಾಯಂಭುವಮನುವು, ತರುವಾಯ ಸ್ವಾರೋಚಿಷಮನು, ಮುಂದೆ ಕ್ರಮವಾಗಿ ಉತ್ತಮ, ತಾಮಸ, ರೈವತ ಚಾಕ್ಷುಷ ಎಂಬ ಮನುರಾಜರು ಇದ್ದರು.

೫. ಹೀಗೆ ಈ ಆರು ಮಂದಿ ಮನುರಾಜರು ಕಳೆದಿರುವರು. ಈಗ ಸೂರ್ಯನ ಪುತ್ರರಾದ ವೈವಸ್ವತ ಎಂಬ ಮನುವು ಮನ್ವಂತರಾಧಿಕಾರದಲ್ಲಿರುವನು. ಇದು ಏಳನೆಯ ವೈವಸ್ವತ ಮನ್ವಂತರವೆಂದು ಕರೆಯಲ್ಪಡುವುದು.

೬. ಕಲ್ಪದ ಆದಿಯಲ್ಲಿರುವ ಸ್ವಾಯಂಭುವ ಮನ್ವಂತರವು ನನ್ನಿಂದ ವರ್ಣಿಸಲ್ಪಟ್ಟಿದೆ. ಇನ್ನುಮುಂದೆ ಸ್ವಾರೋಚಿಷ, ಮನುವಿನ ಮನ್ವಂತರವನ್ನು ಶ್ರವಣ ಮಾಡಿರಿ.

ಪಾರಾವತಾಶ್ಚ ತುಷಿತಾ ದೇವಾಃ ಸ್ವಾರೋಚಿಷೇಽಂತರೇ ।
ವಿಪಶ್ಚಿನ್ನಾಮ ದೇವೇಂದ್ರೋ ಬಭೂವಾಸುರಮರ್ದನಃ ॥ ೭ ॥

ಊರ್ಜಃ ಸ್ತಂಭಸ್ತಥಾ ಪ್ರಾಣೋ ದಾಂತೋಽಥ ಋಷಭಸ್ತಥಾ ।
ತಿಮಿರಶ್ಚೋರ್ವರೀವಾಂಶ್ಚ ಸಪ್ತ ಸಪ್ತರ್ಷಯೋಽಭವನ್ ॥ ೮ ॥

ಚೈತ್ರಕಿಂಪುರುಷಾದ್ಯಾಸ್ತು ಸುತಾಃ ಸ್ವಾರೋಚಿಷಸ್ಯ ತು ।
ದ್ವಿತೀಯಮೇತದಾಖ್ಯಾತಮಂತರಂ ಶೃಣು ಚಾಂತರಮ್ ॥ ೯ ॥

ತೃತೀಯೇಽಪ್ಯಂತರೇ ಚೈವ ಉತ್ತಮೋ ನಾಮ ವೈ ಮನುಃ ।
ಸುಶಾಂತಿಸ್ತತ್ರ ದೇವೇಂದ್ರೋ ಬಭೂವಾಮಿತ್ರಕರ್ಷಣಃ ॥ ೧೦ ॥

---

೭. ಆ ಸ್ವಾರೋಚಿಷ ಮನ್ವಂತರದಲ್ಲಿ ಪಾರಾವತ ಮತ್ತು ತುಷಿತ ಎಂಬ ಸಂಜ್ಞಾಂಕಿತರಾದ ದೇವತೆಗಳು ಇರುವರು. ಮತ್ತು ಅಸುರರನ್ನು ಮರ್ದಿಸುವ ದೇವರಾಜನಾದ ಇಂದ್ರನು ವಿಪಶ್ಚಿತ ಎಂಬ ನಾಮಾಂಕಿತನಾಗಿರುವನು.

೮. ಊರ್ಜ, ಸ್ತಂಭ, ಪ್ರಾಣ, ದಾಂತ, ಋಷಭ, ತಿಮಿರ ಮತ್ತು ಉರ್ವರೀವಾ ಎಂಬ ಏಳು ವ್ಯಕ್ತಿಗಳು ಆ ಮನ್ವಂತರದಲ್ಲಿ ಸಪ್ತಮಹರ್ಷಿಗಳಾಗಿದ್ದರು.

೯. ಚೈತ್ರ, ಕಿಂಪುರುಷ ಮುಂತಾದವರು ಸ್ವಾರೋಚಿಷಮನುವಿನ ಪುತ್ರರಾಗಿದ್ದರು. ಹೀಗೆ ಎರಡನೆಯದಾದ ಸ್ವಾರೋಚಿಷ ಮನ್ವಂತರವು ಹೇಳಲ್ಪಟ್ಟಿವೆ ಮುಂದೆ ಉತ್ತಮ ಮನುವಿನ ಮನ್ವಂತರವನ್ನು ಕೇಳು.

೧೦. ಮೂರನೆಯದಾದ ಮನ್ವಂತರದಲ್ಲಿ ಉತ್ತಮ ಎಂಬುವನು ಮನುರಾಜನಾಗಿದ್ದನು. ಹಾಗೂ ಸುಶಾಂತಿ ಎಂಬುವನು ಅಸುರರನ್ನು ನಿಗ್ರಹಿಸುವ ದೇವೇಂದ್ರನಾಗಿದ್ದನು.

ಸುಧಾಮಾನಸ್ತಥಾ ಸತ್ಯಃ ಶಿವಶ್ಚಾಥ ಪ್ರತರ್ದನಃ ।
ವಶವರ್ತಿನಃ ಪಂಚೈತೇ ಗಣಾ ದ್ವಾದಶಕಾಃ ಸ್ಮೃತಾಃ ॥ ೧೧ ॥

ರಜೋಗಾತ್ರೋರ್ಧ್ವಬಾಹುಶ್ಚ ಸವನಶ್ಚಾನಘಸ್ತಥಾ ।
ಸುತಪಾಃ ಶಕ್ರ ಇತ್ಯೇತೇ ಸಪ್ತ ಸಪ್ತರ್ಷಯೋಽಭವನ್ ॥ ೧೨ ॥

ತಾಮಸಸ್ಯಾಂತರೇ ದೇವಾಃ ಸುರಾಯಾಸಹರಾಸ್ತಥಾ ।
ಸತ್ಯಾಶ್ಚ ಸುಧಿಯಶ್ಚೈವ ಸಪ್ತವಿಂಶತಿಕಾ ಗಣಾಃ ॥ ೧೩ ॥

ಶಿಬಿರಿಂದ್ರಸ್ತಥೈವಾಸೀಚ್ಛತಯಜ್ಞೋಪಲಕ್ಷಣಃ ।
ಬಭೂವ ಶಂಕರೇ ಭಕ್ತೋ ಮಹಾದೇವಾರ್ಚನೇ ರತಃ ॥ ೧೪ ॥

---

೧೧. ಸುಧಾಮ, ಸತ್ಯ, ಶಿವ, ಪ್ರತರ್ದನ, ವಶವರ್ತಿ ಎಂಬ ಸಂಜ್ಞಾಂಕಿತಗಳಾದ ಪ್ರತ್ಯೇಕವಾಗಿ ಹನ್ನೆರಡು ವ್ಯಕ್ತಿಗಳಿಂದ ಕೂಡಿದ ಪಂಚಗಣಗಳು ಸ್ಮರಿಸಲ್ಪಟ್ಟಿವೆ.

೧೨. ರಜ, ಗಾತ್ರ, ಊರ್ಧ್ವಬಾಹು, ಸವನ, ಅನಘ, ಸುತಪ, ಮತ್ತು ಶಕ್ರ ಎಂಬ ನಾಮಾಂಕಿತರಾದ ಏಳು ವ್ಯಕ್ತಿಗಳು ಉತ್ತಮ ಮನ್ವಂತರದಲ್ಲಿ ಸಪ್ತರ್ಷಿಗಳಾಗಿದ್ದರು.

೧೩. ನಾಲ್ಕನೆಯದಾದ ತಾಮಸ ಮನುವಿನ ಮನ್ವಂತರದಲ್ಲಿ ಸತ್ಯ, ಸುಧೀ ಸುರಾ, ಆಯಾಸ, ಹರ ಎಂಬ ಇಪ್ಪತ್ತೇಳು ವ್ಯಕ್ತಿಗಳಿಂದ ಕೂಡಿದ ಪಂಚ ದೇವಗಣಗಳು ಪ್ರಖ್ಯಾತವಾಗಿದ್ದುವು.

೧೪. ಆಗ ನೂರು ಯಾಗಗಳನ್ನು ಆಚರಿಸಿದ ಮತ್ತು ಶಂಕರನ ಭಕ್ತನಾಗಿ ಮಹಾದೇವಸ್ವಾಮಿಯ ಅರ್ಚನದಲ್ಲಿ ಆಸಕ್ತನಾದ ಶಿಬಿ ಎಂಬುವನು ದೇವರಾಜನಾಗಿದ್ದನು.

ಜ್ಯೋತಿರ್ಧಾಮ ಪೃಥಕ್ಕಲ್ಪಶ್ಚೈತ್ರೋಽಗ್ನಿವಸನಸ್ತಥಾ ।
ಪೀವರಸ್ತ್ವೃಷಯೋ ಹ್ಯೇತೇ ಸಪ್ತ ತತ್ರಾಪಿ ಚಾಂತರೇ ॥ ೧೫ ॥

ಪಂಚಮೇ ಚಾಪಿ ವಿಪ್ರೇಂದ್ರಾ ರೈವತೋ ನಾಮ ನಾಮತಃ ।
ಮನುರ್ವಿಭುಶ್ಚ ತತ್ರೇಂದ್ರೋ ಬಭೂವಾಸುರಮರ್ದನಃ ॥ ೧೬ ॥

ಅಮಿತಾ ಭೂತಯಸ್ತತ್ರ ವೈಕುಂಠಾಶ್ಚ ಸುರೋತ್ತಮಾಃ ।
ಏತೇ ದೇವಗಣಾಸ್ತತ್ರ ಚತುರ್ದಶ ಚತುರ್ದಶ ॥ ೧೭ ॥

ಹಿರಣ್ಯರೋಮಾ ವೇದಶ್ರೀರೂರ್ಧ್ವಬಾಹುಸ್ತಥೈವ ಚ ।
ವೇದಬಾಹುಃ ಸುಬಾಹುಶ್ಚ ಸಪರ್ಜನ್ಯೋ ಮಹಾಮುನಿಃ ॥ ೧೮ ॥

---

೧೫. ಆ ಮನ್ವಂತರದಲ್ಲಿರುವ ಸಪ್ತ ಮಹರ್ಷಿಗಳು ಕ್ರಮವಾಗಿ ಜ್ಯೋತಿ, ಧಾಮ, ಪೃಥಃಕ್ಕಲ್ಪ, ಚೈತ್ರ, ಅಗ್ನಿವಸನ ಮತ್ತು ಪೀವರ ಎಂಬ ನಾಮಾಂಕಿತರಾಗಿದ್ದರು.

೧೬. ವಿಪ್ರೋತ್ತಮರೇ ! ಐದನೆಯ ಮನ್ವಂತರದಲ್ಲಿ ರೇವತ ಎಂಬ ಹೆಸರಿನಿಂದ ಪ್ರಖ್ಯಾತನಾದ ಮನುರಾಜನಿದ್ದನು. ಆ ಮನ್ವಂತರದಲ್ಲಿ ವಿಭು ಎಂಬುವನು ಅಸುರರನ್ನು ನಿಗ್ರಹಿಸುವ ದೇವೇಂದ್ರನಾಗಿದ್ದನು.

೧೭. ಅಮಿತ, ಭೂತಿ, ವೈಕುಂಠ, ಸುರೋತ್ತಮ ಎಂಬ ಹೆಸರಿನಿಂದ ಪ್ರಸಿದ್ಧವಾದ ಪ್ರತ್ಯೇಕವಾಗಿ ಹದಿನಾಲ್ಕು ವ್ಯಕ್ತಿಗಳಿಂದ ಕೂಡಿದ ದೇವಗಣಗಳಿದ್ದುವು.

೧೮. ಮತ್ತು ಆ ಮನ್ವಂತರದಲ್ಲಿ ಇದ್ದ ಸಪ್ತ ಋಷಿಗಳಿಗೆ ಕ್ರಮವಾಗಿ ಹಿರಣ್ಯರೋಮ, ವೇದಶ್ರೀ, ಊರ್ಧ್ವಬಾಹು, ವೇದಬಾಹು, ಸುಬಾಹು, ಪರ್ಜನ್ಯ ಮತ್ತು ಮಹಾಮುನಿ ಎಂಬ ನಾಮಾಂಕನಗಳಿದ್ದುವು.

ಏತೇ ಸಪ್ತರ್ಷಯೋ ವಿಪ್ರಾಸ್ತತ್ರಾಸನ್ ರೈವತೇಽನ್ತರೇ ।
ಸ್ವಾರೋಚಿಷಶ್ಚೋತ್ತಮಶ್ಚ ತಾಮಸೋ ರೈವತಸ್ತಥಾ ॥ ೧೯ ॥

ಪ್ರಿಯವ್ರತಾನ್ವಿತಾ ಹ್ಯೇತೇ ಚತ್ವಾರೋ ಮನವಃ ಸ್ಮೃತಾಃ ।
ಷಷ್ಠೇ ಮನ್ವಂತರೇ ಚಾಪಿ ಚಾಕ್ಷುಷಸ್ತು ಮನುರ್ದ್ವಿಜಾಃ ॥ ೨೦ ॥

ಮನೋಜವಸ್ತಥೈವೇಂದ್ರೋ ದೇವಾಂಶ್ಚೈವ ನಿಬೋಧತ ।
ಆದ್ಯಾಃ ಪ್ರಭೂತಭಾವ್ಯಾಶ್ಚ ಪ್ರಥನಾಶ್ಚ ದಿವೌಕಸಃ ॥ ೨೧ ॥

ಮಹಾನುಭಾವಾ ಲೇಖ್ಯಾಶ್ಚ ಪಂಚ ದೇವಗಣಾಃ ಸ್ಮೃತಾಃ ।
ವಿರಜಾಶ್ಚ ಹವಿಷ್ಮಾಂಶ್ಚ ಸೋಮೋ ಮನುಸಮಃ ಸ್ಮೃತಃ ॥ ೨೨ ॥

---

೧೯. ವಿಪ್ರರೇ ! ರೈವತ ಮನ್ವಂತರದಲ್ಲಿ ಹಿಂದೆ ಹೇಳಿದ ಸಪ್ತರ್ಷಿಗಳಿದ್ದರು. ಹಿಂದೆ ಹೇಳಿದ ಮನುಗಳಲ್ಲಿ ಸ್ವಾರೋಚಿಷ, ಉತ್ತಮ, ತಾಮಸ ಮತ್ತು ರೈವತ ಎಂಬ ಮನುಗಳು ಪ್ರಿಯವ್ರತ ಪುತ್ರರಿಂದ ಕೂಡಿರುವರು.

೨೦. ದ್ವಿಜರೇ ! ಹಿಂದೆ ಹೇಳಿದ ನಾಲ್ಕು ಮಂದಿ ಮನುಗಳು ಪ್ರಿಯವ್ರತನಿಂದ ಕೂಡಿರುವರೆಂದು ಸ್ಮರಿಸಲ್ಪಟ್ಟಿರುವರು. ಆರನೆಯ ಮನ್ವಂತರದಲ್ಲಿ ಚಾಕ್ಷುಷ ಎಂಬುವನು ಮನುರಾಜನಾಗಿರುವನು.

೨೧. ಆ ಸಮಯದಲ್ಲಿ ಮನೋಜವ ಎಂಬುವನು ದೇವೇಂದ್ರನಾಗಿರುವನು. ಮುಂದೆ ದೇವಗಣಗಳನ್ನು ಶ್ರವಣಮಾಡಿರಿ. ಈ ಮನ್ವಂತರದಲ್ಲಿರುವ ದೇವತಾಗಣಗಳಲ್ಲಿ ಆದ್ಯ, ಪ್ರಭೂತಭಾವ್ಯ ಮತ್ತು ಪ್ರಥನ ಎಂಬ ಗಣಗಳು ಸೇರಿವೆ.

೨೨. ಹಾಗೂ ಮಹಾನುಭಾವ, ಲೇಖ್ಯ ಎಂಬ ಗಣಗಳು ಸೇರಿ ಪಂಚದೇವ ಗಣಗಳು ಸ್ಮರಿಸಲ್ಪಟ್ಟಿವೆ. ವಿರಜ, ಹವಿಷ್ಮಾನ್, ಸೋಮ, ಉತ್ತಮ, ಮಧು ಎಂಬುವರು ಆ ಸಮಯದ ಸಪ್ತರ್ಷಿಗಳಲ್ಲಿ ಸೇರಿದವರಾಗಿರುವರು.

ಅವಿನಾಮಾ ಸವಿಷ್ಣುಶ್ಚ ಸಪ್ತಾಸನ್ನೃಷಯಃ ಶುಭಾಃ ।
ವಿವಸ್ವತಃ ಸುತೋ ವಿಪ್ರಾಃ ಶ್ರಾದ್ಧದೇವೋ ಮಹಾದ್ಯುತಿಃ ॥ ೨೩ ॥

ಮನುಃ ಸಂವರ್ತನೋ ವಿಪ್ರಾಃ ಸಾಂಪ್ರತಂ ಸಪ್ತಮೇಽಂತರೇ ।
ಆದಿತ್ಯಾ ವಸವೋ ರುದ್ರಾ ದೇವಾಸ್ತತ್ರ ಮರುದ್ಗಣಾಃ ॥ ೨೪ ॥

ಪುರಂದರಸ್ತಥೈವೇಂದ್ರೋ ಬಭೂವ ಪರವೀರಹಾ ।
ವಸಿಷ್ಠಃ ಕಶ್ಯಪಶ್ಚಾತ್ರಿರ್ಜಮದಗ್ನಿಶ್ಚ ಗೌತಮಃ ॥ ೨೫ ॥

ವಿಶ್ವಾಮಿತ್ರೋ ಭರದ್ವಾಜಃ ಸಪ್ತ ಸಪ್ತರ್ಷಯೋಽಭವನ್ ।
ವಿಷ್ಣುಶಕ್ತಿರನೌಪಮ್ಯಾ ಸತ್ತ್ವೋದ್ರಿಕ್ತಾ ಸ್ಥಿತಾ ಸ್ಥಿತೌ ॥ ೨೬ ॥

---

೨೩. ಮತ್ತು ಅವಿನಾಮ, ಸವಿಷ್ಣು ಎಂಬುವರು ಸೇರಿ ಮಂಗಳಕರರಾದ ಸಪ್ತರ್ಷಿಗಳಾಗಿದ್ದರು. ಏಳನೆಯ ವೈವಸ್ವತ ಮನ್ವಂತರದಲ್ಲಿ ಮಹಾ ತೇಜಸ್ವಿಯೂ, ಶ್ರಾದ್ಧದೇವನೂ ಮತ್ತು ಸೂರ್ಯಪುತ್ರನೂ ಆದ ವೈವಸ್ವತನು ಮನುವಾಗಿರುವನು.

೨೪. ವಿಪ್ರರೇ ! ಈಗ ನಡೆಯುವ ಏಳನೆಯ ಮನ್ವಂತರದಲ್ಲಿ ಸಂವರ್ತನ ಎಂಬ ಮನುರಾಜನಿರುವನು, ಹಾಗೆ ಆದಿತ್ಯ, ವಸು, ರುದ್ರ, ಮರುದ್ಗಣ ಎಂಬುವರು ದೇವತೆಗಳಾಗಿರುವರು.

೨೫. ಹಾಗೂ ವೀರರಾದ ಶತ್ರುಗಳನ್ನು ಸಂಹರಿಸಬಲ್ಲ ಪುರಂದರನು ದೇವೇಂದ್ರನಾಗಿರುವನು. ಈಗಿನ ಸಪ್ತರ್ಷಿಗಳಲ್ಲಿ ವಸಿಷ್ಠ, ಕಶ್ಯಪ, ಅತ್ರಿ, ಜಮದಗ್ನಿ ಮತ್ತು ಗೌತಮ ಎಂಬುವರು ಕೆಲವರು ಋಷಿಗಳಾಗಿರುವರು.

೨೬. ಹಾಗೂ ವಿಶ್ವಾಮಿತ್ರ, ಭರದ್ವಾಜ ಎಂಬುವರು ಸೇರಿ ಏಳು ಮಂದಿ ಸಪ್ತರ್ಷಿಗಳಿದ್ದರು. ನಿರುಪಮವೂ, ಸತ್ತ್ವಗುಣ ಪ್ರಚುರವೂ ಆದ ವಿಷ್ಣುಶಕ್ತಿಯು ಜಗತ್ತಿನ ರಕ್ಷಣಕ್ಕೆ ನಿಮಿತ್ತವಾಗಿರುವುದು.

ತದಂಶಭೂತಾ ರಾಜಾನಃ ಸರ್ವೇ ಚ ತ್ರಿದಿವೌಕಸಃ ।
ಸ್ವಾಯಂಭುವೇಽಂತರೇ ಪೂರ್ವಂ ಪ್ರಕೃತ್ಯಾಂ ಮಾನಸಃ ಸುತಃ ॥ ೨೭ ॥

ರುಚೇಃ ಪ್ರಜಾಪತೇರ್ಜಜ್ಞೇ ತದಂಶೇನಾಭವದ್ದ್ವಿಜಾಃ ।
ತತಃ ಪುನರಸೌ ದೇವಃ ಪ್ರಾಪ್ತೇ ಸ್ವಾರೋಚಿಷೇಽಂತರೇ ॥ ೨೮ ॥

ತುಷಿತಾಯಾಂ ಸಮುತ್ಪನ್ನಸ್ತುಷಿತೈಃ ಸಹ ದೈವತೈಃ ।
ಉತ್ತಮೇ ತ್ವಂತರೇ ವಿಷ್ಣುಃ ಸತ್ಯೈಃ ಸಹ ಸುರೋತ್ತಮಃ ॥ ೨೯ ॥

ಸತ್ಯಾಯಾಮಭವತ್ಸತ್ಯಃ ಸತ್ಯರೂಪೋ ಜನಾರ್ದನಃ ।
ತಾಮಸಸ್ಯಾಂತರೇ ಚೈವ ಸಂಪ್ರಾಪ್ತೇ ಪುನರೇವ ಹಿ ॥ ೩೦ ॥

---

೨೭. ಆ ವಿಷ್ಣು ಶಕ್ತಿಯ ಅಂಶ ಸಂಭೂತರಾದ ಸಮಸ್ತ ದೇವತೆಗಳೂ, ರಾಜರೂ ಜಗತ್ತನ್ನು ರಕ್ಷಿಸುವರು. ಪೂರ್ವದ ಸ್ವಾಯಂಭುವ ಮನ್ವಂತರದಲ್ಲಿ ಪ್ರಕೃತಿ ದೇವಿಯಲ್ಲಿ ಮಾನಸ ಪುತ್ರನು ಹುಟ್ಟಿದನು.

೨೮. ದ್ವಿಜರೇ ! ಮಹಾವಿಷ್ಣುವು ತನ್ನ ಅಂಶದಿಂದ ರುಚಿ ಪ್ರಜಾಪತಿಯ ಮಾನಸಪುತ್ರನಾಗಿ ಜನಿಸಿದನು. ಮತ್ತೆ ಸ್ವಾರೋಚಿಷ ಮನ್ವಂತರವು ಪ್ರಾಪ್ತವಾಗಲು ಮತ್ತೊಂದು ಅವತಾರವೆತ್ತಿದನು.

೨೯. ಆಗ ತುಷಿತ ಎಂಬ ದೇವತೆಗಳೊಡನೆ ತುಷಿತಾದೇವಿಯಲ್ಲಿ ಜನ್ಮವೆತ್ತಿದನು. ಮತ್ತು ದೇವೋತ್ತಮನಾದ ವಿಷ್ಣುವು ಉತ್ತಮ ಮನ್ವಂತರದಲ್ಲಿ ಸತ್ಯ ಎಂಬ ದೇವತೆಗಳೊಡನೆ ಜನಿಸಿದನು.

೩೦. ಸತ್ಯಸ್ವರೂಪನಾದ ಜನಾರ್ದನಸ್ವಾಮಿಯು ಸತ್ಯಾದೇವಿಯಲ್ಲಿ ಸತ್ಯ ಎಂಬ ನಾಮದಿಂದ ಅವತರಿಸಿದನು. ಹಾಗೂ ತಾಮಸ ಎಂಬ ಮನುವಿನ ಮನ್ವಂತರವು ಪ್ರಾಪ್ತವಾಗಲು ಮತ್ತೆ ಅವತರಿಸುವನು.

ಹರ್ಯಾಯಾಂ ಹರಿಭಿರ್ದೇವೈರ್ಹರಿರೇವಾಭವದ್ಧರಿಃ ।
ರೈವತೇಽಪ್ಯಂತರೇ ಚೈವ ಸಂಕಲ್ಪಾನ್ಮಾನಸೋ ಹರಿಃ ॥ ೩೧

ಸಂಭೂತೋ ಮಾನಸೈಃ ಸಾರ್ಧಂ ದೇವೈಃ ಸಹ ಮಹಾದ್ಯುತಿಃ ।
ಚಾಕ್ಷುಷೇಽಪ್ಯಂತರೇ ಚೈವ ವೈಕುಂಠಃ ಪುರುಷೋತ್ತಮಃ ॥ ೩೨ ॥

ವಿಕುಂಠಾಯಾಮಸೌ ಜಜ್ಞೇ ವೈಕುಂಠೈರ್ದೈವತೈಃ ಸಹ ।
ಮನ್ವಂತರೇ ಚ ಸಂಪ್ರಾಪ್ತೇ ತಥಾ ವೈವಸ್ವತೇಽಂತರೇ ॥ ೩೩ ॥

ವಾಮನಃ ಕಶ್ಯಪಾದ್ವಿಷ್ಣುರದಿತ್ಯಾಂ ಸಂಬಭೂವ ಹ ।
ತ್ರಿಭಿಃ ಕ್ರಮೈರಿಮಾನ್ ಲೋಕಾನ್ ಜಿತ್ವಾ ಯೇನ ಮಹಾತ್ಮನಾ ॥೩೪॥

---

೩೧. ಆಗ ಶ್ರೀಹರಿಯು ಹರಿ ಎಂಬ ದೇವತೆಗಳೊಡನೆ ಹರಿಸ್ವರೂಪನಾಗಿ ಹರ್ಯಾ ಎಂಬಾಕೆಯಲ್ಲಿ ಅವತರಿಸಿದನು. ರೈವತ ಮನ್ವಂತರದಲ್ಲಿ ವಿಷ್ಣುವು ಸಂಕಲ್ಪಮಾತ್ರದಿಂದ ಮಾನಸರೂಪದಿಂದ ಹುಟ್ಟಿದನು.

೩೨. ಮಹಾಕಾಂತಿಯುಕ್ತನಾದ ಹರಿಯು ಮಾನಸ ಎಂಬ ದೇವತೆಗಳೊಡನೆ ಜನಿಸಿದನು. ಮುಂದಿನ ಚಾಕ್ಷುಷ ಮನ್ವಂತರದಲ್ಲಿ ಪುರುಷೋತ್ತಮನಾದ ವಿಷ್ಣುವು ವೈಕುಂಠರೂಪದಿಂದ ಜನಿಸಿದನು.

೩೩. ಆಗ ವೈಕುಂಠ ಎಂಬ ದೇವತೆಗಳೊಡನೆ ವಿಕುಂಠಾದೇವಿಯಲ್ಲಿ ಜನ್ಮವೆತ್ತಿದನು. ಮತ್ತು ವೈವಸ್ವತವೆಂಬ ಏಳನೆಯ ಮನ್ವಂತರವು ಪ್ರಾಪ್ತವಾಗಲು ಮತ್ತೊಂದು ಅವತಾರವನ್ನು ಮಾಡಿದನು.

೩೪. ವಿಷ್ಣುವು ಕಶ್ಯಪಪ್ರಜಾಪತಿಯಿಂದ ಅದಿತಿದೇವಿಯಲ್ಲಿ ವಾಮನರೂಪದಿಂದ ಅವತರಿಸಿದನು. ಮತ್ತು ಮಹಾತ್ಮನಾದ ವಾಮನಮೂರ್ತಿಯು ಮೂರು ಪಾದನ್ಯಾಸಗಳಿಂದ ಸಮಸ್ತಲೋಕಗಳನ್ನು ಗೆದ್ದನು.

ಪುರಂದರಾಯ ತ್ರೈಲೋಕ್ಯಂ ದತ್ತಂ ನಿಹತಕಂಟಕಮ್ ।
ಇತ್ಯೇತಾಸ್ತನವಸ್ತಸ್ಯ ಸಪ್ತ ಮನ್ವಂತರೇಷು ವೈ ॥ ೩೫ ॥

ಸಪ್ತ ಚೈವಾಭವನ್ ವಿಪ್ರಾ ಯಾಭಿಃ ಸಂಕರ್ಷಿತಾಃ ಪ್ರಜಾಃ ।
ಯಸ್ಮಾದ್ವಿಶ್ವಮಿದಂ ಕೃತ್ಸ್ನಂ ವಾಮನೇನ ಮಹಾತ್ಮನಾ ॥ ೩೬ ॥

ತಸ್ಮಾತ್ ಸರ್ವೈಃ ಸ್ಮೃತೋ ನೂನಂ ದೇವೈಃ ಸರ್ವೇಷು ದೈತ್ಯಹಾ ।
ಏಷ ಸರ್ವಂ ಸೃಜತ್ಯಾದೌ ಪಾತಿ ಹಂತಿ ಚ ಕೇಶವಃ ॥ ೩೭ ॥

ಭೂತಾಂತರಾತ್ಮಾ ಭಗವಾನ್ನಾರಾಯಣ ಇತಿ ಶ್ರುತಿಃ ।
ಏಕಾಂಶೇನ ಜಗತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ೩೮ ॥

---

೩೫. ಮತ್ತು ಶತ್ರುಪೀಡೆಗಳಿಂದ ವರ್ಜಿತವಾದ ತ್ರೈಲೋಕ್ಯವನ್ನು ಇಂದ್ರನಿಗೆ ಕೊಟ್ಟನು. ಈ ರೀತಿಯಾಗಿ ಏಳು ಮನ್ವಂತರಗಳಲ್ಲಿ ಮಹಾವಿಷ್ಣುವಿನ ಮೂರ್ತಿಗಳು ಅವತರಿಸಿರುವರು.

೩೬. ವಿಪ್ರರೇ ! ಪ್ರಜೆಗಳನ್ನು ಸನ್ಮಾರ್ಗಕ್ಕೆ ಎಳೆದಿರುವ ಸಪ್ತ ಮೂರ್ತಿಗಳು ವಿಷ್ಣುವಿನ ಅಂಶದಿಂದ ಹುಟ್ಟಿದುವು. ಇವುಗಳಲ್ಲಿ ಮಹಾತ್ಮನಾದ ವಾಮನಮೂರ್ತಿ ಯಿಂದ ಈ ಸಂಪೂರ್ಣ ಪ್ರಪಂಚವು ರಾಕ್ಷಸ ಬಾಧೆಯಿಂದ ಉದ್ಧರಿಸಲ್ಪಟ್ಟಿದೆ.

೩೭. ಆದುದರಿಂದ ಸಮಸ್ತ ದೇವತೆಗಳಲ್ಲಿ ವಾಮನಮೂರ್ತಿಯು ದೈತ್ಯ ಸಂಹಾರಿ ಎಂದು ಎಲ್ಲಾ ದೇವತೆಗಳಿಂದಲೂ ಸ್ಮರಿಸಲ್ಪಟ್ಟಿರುವನು. ಮಹಾವಿಷ್ಣುವು ಆದಿಯಲ್ಲಿ ಸಮಸ್ತ ಜಗತ್ತನ್ನು ಸೃಜಿಸಿ ಹಾಗೆಯೇ ರಕ್ಷಿಸಿ ಕಡೆಯಲ್ಲಿ ಸಂಹರಿಸುತ್ತಾನೆ.

೩೮. ಭಗವಂತನಾದ ನಾರಾಯಣನು ಸರ್ವ ಭೂತಗಳ ಅಂತರ್ಯಾಮಿ ಯಾಗಿ ತನ್ನ ಒಂದು ಅಂಶದಿಂದ ಸಮಸ್ತ ಜಗತ್ತನ್ನೂ ವ್ಯಾಪಿಸಿಕೊಂಡಿರುವನೆಂದು ವೇದವಾಕ್ಯವು ಬೋಧಿಸುತ್ತದೆ.

ಚತುರ್ಧಾ ಸಂಸ್ಥಿತೋ ವ್ಯಾಪೀ ಸಗುಣೋ ನಿರ್ಗುಣೋಽಪಿ ಚ ।
ಏಕಾ ಭಗವತೋ ಮೂರ್ತಿರ್ಜ್ಞಾನರೂಪಾ ಶಿವಾಮಲಾ ॥ ೩೯ ॥

ವಾಸುದೇವಾಭಿಧಾನಾ ಸಾ ಗುಣಾತೀತಾ ಸುನಿಷ್ಕಲಾ ।
ದ್ವಿತೀಯಾ ಕಾಲಸಂಜ್ಞಾನ್ಯಾ ತಾಮಸೀ ಶಿವಸಂಜ್ಞಿತಾ ॥ ೪೦ ॥

ನಿಹಂತ್ರೀ ಸಕಲಸ್ಯಾಂತೇ ವೈಷ್ಣವೀ ಪರಮಾ ತನುಃ ।
ಸತ್ತ್ವೋದ್ರಿಕ್ತಾ ತೃತೀಯಾನ್ಯಾ ಪ್ರದ್ಯುಮ್ನೇತಿ ಚ ಸಂಜ್ಞಿತಾ ॥ ೪೧ ॥

ಜಗತ್ಸಂಸ್ಥಾಪಯೇದ್ವಿಶ್ವಂ ಸಾ ವಿಷ್ಣೋಃ ಪ್ರಕೃತಿರ್ಧ್ರುವಾ ।
ಚತುರ್ಥೀ ವಾಸುದೇವಸ್ಯ ಮೂರ್ತಿರ್ಬ್ರಹ್ಮೇತಿ ಸಂಜ್ಞಿತಾ ॥ ೪೨ ॥

---

೩೯. ಮಹಾವಿಷ್ಣುವು ವ್ಯಾಪಕನಾಗಿಯೂ, ಸಗುಣ, ನಿರ್ಗುಣ ಮುಂತಾದ ಅನೇಕ ರೂಪಗಳಿಂದ ನಾಲ್ಕುಭಾಗವಾಗಿಯೂ ಇರುವನು. ಭಗವಂತನಾದ ನಾರಾಯಣನ ಒಂದು ಮೂರ್ತಿಯು ಜ್ಞಾನರೂಪವೂ, ಮಂಗಳಕರವೂ, ನಿರ್ಮಲವೂ ಆಗಿದೆ.

೪೦. ವಾಸುದೇವ ಎಂಬ ಅಭಿಧಾನವುಳ್ಳ ಆ ಮೂರ್ತಿಯು ಗುಣಾತೀತವೂ, ನಿಷ್ಕಳವೂ ಆಗಿದೆ. ಕಾಲ ಎಂಬ ಸಂಜ್ಞಾಂಕಿತವೂ, ತಮೋಗುಣಮಯವೂ, ಶಿವ ಎಂಬ ಸಂಜ್ಞಾಂಕಿತವೂ ಆದ ರೂಪವು ವಿಷ್ಣುವಿನ ಎರಡನೆಯ ಮೂರ್ತಿಯು.

೪೧. ವಿಷ್ಣುವಿನ ಶ್ರೇಷ್ಠವಾದ ಆ ಮೂರ್ತಿಯು ಪ್ರಳಯಕಾಲದಲ್ಲಿ ಸರ್ವವಸ್ತುವನ್ನೂ ನಾಶಮಾಡುವುದು. ಸತ್ತ್ವಗುಣದಿಂದ ಪೂರ್ಣವಾದ ಭಗವಂತನ ಮೂರನೆಯ ಮೂರ್ತಿಯು ಪ್ರದ್ಯುಮ್ನನೆಂದು ಕರೆಯಲ್ಪಟ್ಟಿದೆ.

೪೨. ಪ್ರಕೃತಿರೂಪವೂ, ಶಾಶ್ವತವೂ ಆದ ವಿಷ್ಣುವಿನ ಆ ಮೂರ್ತಿಯು ಸಮಸ್ತ ವಿಶ್ವವನ್ನು ರಕ್ಷಿಸುವುದು. ವಾಸುದೇವನ ನಾಲ್ಕನೆಯ ಮೂರ್ತಿಯು ಬ್ರಹ್ಮ ಎಂಬ ನಾಮಾಂಕಿತವಾಗಿದೆ.

ರಾಜಸೀ ಸಾನಿರುದ್ಧಸ್ಯ ಪುರುಷಸೃಷ್ಟಿಕಾರಿತಾ ।
ಯಃ ಸ್ವಪಿತ್ಯಖಿಲಂ ಹತ್ವಾ ಪ್ರದ್ಯುಮ್ನೇನ ಸಹ ಪ್ರಭುಃ ॥ ೪೩ ॥

ನಾರಾಯಣಾಖ್ಯೋ ಬ್ರಹ್ಮಾಸೌ ಪ್ರಜಾಸರ್ಗಂ ಕರೋತಿ ಸಃ ।
ಯಾಸೌ ನಾರಾಯಣತನುಃ ಪ್ರದ್ಯುಮ್ನಾಖ್ಯಾ ಶುಭಾ ಸ್ಮೃತಾ ॥ ೪೪ ॥

ತಯಾ ಸಮ್ಮೋಹಯೇದ್ವಿಶ್ವಂ ಸದೇವಾಸುರಮಾನುಷಮ್ ।
ತತಃ ಸೈವ ಜಗನ್ಮೂರ್ತಿಃ ಪ್ರಕೃತಿಃ ಪರಿಕೀರ್ತಿತಾ ॥ ೪೫ ॥

ವಾಸುದೇವೋ ಹ್ಯನಂತಾತ್ಮಾ ಕೇವಲೋ ನಿರ್ಗುಣೋ ಹರಿಃ ।
ಪ್ರಧಾನಂ ಪುರುಷಃ ಕಾಲಃ ಸತ್ತ್ವತ್ರಯಮನುತ್ತಮಮ್ ॥ ೪೬ ॥

---

೪೩. ರಜೋಗುಣದಿಂದ ಕೂಡಿ ಪುರುಷ ಸೃಷ್ಟಿಯನ್ನು ನಿರ್ವಹಿಸುವ ಆ ಮೂರ್ತಿಯು ಅನಿರುದ್ಧನೆಂದು ಕರೆಯಲ್ಪಟ್ಟಿದೆ. ನಾರಾಯಣನೆಂಬ ಭಗವಂತನಾದ ಪ್ರಭುವು ಸಮಸ್ತ ವಿಶ್ವವನ್ನು ಸಂಹರಿಸಿ ಪ್ರದ್ಯುಮ್ನನೊಡನೆ ಶಯನಮಾಡಿ ಕೊಂಡಿರುವನು.

೪೪. ಇದೇ ನಾರಾಯಣ ಎಂಬ ಸಂಜ್ಞೆಯುಳ್ಳ ಪರಬ್ರಹ್ಮನು ಪ್ರಜಾ ಸೃಷ್ಟಿಯನ್ನು ಮಾಡುತ್ತಿರುವನು. ಮತ್ತು ಪ್ರದ್ಯುಮ್ನ ಎಂಬ ಸಂಜ್ಞಾಂಕಿತವಾದ ಮತ್ತು ಮಂಗಳಮಯವಾದ ನಾರಾಯಣಮೂರ್ತಿಯು ಹಿಂದೆ ಸ್ಮರಿಸಲ್ಪಟ್ಟಿದೆಯಷ್ಟೆ.

೪೫. ಆ ಮೂರ್ತಿಯಿಂದ ಪುರುಷೋತ್ತಮನು ದೇವ, ಅಸುರ, ಮಾನವರಿಂದ ಕೂಡಿದ ವಿಶ್ವವನ್ನು ಮೋಹಗೊಳಿಸುವನು. ತರುವಾಯ ಜಗನ್ಮೂರ್ತಿಯು ಪ್ರಕೃತಿ ಎಂದು ಕೀರ್ತಿಸಲ್ಪಟ್ಟಿರುವುದು.

೪೬. ಅನಂತರೂಪಿಯೂ, ಕೇವಲನೂ, ನಿರ್ಗುಣನೂ, ಮಹಾವಿಷ್ಣುವೂ, ಪ್ರಧಾನ ಪುರುಷ ಮತ್ತು ಕಾಲಸ್ವರೂಪಿಯೂ, ನಿರುಪಮನೂ, ಮೂರುವಿಧವಾದ ಸತ್ತ್ವಸ್ವರೂಪನೂ ಆದ ವಾಸುದೇವನು ಪರಮ ತತ್ವರೂಪನಾಗಿರುವನು.

ವಾಸುದೇವಾತ್ಮಕಂ ನಿತ್ಯಮೇತದ್ವಿಜ್ಞಾಯ ಮುಚ್ಯತೇ ।
ಏಕಂ ಚೇದಂ ಚತುಷ್ಪಾದಂ ಚತುರ್ಧಾ ಪುನರಚ್ಯುತಃ ॥ ೪೭ ॥

ಬಿಭೇದ ವಾಸುದೇವೋಽಸೌ ಪ್ರದ್ಯುಮ್ನೋ ಭಗವಾನ್ ಹರಿಃ ।
ಕೃಷ್ಣದ್ವೈಪಾಯನೋ ವ್ಯಾಸೋ ವಿಷ್ಣುರ್ನಾರಾಯಣಃ ಸ್ವಯಮ್ ॥

ಅವಾತರತ್ಸ ಸಂಪೂರ್ಣಂ ಸ್ವೇಚ್ಛಯಾ ಭಗವಾನ್ ಹರಿಃ ।
ಅನಾದ್ಯಂತಂ ಪರಂ ಬ್ರಹ್ಮ ನ ದೇವಾ ಋಷಯೋ ವಿದುಃ ॥ ೪೯ ॥

ಏಕೋಽಯಂ ವೇದ ಭಗವಾನ್ ವ್ಯಾಸೋ ನಾರಾಯಣಃ ಪ್ರಭುಃ ।
ಇತ್ಯೇತದ್ವಿಷ್ಣುಮಾಹಾತ್ಮ್ಯಂ ಕಥಿತಂ ಮುನಿಸತ್ತಮಾಃ ।

---

೪೭. ಹೀಗೆ ವಾಸುದೇವಾತ್ಮಕವಾದ ಪರಬ್ರಹ್ಮವನ್ನು ತಿಳಿದ ಮಾನವನು ಸಂಸಾರ ಬಂಧದಿಂದ ಮುಕ್ತನಾಗುವನು. ಅದ್ವಿತೀಯನಾದ ಅಚ್ಯುತನು ತನ್ನ ಏಕರೂಪವನ್ನು ನಾಲ್ಕು ಪಾದಗಳ ಅಂಶದಿಂದ ನಾಲ್ಕುವಿಧವಾಗಿ ವಿಂಗಡಿಸಿದನು.

೪೮. ವಾಸುದೇವನೂ, ಪ್ರದ್ಯುಮ್ನನೂ, ಭಗವಂತನಾದ ಹರಿಯೂ, ಕೃಷ್ಣ ದ್ವೈಪಾಯನನೆಂಬ ವ್ಯಾಸಮುನಿಯೂ, ಶ್ರೀಮನ್ನಾರಾಯಣನೂ, ವಿಷ್ಣುವೂ ಒಂದೇ ತತ್ತ್ವವಾಗಿರುವುದು.

೪೯. ಆ ಭಗವಂತನಾದ ಹರಿಯು ಸ್ವಸಂಕಲ್ಪದಿಂದಲೇ ಸಂಪೂರ್ಣವಾಗಿ ಅವತಾರಮಾಡಿದನು. ಹೀಗೆ ಅವತರಿಸಿದ ಆದ್ಯಂತಶೂನ್ಯವಾದ ಪರಬ್ರಹ್ಮ ವಸ್ತುವನ್ನು ದೇವತೆಗಳೂ ಋಷಿಗಳೂ ತಿಳಿಯುವುದಿಲ್ಲ.

೫೦. ಪ್ರಭುವೂ, ನಾರಾಯಣಸ್ವರೂಪನೂ ಮತ್ತು ಷಡ್ಗುಣೈಶ್ವರ್ಯ ಸಂಪನ್ನನೂ ಆದ ವ್ಯಾಸ ಮುನಿಯು ತಿಳಿದಿರುವನು. ಮುನಿಶ್ರೇಷ್ಠರೇ ! ಈರೀತಿ

ಏತತ್ಸತ್ಯಂ ಪುನಃ ಸತ್ಯಮೇವಂ ಜ್ಞಾತ್ವಾ ನ ಮುಹ್ಯತಿ ॥ ೫೦ ॥

ಇತಿ ಶ್ರೀ ಕೂರ್ಮಪುರಾಣೇ ಏಕಪಂಚಾಶತ್ತಮೋಽಧ್ಯಾಯಃ.

---

ಯಾಗಿ ನನ್ನಿಂದ ಮಹಾವಿಷ್ಣುವಿನ ಮಾಹಾತ್ಮ್ಯೆಯು ಕೀರ್ತಿಸಲ್ಪಟ್ಟಿದೆ. ಇದು ಸತ್ಯವಾದದ್ದು. ಈ ಪರಮಾರ್ಥವನ್ನು ತಿಳಿದ ಮಾನವನು ಮೋಹಗೊಳ್ಳುವುದಿಲ್ಲ.

( ಕೂರ್ಮ ಪುರಾಣದಲ್ಲಿ ಐವತ್ತೊಂದನೆಯ ಅಧ್ಯಾಯವು ಮುಗಿದುದು. )

ಶ್ರೀಃ

# ಕೂರ್ಮಪುರಾಣಂ



## ದ್ವಿಪಂಚಾಶತ್ತಮೋಽಧ್ಯಾಯಃ.

**ಸೂತ ಉವಾಚ :—**

**ಅಸ್ಮಿನ್ಮನ್ವಂತರೇ ಪೂರ್ವಂ ವರ್ತಮಾನೇ ಮಹಾನ್ ಪ್ರಭುಃ ।**
**ದ್ವಾಪರೇ ಪ್ರಥಮೋ ವ್ಯಾಸೋ ಮನುಃ ಸ್ವಾಯಂಭುವೋ ಮತಃ ॥ ೧ ॥**

**ಬಿಭೇದ ಬಹುಧಾ ವೇದಂ ನಿಯೋಗಾದ್ಬ್ರಹ್ಮಣಃ ಪ್ರಭೋಃ ।**
**ದ್ವಿತೀಯೇ ದ್ವಾಪರೇ ಚೈವ ವೇದವ್ಯಾಸಃ ಪ್ರಜಾಪತಿಃ ॥ ೨ ॥**

---

## ಐವತ್ತೆರಡನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ನುಡಿದನು :—ಪೂರ್ವದಲ್ಲಿ ಮೊದಲನೆಯ ಮನ್ವಂತರವು ನಡೆಯುತ್ತಿರಲು ಮಹಾತ್ಮನೂ, ಪ್ರಭುವೂ ಆದ ಸ್ವಾಯಂಭುವ ಮನುವು ಮೊದಲನೆಯ ದ್ವಾಪರ ಯುಗದಲ್ಲಿ ವೇದವ್ಯಾಸಮುನಿಯಾಗಿದ್ದನು.

೨. ಆ ವ್ಯಾಸಮುನಿಯು ಬ್ರಹ್ಮದೇವನ ನಿದೇಶದಿಂದ ಅನೇಕವಿಧವಾಗಿ ವೇದವನ್ನು ಬಹುಭಾಗವಾಗಿ ವಿಂಗಡಿಸಿದನು. ಎರಡನೆಯ ದ್ವಾಪರ ಯುಗದಲ್ಲಿ ಬ್ರಹ್ಮದೇವನು ವೇದವ್ಯಾಸಮುನಿಯಾಗಿದ್ದನು.

ತೃತೀಯೇ ಚೋಶನಾ ವ್ಯಾಸಶ್ಚತುರ್ಥೇ ಸ್ಯಾದ್ಬೃಹಸ್ಪತಿಃ ।
ಸವಿತಾ ಪಂಚಮೇ ವ್ಯಾಸಃ ಷಷ್ಠೇ ಮೃತ್ಯುಃ ಪ್ರಕೀರ್ತಿತಃ ॥ ೩ ॥

ಸಪ್ತಮೇ ಚ ತಥೈವೇಂದ್ರೋ ವಸಿಷ್ಠಶ್ಚಾಷ್ಟಮೇ ಮತಃ ।
ಸಾರಸ್ವತಶ್ಚ ನವಮೇ ತ್ರಿಧಾಮಾ ದಶಮೇ ಮತಃ ॥ ೪ ॥

ಏಕಾದಶೇ ತು ಋಷಭಃ ಸುತೇಜಾ ದ್ವಾದಶೇ ಸ್ಮೃತಃ ।
ತ್ರಯೋದಶೇ ತಥಾ ಧರ್ಮಃ ಸುಚಕ್ಷುಸ್ತು ಚತುರ್ದಶೇ ॥ ೫ ॥

ತ್ರಯ್ಯಾರುಣಿಃ ಪಂಚದಶೇ ಷೋಡಶೇ ತು ಧನಂಜಯಃ ।
ಕೃತಂಜಯಃ ಸಪ್ತದಶೇ ಹ್ಯಷ್ಟಾದಶೇ ಋತಂಜಯಃ ॥ ೬ ॥

---

೩. ಹಾಗೆಯೇ ಮೂರನೆಯ ದ್ವಾಪರಯುಗದಲ್ಲಿ ಶುಕ್ರಾಚಾರ್ಯನೂ, ನಾಲ್ಕನೆಯ ಯುಗದಲ್ಲಿ ಬೃಹಸ್ಪತಿಯೂ, ಐದನೆಯ ಯುಗದಲ್ಲಿ ಸೂರ್ಯನೂ, ಆರನೆಯ ಯುಗದಲ್ಲಿ ಮೃತ್ಯುವೂ ವೇದವ್ಯಾಸಮುನಿಯ ಕಾರ್ಯವನ್ನು ನಡೆಸಿದರೆಂದು ಹೇಳಲ್ಪಟ್ಟಿರುವರು.

೪. ಹಾಗೆ ಏಳನೆಯ ಯುಗದಲ್ಲಿ ಇಂದ್ರನೂ, ಎಂಟನೆಯ ಯುಗದಲ್ಲಿ ವಸಿಷ್ಠನೂ, ಒಂಭತ್ತನೆಯ ಯುಗದಲ್ಲಿ ಸಾರಸ್ವತನೂ ಮತ್ತು ಹತ್ತನೆಯ ಯುಗದಲ್ಲಿ ತ್ರಿಧಾಮ ಎಂಬುವನೂ ವೇದವ್ಯಾಸಮುನಿಯ ಪದವಿಯಲ್ಲಿದ್ದರು.

೫. ಮತ್ತು ಹನ್ನೊಂದನೆಯ ಯುಗದಲ್ಲಿ ಋಷಭ ಮುನಿಯೂ, ಹನ್ನೆರಡನೆಯ ಯುಗದಲ್ಲಿ ಸುತೇಜ ಮುನಿಯೂ, ಹದಿಮೂರನೆಯ ಯುಗದಲ್ಲಿ ಧರ್ಮ ಪ್ರಜಾಪತಿಯೂ, ಹದಿನಾಲ್ಕನೆಯ ಯುಗದಲ್ಲಿ ಸುಚಕ್ಷು ಮುನಿಯೂ ವೇದವ್ಯಾಸ ಮುನಿಗಳಾಗಿದ್ದರೆಂದು ಸ್ಮರಿಸಲ್ಪಟ್ಟಿರುವರು.

೬. ಪಂಚದಶ ಯುಗದಲ್ಲಿ ತ್ರಯ್ಯಾರುಣಿ ಮುನಿಯೂ, ಷೋಡಶ ಯುಗದಲ್ಲಿ ಧನಂಜಯನೂ, ಸಪ್ತದಶಯುಗದಲ್ಲಿ ಕೃತಂಜಯನೂ, ಅಷ್ಟಾದಶ ಯುಗದಲ್ಲಿ ಋತಂಜಯನೂ ವೇದವ್ಯಾಸಮುನಿಯ ಅಧಿಕಾರವನ್ನು ನೆರವೇರಿಸಿದರು.

ತತೋ ವ್ಯಾಸೋ ಭರದ್ವಾಜಸ್ತಸ್ಮಾದೂರ್ಧ್ವಂ ತು ಗೌತಮಃ ।
ವಾಚಶ್ರವಾಶ್ಚೈಕವಿಂಶೇ ತಸ್ಮಾನ್ನಾರಾಯಣಃ ಪರಃ ॥ ೭ ॥

ತೃಣಬಿಂದುಸ್ತ್ರಯೋವಿಂಶೇ ವಾಲ್ಮೀಕಿಸ್ತತ್ಪರಃ ಸ್ಮೃತಃ ।
ಪಂಚವಿಂಶೇ ತಥಾ ಪ್ರಾಪ್ತೇ ಯಸ್ಮಿನ್ ವೈ ದ್ವಾಪರೇ ದ್ವಿಜಾಃ ॥ ೮ ॥

ಪರಾಶರಸುತೋ ವ್ಯಾಸಃ ಕೃಷ್ಣದ್ವೈಪಾಯನೋಽಭವತ್ ।
ಸ ಏವ ಸರ್ವವೇದಾನಾಂ ಪುರಾಣಾನಾಂ ಪ್ರದರ್ಶಕಃ ॥ ೯ ॥

ಪಾರಾಶರ್ಯೋ ಮಹಾಯೋಗೀ ಕೃಷ್ಣದ್ವೈಪಾಯನೋ ಹರಿಃ ।
ಆರಾಧ್ಯ ದೇವಮೀಶಾನಂ ದೃಷ್ಟ್ವಾ ಸ್ತುತ್ವಾ ತ್ರಿಲೋಚನಮ್ ॥ ೧೦ ॥

---

೭. ತರುವಾಯ ಭರದ್ವಾಜ ಮುನಿಯೂ, ಅನಂತರದಲ್ಲಿ ಗೌತಮಮುನಿಯೂ ವೇದವ್ಯಾಸರಾಗಿದ್ದರು. ಇಪ್ಪತ್ತೊಂದನೆಯ ಯುಗದಲ್ಲಿ ವಾಚಶ್ರವ ಎಂಬುವನೂ ತದನಂತರದಲ್ಲಿ ಶ್ರೀಮನ್ನಾರಾಯಣನೂ ವೇದವ್ಯಾಸರಾಗಿದ್ದರು.

೮. ಇಪ್ಪತ್ತಮೂರನೆಯ ದ್ವಾಪರಯುಗದಲ್ಲಿ ತೃಣಬಿಂದು ಮುನಿಯೂ, ಅದರ ಮುಂದಿನ ಯುಗದಲ್ಲಿ ವಾಲ್ಮೀಕಿ ಮುನಿಯೂ ವೇದವ್ಯಾಸರಾಗಿದ್ದರು. ದ್ವಿಜರೇ ! ಹಾಗೆಯೇ ಕ್ರಮವಾಗಿ ಇಪ್ಪತ್ತೈದನೆಯ ದ್ವಾಪರಯುಗವು ಪ್ರಾಪ್ತವಾಯಿತು.

೯. ಆಗ ಪರಾಶರಮುನಿಯ ಪುತ್ರನಾದ ಕೃಷ್ಣದ್ವೈಪಾಯನ ಮುನಿಯು ವ್ಯಾಸನಾಗಿದ್ದನು. ಅವನು ಸರ್ವವೇದಗಳನ್ನೂ, ಪುರಾಣಗಳನ್ನೂ ಪ್ರಪಂಚಕ್ಕೆ ತೋರ್ಪಡಿಸಿದನು.

೧೦. ಪರಾಶರಮುನಿಯ ಪುತ್ರನೂ ಮಹಾಯೋಗಿಯೂ, ಮಹಾವಿಷ್ಣುವಿನ ಅಂಶಾವತಾರಿಯೂ ಆದ ಕೃಷ್ಣದ್ವೈಪಾಯನ ಮುನಿಯು ಮೂರು ನೇತ್ರಗಳುಳ್ಳ ಸರ್ವೇಶ್ವರ ದೇವನನ್ನು ಆರಾಧಿಸಿ ಸ್ತುತಿಸಿದನು.

ತತ್ಪ್ರಸಾದಾದಸೌ ವ್ಯಾಸಂ ವೇದಾನಾಮಕರೋತ್ಪ್ರಭುಃ ॥ ೧೧ ॥

ಅಥ ಶಿಷ್ಯಾನ್ ಸ ಜಗ್ರಾಹ ಚತುರೋ ವೇದಪಾರಗಾನ್ ।
ಜೈಮಿನಿಂ ಚ ಸುಮಂತುಂ ಚ ವೈಶಂಪಾಯನಮೇವ ಚ ॥ ೧೨ ॥

ಪೈಲಂ ತೇಷಾಂ ಚತುರ್ಥಂ ಚ ಪಂಚಮಂ ಮಾಂ ಮಹಾಮುನಿಃ ।
ಋಗ್ವೇದಪಾಠಕಂ ಪೈಲಂ ಜಗ್ರಾಹ ಸ ಮಹಾಮುನಿಃ ॥ ೧೩ ॥

ಯಜುರ್ವೇದಪ್ರವಕ್ತಾರಂ ವೈಶಂಪಾಯನಮೇವ ಚ ।
ಜೈಮಿನಿಂ ಸಾಮವೇದಸ್ಯ ಪಾಠಕಂ ಸೋಽನ್ವಪದ್ಯತ ॥ ೧೪ ॥

ತಥೈವಾಥರ್ವವೇದಸ್ಯ ಸುಮಂತುಮೃಷಿಸತ್ತಮಮ್ ।
ಇತಿಹಾಸಪುರಾಣಾನಿ ಪ್ರವಕ್ತುಂ ಮಾಮಯೋಜಯತ್ ॥ ೧೫ ॥

---

೧೧. ತರುವಾಯ ಮಹೇಶ್ವರನ ಅನುಗ್ರಹದಿಂದ ಕೃಷ್ಣದ್ವೈಪಾಯನ ಮುನಿಯು ವಿಶೇಷ ದಕ್ಷನಾಗಿ ವೇದಗಳ ವಿಭಜನೆಯನ್ನು ರಚಿಸಿದನು.

೧೨. ಅನಂತರದಲ್ಲಿ ವೇದವಿದ್ಯೆಯಲ್ಲಿ ಪಾರಂಗತರಾದ ನಾಲ್ಕು ಮಂದಿ ಶಿಷ್ಯರನ್ನು ಪರಿಗ್ರಹಿಸಿದನು. ಆ ಶಿಷ್ಯಜನರಲ್ಲಿ ಮೂರುಮಂದಿಯು ಜೈಮಿನಿ, ಸುಮಂತು ಮತ್ತು ವೈಶಂಪಾಯನ ಎಂಬುವರಾಗಿದ್ದರು.

೧೩. ಮಹಾಮಹರ್ಷಿಯಾದ ವ್ಯಾಸಮುನಿಯು ಪೈಲ ಎಂಬುವನನ್ನು ನಾಲ್ಕನೆಯ ಶಿಷ್ಯನನ್ನಾಗಿ ಮಾಡಿಕೊಂಡನು. ಆ ಮಹಾಮುನಿಯು ಪೈಲನನ್ನು ಋಗ್ವೇದಪಾಠಕ ಶಿಷ್ಯನನ್ನಾಗಿ ಮಾಡಿಕೊಂಡನು.

೧೪. ಯಜುರ್ವೇದ ಪ್ರವಚನದಲ್ಲಿ ವೈಶಂಪಾಯನ ಎಂಬ ಶಿಷ್ಯನನ್ನೂ, ಸಾಮವೇದ ಪ್ರವಚನದಲ್ಲಿ ಜೈಮಿನಿ ಎಂಬ ಶಿಷ್ಯನನ್ನೂ ಹೊಂದಿದನು.

೧೫. ಹಾಗೆ ಅಥರ್ವವೇದ ಪ್ರವಚನಕ್ಕೆ ಋಷಿಶ್ರೇಷ್ಠನಾದ ಸುಮಂತು ಮುನಿಯನ್ನು ಶಿಷ್ಯನನ್ನಾಗಿ ಹೊಂದಿದನು. ಇತಿಹಾಸ-ಪುರಾಣಗಳ ಪ್ರವಚನಕ್ಕೆ ನನ್ನನ್ನು ನಿಯಮಿಸಿದನು.

ಏಕ ಆಸೀದ್ಯಜುರ್ವೇದಸ್ತಂ ಚತುರ್ಧಾ ಪ್ರಕಲ್ಪಯತ್ ।
ಚತುರ್ಹೋತ್ರಮಭೂತ್ತಸ್ಮಿಂಸ್ತೇನ ಯಜ್ಞಮಥಾಕರೋತ್ ॥ ೧೬ ॥

ಆಧ್ವರ್ಯವಂ ಯಜುರ್ಭಿಃ ಸ್ಯಾದಗ್ನಿಹೋತ್ರಂ ದ್ವಿಜೋತ್ತಮಾಃ ।
ಔದ್ಗಾತ್ರಂ ಸಾಮಭಿಶ್ಚಕ್ರೇ ಬ್ರಹ್ಮತ್ವಂ ಚಾಪ್ಯಥರ್ವಭಿಃ ॥ ೧೭ ॥

ತತಃ ಸತ್ರೇ ಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।
ಯಜೂಂಷಿ ತು ಯಜುರ್ವೇದಂ ಸಾಮವೇದಂ ತು ಸಾಮಭಿಃ ॥ ೧೮ ॥

ಏಕವಿಂಶತಿಭೇದೇನ ಋಗ್ವೇದಂ ಕೃತವಾನ್ ಪುರಾ ।
ಶಾಖಾನಾಂ ತು ಶತೇನೈವ ಯಜುರ್ವೇದಮಥಾಕರೋತ್ ॥ ೧೯ ॥

---

೧೬. ಆದಿಯಲ್ಲಿ ಯಜುರ್ವೇದವು ಒಂದೇ ಇದ್ದಿತು. ಆ ವೇದವನ್ನು ನಾಲ್ಕಾಗಿ ವಿಭಾಗಿಸಿದನು. ಅದರಲ್ಲಿ ನಾಲ್ಕು ಋತ್ವಿಕ್ಕರ್ಮಗಳನ್ನು ಪ್ರತ್ಯೇಕವಾಗಿ ಬೋಧಿಸುವ ಚಾತುರ್ಹೋತ್ರ ಕ್ರಮವು ಸಿದ್ಧವಾಯಿತು. ಅದರಿಂದ ಯಜ್ಞಾನುಷ್ಠಾನ ತಂತ್ರವನ್ನು ಮಾಡಿದನು.

೧೭. ದ್ವಿಜಶ್ರೇಷ್ಠರೇ ! ಯಜುರ್ವೇದದಿಂದ ಅಧ್ವರ್ಯುಪ್ರಯೋಗವನ್ನೂ, ಋಗ್ವೇದದಿಂದ ಹೌತ್ರಪ್ರಯೋಗವನ್ನೂ ಸಾಮವೇದದಿಂದ ಉದ್ಗಾತೃಪ್ರಯೋಗವನ್ನೂ ಮತ್ತು ಅಥರ್ವವೇದದಿಂದ ಬ್ರಹ್ಮಪ್ರಯೋಗವನ್ನೂ ಬೋಧಿಸುವ ಕ್ರಮವನ್ನು ನಿರ್ಮಿಸಿದನು.

೧೮. ತರುವಾಯ ಸತ್ರಯಾಗ ನಿಮಿತ್ತವಾಗಿ ಋಗ್ವೇದ-ಯಜುರ್ವೇದ-ಸಾಮವೇದಗಳಿಂದ ಆಯಾಯ ಭಾಗಗಳನ್ನು ಪ್ರತ್ಯೇಕವಾಗಿ ಉದ್ಧರಿಸಿ ಋಙ್ಮಂತ್ರ-ಯಾಜುಷಮಂತ್ರ-ಸಾಮ ಮಂತ್ರಗಳನ್ನು ರಚಿಸಿದನು.

೧೯. ಮತ್ತು ಪೂರ್ವದಲ್ಲಿ ಋಗ್ವೇದವನ್ನು ಇಪ್ಪತ್ತೊಂದು ಶಾಖಾಭೇದಗಳಿರುವಂತೆಯೂ, ಯಜುರ್ವೇದವನ್ನು ಒಂದುನೂರು ಶಾಖಾಭೇದಗಳಿರುವಂತೆಯೂ ವಿಂಗಡಿಸಿದನು.

ಸಾಮವೇದಂ ಸಹಸ್ರೇಣ ಶಾಖಾನಾಂ ಪ್ರಬಿಭೇದ ಸಃ ।
ಅಥರ್ವಾಣಮಥೋ ವೇದಂ ಬಿಭೇದ ಕುಶಕೇತನಃ ॥ ೨೦ ॥

ಭೇದೈರಷ್ಟಾದಶೈರ್ವ್ಯಾಸಃ ಪುರಾಣಂ ಕೃತವಾನ್ ಪ್ರಭುಃ ।
ಸೋಽಯಮೇಕಶ್ಚತುಷ್ಪಾದೋ ವೇದಃ ಪೂರ್ವಂ ಪುರಾತನಃ ॥ ೨೧ ॥

ಓಂಕಾರೋ ಬ್ರಹ್ಮಣೋ ಜಾತಃ ಸರ್ವದೋಷವಿಶೋಧನಃ ।
ವೇದವಿದ್ಯೋಽಥ ಭಗವಾನ್ ವಾಸುದೇವಃ ಸನಾತನಃ ॥ ೨೨ ॥

ಸ ಗೀಯತೇ ಪರೋ ವೇದೈರ್ಯೋ ವೇದೈನಂ ಸ ವೇದವಿತ್ ।
ಏತತ್ಪರತರಂ ಬ್ರಹ್ಮ ಜ್ಯೋತಿರಾನಂದಮುತ್ತಮಮ್ ॥ ೨೩ ॥

---

೨೦. ಹಾಗು ವ್ಯಾಸಮುನಿಯು ಸಾಮವೇದವನ್ನು ಸಹಸ್ರ ಶಾಖೆಗಳನ್ನಾಗಿ ವಿಭಜಿಸಿದನು, ಮತ್ತು ಅಥರ್ವ ವೇದವನ್ನು ಒಂಭತ್ತು ಶಾಖೆಗಳನ್ನಾಗಿ ವಿಭಾಗ ಮಾಡಿದನು.

೨೧. ಸರ್ವಸಮರ್ಥನಾದ ಕೃಷ್ಣದ್ವೈಪಾಯನ ಮುನಿಯು ಹದಿನೆಂಟು ಭಾಗಗಳಿಂದ ಪುರಾಣಗಳನ್ನು ರಚಿಸಿದನು. ಪೂರ್ವದಲ್ಲಿ ನಾಲ್ಕು ಪಾದಗಳಿಂದ ಕೂಡಿದ ವೇದವು ಪುರಾತನರೂಪದಿಂದ ಒಂದೇ ಆಗಿದ್ದಿತು.

೨೨. ಸಮಸ್ತ ದೋಷಗಳನ್ನು ಶೋಧಿಸುವ ಓಂಕಾರವು ಬ್ರಹ್ಮನಿಂದ ಜನಿಸಿರುವುದು. ಇಂತಹ ಸಮಸ್ತ ವೇದಗಳಿಂದ ಪುರಾಣಪುರುಷನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ವಾಸುದೇವನು ವೇದ್ಯನಾಗಿರುವನು.

೨೩. ಸರ್ವೋತ್ತಮನಾದ ವಾಸುದೇವಮೂರ್ತಿಯು ವೇದಗಳಿಂದ ಸ್ತುತಿಸಲ್ಪಡುತ್ತಾನೆ. ಇಂತಹ ವಾಸುದೇವಾತ್ಮನನ್ನು ತಿಳಿದ ಮಾನವನು ವೇದಜ್ಞನೆನಿಸುವನು. ಜ್ಯೋತಿರೂಪವೂ, ಆನಂದಾತ್ಮಕವೂ, ಉತ್ತಮವೂ ಆದ ಪರಬ್ರಹ್ಮತತ್ವವೆಂದರೆ ವಾಸುದೇವನೇ ಆಗಿರುವನು.

ವೇದವಾಕ್ಯೋದಿತಂ ತತ್ತ್ವಂ ವಾಸುದೇವಃ ಪರಂ ಪದಮ್ ।
ವೇದವಿದ್ಯಮಿಮಂ ವೇತ್ತಿ ವೇದಂ ವೇದಪರೋ ಮುನಿಃ ॥ ೨೪ ॥

ಅವೇದಂ ಪರಮಂ ವೇತ್ತಿ ವೇದನಿಶ್ವಾಸಕೃತ್ಪರಃ ।
ಸ ವೇದವೇದ್ಯೋ ಭಗವಾನ್ ವೇದಮೂರ್ತಿರ್ಮಹೇಶ್ವರಃ ॥ ೨೫ ॥

ಸ ಏವ ವೇದೋ ವೇದ್ಯಶ್ಚ ತಮೇವಾಶ್ರಿತ್ಯ ಮುಚ್ಯತೇ ।
ಇತ್ಯೇತದಕ್ಷರಂ ವೇದಮೋಂಕಾರಂ ವೇದಮವ್ಯಯಮ್ ।
ಅವೇದಂ ಚ ವಿಜಾನಾತಿ ಪಾರಾಶರ್ಯೋ ಮಹಾಮುನಿಃ ॥ ೨೬ ॥

ಇತಿ ಶ್ರೀ ಕೂರ್ಮಪುರಾಣೇ ದ್ವಿಪಂಚಾಶತ್ತಮೋಽಧ್ಯಾಯಃ.

---

೨೪. ಪರಮಪದಸ್ವರೂಪನಾದ ವಾಸುದೇವನು ವೇದವಾಕ್ಯಗಳಿಂದ ಬೋಧಿಸಲ್ಪಡುವ ಪರಮತತ್ತ್ವವು, ವೇದಾಭ್ಯಾಸಪರನಾದ ಮುನಿಯು ವಾಸುದೇವನನ್ನು ವೇದಾತ್ಮಕನೆಂದೂ, ವೇದಗಳಿಂದ ವೇದ್ಯನೆಂದೂ ತಿಳಿಯುವನು.

೨೫. ಮತ್ತು ವೇದವ್ಯತಿರಿಕ್ತವಾದ ಇತಿಹಾಸಾದಿ ಗಮ್ಯನಾದ ಪರಮಾತ್ಮನನ್ನು ತಿಳಿಯುವನು. ಪರಮಾತ್ಮನು ನಿಶ್ವಾಸರೂಪವಾಗಿ ವೇದಗಳನ್ನು ಸೃಷ್ಟಿ ಮಾಡಿರುವನು. ವೇದಮೂರ್ತಿಯೂ, ಮಹೇಶ್ವರನೂ, ಭಗವಂತನೂ ಆದ ವಾಸುದೇವನು ಅಂತಹ ವೇದಗಳಿಂದ ಗಮ್ಯನಾಗಿರುವನು.

೨೬. ವಾಸ್ತವಿಕವಾಗಿ ವೇದಸ್ವರೂಪನೂ, ವೇದಗಳಿಂದ ವೇದ್ಯನೂ ಆ ಪರಮಾತ್ಮನೇ ಆಗಿರುವನು. ಅವನನ್ನು ಆಶ್ರಯಿಸಿದ ಮಾನವನು ಮುಕ್ತಿ ಹೊಂದುವನು. ಹೀಗೆ ಪರಾಶರ ಪುತ್ರನಾದ ವೇದವ್ಯಾಸ ಮುನಿಯು ಅಕ್ಷರಾತ್ಮಕವೂ, ವೇದಮೂಲವೂ ಆದ ಓಂಕಾರವನ್ನೂ ನಿತ್ಯವಾದ ವೇದ ವಿದ್ಯೆಯನ್ನೂ ವೇದವ್ಯತಿರಿಕ್ತವಾದ ಪುರಾಣಾದಿ ವಾಙ್ಮಯವನ್ನೂ ತಿಳಿದ ಸರ್ವಜ್ಞನಾಗಿರುವನು.

( ಕೂರ್ಮ ಪುರಾಣದಲ್ಲಿ ಐವತ್ತೆರಡನೆಯ ಅಧ್ಯಾಯವು ಸಮಾಪ್ತವು. )

---

# ಕೂರ್ಮ ಪುರಾಣಂ

## ತ್ರಿಪಂಚಾಶತ್ತಮೋಽಧ್ಯಾಯಃ.

ಸೂತ ಉವಾಚ:—

ವೇದವ್ಯಾಸಾವತಾರಾಣಿ ದ್ವಾಪರೇ ಕಥಿತಾನಿ ತು ।
ಮಹಾದೇವಾವತಾರಾಣಿ ಕಲೌ ಶೃಣುತ ಸುವ್ರತಾಃ ॥ ೧ ॥

ಆದ್ಯೇ ಕಲಿಯುಗೇ ಶ್ವೇತೋ ದೇವದೇವೋ ಮಹಾದ್ಯುತಿಃ ।
ನಾಮ್ನಾ ಹಿತಾಯ ವಿಪ್ರಾಣಾಮಭೂದ್ವೈವಸ್ವತೇಽಂತರೇ ॥ ೨ ॥

---

## ಐವತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೀಗೆಂದು ಹೇಳಿದನು —ಉತ್ತಮವಾದ ವ್ರತಾನುಷ್ಠಾನಪರರಾದ ಮಹರ್ಷಿಗಳೇ ! ದ್ವಾಪರಯುಗದಲ್ಲಿ ನಡೆದ ವೇದವ್ಯಾಸ ಮುನಿಯ ಅವತಾರಗಳು ನನ್ನಿಂದ ಹೇಳಲ್ಪಟ್ಟಿವೆ. ಮುಂದೆ ಕಲಿಯುಗದಲ್ಲಿ ಆಗಿರುವ ಈಶ್ವರನ ಅವತಾರಗಳನ್ನು ಶ್ರವಣಮಾಡಿರಿ.

೨. ಮೊದಲನೆಯ ಕಲಿಯುಗದಲ್ಲಿ ವೈವಸ್ವತ ಮನ್ವಂತರದಲ್ಲಿ ವಿಪ್ರರ ಹಿತಕ್ಕೋಸ್ಕರ ಮಹಾಕಾಂತಿಯುಳ್ಳವನೂ, ದೇವೋತ್ತಮನೂ ಆದ ಶಿವನು ಶ್ವೇತ ದೇವ ಎಂಬ ಹೆಸರಿನಿಂದ ಅವತರಿಸಿರುವನು.

ಹಿಮವಚ್ಛಿಖರೇ ರಮ್ಯೇ ಸಕಲೇ ಪರ್ವತೋತ್ತಮೇ ।
ತಸ್ಯ ಶಿಷ್ಯಾಃ ಪ್ರಶಿಷ್ಯಾಶ್ಚ ಬಭೂವುರಮಿತಪ್ರಭಾಃ ॥ ೩ ॥

ಶ್ವೇತಃ ಶ್ವೇತಶಿಖಶ್ಚೈವ ಶ್ವೇತಾಸ್ಯಃ ಶ್ವೇತಲೋಹಿತಃ ।
ಚತ್ವಾರಸ್ತೇ ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ॥ ೪ ॥

ಸುತಾರೋ ಮದನಶ್ಚೈವ ಸುಹೋತ್ರಃ ಕಂಕಣಸ್ತಥಾ ।
ಲೋಕಾಕ್ಷಿಸ್ತ್ವಥ ಯೋಗೀಂದ್ರೋ ಜೇಗೀಷವ್ಯೋಽಥ ಸಪ್ತಮೇ॥ ೫ ॥

ಅಷ್ಟಮೇ ದಧಿವಾಹಃ ಸ್ಯಾನ್ನವಮೇ ಋಷಭಃ ಪ್ರಭುಃ ।
ಭೃಗುಸ್ತು ದಶಮೋ ಪ್ರೋಕ್ತಸ್ತಸ್ಮಾದುಗ್ರಃ ಪುರಃ ಸ್ಮೃತಃ ॥ ೬ ॥

ದ್ವಾದಶೇಽತಿಸಮಾಖ್ಯಾತೋ ಬಾಲೀ ವಾಥ ತ್ರಯೋದಶೇ ।
ಚತುರ್ದಶೇ ಗೌತಮಸ್ತು ವೇದದರ್ಶೀ ತತಃ ಪರಃ ॥ ೭ ॥

---

೩. ಆ ದೇವನಿಗೆ ಪರ್ವತೋತ್ತಮವಾದ ಹಿಮಾಚಲದ ರಮ್ಯವಾದ ಸಮಗ್ರ ಶಿಖರದಲ್ಲಿ ಅಪಾರ ಪ್ರಭಾವಶಾಲಿಗಳಾದ ಅನೇಕ ಮಂದಿ ಶಿಷ್ಯ-ಪ್ರಶಿಷ್ಯರು ಸೇರಿದರು.

೪. ಅವರಲ್ಲಿ ಶ್ವೇತ, ಶ್ವೇತಶಿಖ, ಶ್ವೇತಾಸ್ಯ ಮತ್ತು ಶ್ವೇತಲೋಹಿತ ಎಂಬ ಮಹಾತ್ಮರೂ, ವೇದಪಾರಂಗತರೂ ಆದ ನಾಲ್ಕು ಮಂದಿ ಬ್ರಾಹ್ಮಣರು ಶಿಷ್ಯರಾಗಿದ್ದರು.

೫. ತರುವಾಯ ಸುತಾರ, ಮದನ, ಸುಹೋತ್ರ, ಕಂಕಣ, ಲೋಕಾಕ್ಷಿ, ಯೋಗೀಂದ್ರ ಎಂಬುವರು ಪ್ರತಿಯೊಂದು ಕಲಿಯುಗದಲ್ಲಿ ಕ್ರಮವಾಗಿ ಶಿಷ್ಯರಾಗುತ್ತ ಬಂದು ಏಳನೆಯ ಯುಗದಲ್ಲಿ ಜೇಗೀಷವ್ಯ ಮುನಿಯು ಶಿಷ್ಯನಾದನು.

೬. ಹಾಗೂ ಎಂಟನೆಯ ಯುಗದಲ್ಲಿ ದಧಿವಾಹನನೂ, ಒಂಭತ್ತನೆಯ ಯುಗದಲ್ಲಿ ಸರ್ವಶಕ್ತನಾದ ಋಷಭ ಮುನಿಯೂ, ದಶಮಯುಗದಲ್ಲಿ ಭೃಗು ಮುನಿಯೂ, ಹನ್ನೊಂದನೆಯ ಯುಗದಲ್ಲಿ ಉಗ್ರಮುನಿಯೂ ಶಿಷ್ಯರಾಗಿದ್ದರೆಂದು ಸ್ಮರಿಸಲ್ಪಟ್ಟಿರುವರು.

೭. ಹಾಗೆ ಅತಿಸಮಾಖ್ಯಾತ ಮುನಿಯು ದ್ವಾದಶ ಯುಗದಲ್ಲಿಯೂ, ಬಾಲಿಯು ತ್ರಯೋದಶ ಯುಗದಲ್ಲಿಯೂ, ಗೌತಮ ಮುನಿಯು ಹದಿನಾಲ್ಕನೆಯ ಯುಗದಲ್ಲಿಯೂ, ವೇದದರ್ಶಿ ಮುನಿಯು ಪಂಚದಶಯುಗದಲ್ಲಿಯೂ ಶಿಷ್ಯರಾಗಿದ್ದರು.

ಗೋಕರ್ಣಶ್ಚಾ ಭವತ್ತಸ್ಮಾದ್ಗುಹಾವಾಸಃ ಶಿಖಂಡಧೃಕ್ ।
ಯಜಮಾಲ್ಯಟ್ಟಹಾಸಶ್ಚ ದಾರುಕೋ ಲಾಂಗಲೀ ತಥಾ ॥ ೮ ॥

ಮಹಾಯಾಮೋ ಮುನಿಃ ಶೂಲೀ ಡಿಂಡಮುಂಡೀಶ್ವರಃ ಸ್ವಯಮ್ ।
ಸಹಿಷ್ಣುಃ ಸೋಮಶರ್ಮಾ ಚ ನಕುಲೀಶ್ವರ ಏವ ಚ ॥ ೯ ॥

ವೈವಸ್ವತೇಽಂತರೇ ಶಂಭೋರವತಾರಾಸ್ತ್ರಿಶೂಲಿನಃ ।
ಅಷ್ಟಾವಿಂಶತಿರಾಖ್ಯಾತಾ ಹ್ಯಂತೇ ಕಲಿಯುಗೇ ಪ್ರಭೋಃ ॥ ೧೦ ॥

ಪ್ರಸನ್ನಮನಸೋ ದಾಂತಾ ಐಶ್ವರೀಂ ಭಕ್ತಿಮಾಸ್ಥಿತಾಃ ।
ಕ್ರಮೇಣ ತಾನ್ ಪ್ರವಕ್ಷ್ಯಾಮಿ ಯೋಗಿನೋ ಯೋಗವಿತ್ತಮಾನ್ ॥

---

೮. ಮುಂದೆ ಗೋಕರ್ಣ, ಗುಹಾವಾಸ, ಶಿಖಂಡಧೃಕ್, ಯಜಮಾಲೀ, ಅಟ್ಟಹಾಸ, ದಾರುಕ, ಲಾಂಗಲಿ ಎಂಬುವರು ಮಹಾದೇವನ ಶಿಷ್ಯರಾಗಿದ್ದರು.

೯. ಮತ್ತು ಮಹಾಯಾಮ, ಮುನಿ, ಶೂಲಿ, ಡಿಂಡ, ಮುಂಡೀಶ್ವರ, ಸಹಿಷ್ಣು, ಸೋಮಶರ್ಮ ಮತ್ತು ನಕುಲೀಶ್ವರ ಎಂಬುವರು ಕಲಿಯುಗದಲ್ಲಿ ನಡೆದ ಮಹಾದೇವನ ಅವತಾರಪುರುಷನಿಗೆ ಶಿಷ್ಯರಾಗಿದ್ದರು.

೧೦. ಅವರಲ್ಲಿ ಮಹಾ ತಪಸ್ವಿಗಳಾದ ನಾಲ್ಕು ಮಂದಿಯೂ ದೇವಾಧಿದೇವನಾದ ಮಹಾದೇವನಿಗೆ ಸಾಕ್ಷಾತ್ತಾಗಿ ಶಿಷ್ಯರಾಗಿದ್ದರು. ಮಿಕ್ಕ ಮುನಿಶ್ರೇಷ್ಠರು ಪ್ರತ್ಯೇಕವಾಗಿ ಇತರರಿಗೆ ಶಿಷ್ಯರಾಗಿದ್ದರು.

೧೧. ಆ ಮಹಾದೇವಶಿಷ್ಯರು ಪ್ರಸನ್ನವಾದ ಮಾನಸವುಳ್ಳವರೂ, ಜಿತೇಂದ್ರಿಯರೂ, ಈಶ್ವರಭಕ್ತಿಯಲ್ಲಿ ತತ್ಪರರೂ ಆಗಿದ್ದರು. ಯೋಗಜ್ಞರಲ್ಲಿ ಶ್ರೇಷ್ಠರಾದ ಆ ಯೋಗಿಗಳನ್ನು ಕ್ರಮವಾಗಿ ಹೇಳುವೆನು.

ದುಂದುಭಿಃ ಶತರೂಪಶ್ಚ ಋಚೀಕಃ ಕೇತುಮಾಂಸ್ತಥಾ ।
ವಿಶೋಕಶ್ಚ ವಿಕೇಶಶ್ಚ ವಿಶಾಖಃ ಶಾಪನಾಶನಃ ॥ ೧೨ ॥

ಸುಮುಖೋ ದುರ್ಮುಖಶ್ಚೈವ ದುರ್ದಮೋ ದುರತಿಕ್ರಮಃ ।
ಸನಕಃ ಸನಾತನಶ್ಚೈವ ತಥೈವ ಚ ಸನಂದನಃ ॥ ೧೩ ॥

ದಾಲಭ್ಯಶ್ಚ ಮಹಾಯೋಗೀ ಧರ್ಮಾತ್ಮಾನೋ ಮಹೌಜಸಃ ।
ಸುಧಾಮಾ ವಿರಜಾಶ್ಚೈವ ಶಂಖಪಾಣ್ಯಜ ಏವ ಚ ॥ ೧೪ ॥

ಸಾರಸ್ವತಸ್ತಥಾ ಮೇಘೋ ಘನವಾಹಃ ಸುವಾಹನಃ ।
ಕಪಿಲಶ್ಚಾಸುರಿಶ್ಚೈವ ವೋಢುಃ ಪಂಚಶಿಖೋ ಮುನಿಃ ॥ ೧೫ ॥

---

೧೨. ದುಂದುಭಿ, ಶತರೂಪ, ಋಚೀಕ, ಕೇತುಮಾ, ವಿಶೋಕ, ವಿಕೇಶ, ವಿಶಾಖ ಮತ್ತು ಶಾಪನಾಶನ ಎಂಬ ನಾಮಾಂಕಿತರು ಯೋಗಿಗಳಾದ ಈಶ್ವರ ಶಿಷ್ಯರಾಗಿದ್ದರು.

೧೩. ಸುಮುಖ, ದುರ್ಮುಖ, ದುರ್ದಮ, ದುರತಿಕ್ರಮ, ಸನಕ, ಸನಾತನ ಸನಂದನ ಎಂಬ ಪವಿತ್ರ ನಾಮಾಂಕಿತರಾದ ಮಹರ್ಷಿಗಳು ಮಹಾದೇವನ ಪ್ರಧಾನ ಶಿಷ್ಯವರ್ಗಕ್ಕೆ ಸೇರಿರುವರು.

೧೪. ದಾಲಭ್ಯ, ಮಹಾಯೋಗಿ, ಸುಧಾಮ, ವಿರಜ, ಶಂಖಪಾಣಿ ಮತ್ತು ಅಜ ಎಂಬ ನಾಮಾಂಕಿತರೂ, ಧರ್ಮಾತ್ಮರೂ, ಮಹಾ ಪ್ರಭಾವಶಾಲಿಗಳೂ ಆದ ವ್ಯಕ್ತಿಗಳು ಶಿಷ್ಯರಾಗಿದ್ದರು.

೧೫. ಮತ್ತು ಸಾರಸ್ವತ, ಮೇಘ, ಘನವಾಹ, ಸುವಾಹನ, ಕಪಿಲ, ಆಸುರಿ, ವೋಢು, ಪಂಚಶಿಖಮುನಿ ಎಂಬುವರು ಮತ್ತೆ ಕೆಲವರು ಮಹಾದೇವನ ಮುಖ್ಯ ಶಿಷ್ಯ ಸಮಾಜವನ್ನು ಹೊಂದಿದರು.

ಪರಾಶರಶ್ಚ ಗರ್ಗಶ್ಚ ಭಾರ್ಗವಶ್ಚಾಂಗಿರಾಸ್ತಥಾ ।
ಚಲಬಂಧುರ್ನಿರಾಮಿತ್ರಃ ಕೇತುಶೃಂಗಸ್ತಪೋಧನಾಃ ॥ ೧೬ ॥

ಲಂಬೋದರಶ್ಚ ಲಂಬಶ್ಚ ವಿಕ್ರೋಶೋ ಲಂಬಕಃ ಶುಕಃ ।
ಸರ್ವಜ್ಞಃ ಸಮಬುದ್ಧಿಶ್ಚ ಸಾಧ್ಯಾಸಾಧ್ಯಸ್ತಥೈವ ಚ ॥ ೧೭ ॥

ಸುಧಾಮಾ ಕಾಶ್ಯಪಶ್ಚಾಥ ವಸಿಷ್ಠೋ ವರಿಜಾಸ್ತಥಾ ।
ಅತ್ರಿರುಗ್ರಸ್ತಥಾ ಚೈವ ಶ್ರವಣೋಽಥ ಸುವೈದ್ಯಕಃ ॥ ೧೮ ॥

ಕುಣಿಶ್ಚ ಕುಣಿಬಾಹುಶ್ಚ ಕುಶರೀರಃ ಕುನೇತ್ರಕಃ ।
ಕಶ್ಯಪೋ ಹ್ಯುಶನಾಶ್ಚೈವ ಚ್ಯವನೋಽಥ ಬೃಹಸ್ಪತಿಃ ॥ ೧೯ ॥

---

೧೬. ಪರಾಶರ, ಗರ್ಗ, ಭಾರ್ಗವ, ಅಂಗಿರ, ಚಲಬಂಧು, ನಿರಾಮಿತ್ರ, ಕೇತುಶೃಂಗ, ಮುಂತಾದ ತಪಶ್ಚರ್ಯೆಯೇ ಧನವಾಗಿಉಳ್ಳ ಋುನಿಗಳು ಶಿವನಲ್ಲಿ ಪ್ರಧಾನ ಶಿಷ್ಯತ್ವವನ್ನು ಹೊಂದಿದ್ದರು.

೧೭. ಲಂಬೋದರ, ಲಂಬ, ವಿಕ್ರೋಶ, ಲಂಬಕ, ಶುಕ, ಸರ್ವಜ್ಞ, ಸಮ, ಬುದ್ಧಿ ಮತ್ತು ಸಾಧ್ಯಾಸಾಧ್ಯ ಎಂಬ ಕೆಲವರು ಮಹಾತ್ಮರು ಶಿವನ ಶಿಷ್ಯತ್ವವನ್ನು ಅರ್ಜಿಸಿದರು.

೧೮. ಸುಧಾಮ, ಕಾಶ್ಯಪ, ವಸಿಷ್ಠ, ವರಿಜ, ಅತ್ರಿ, ಉಗ್ರ, ಶ್ರವಣ, ಮತ್ತು ಸುವೈದ್ಯಕ ಎಂಬ ನಾಮಾಂಕಿತರಾದ ಯೋಗಿಗಳು ಮಹಾದೇವನ ಶಿಷ್ಯರೆಂದು ಗಣ್ಯರಾಗಿದ್ದರು.

೧೯. ಕುಣಿ, ಕುಣಿಬಾಹು, ಕುಶರೀರ, ಕುನೇತ್ರಕ, ಕಶ್ಯಪ, ಉಶನ, ಚ್ಯವನ ಮತ್ತು ಬೃಹಸ್ಪತಿ ಎಂಬ ಯೋಗಿವರ್ಯರು ಮಹಾದೇವನ ಶಿಷ್ಯವರ್ಗದಲ್ಲಿ ಗಣ್ಯರಾಗಿದ್ದರು.

ಉಚ್ಚಾಸ್ಯೋ ವಾಮದೇವಶ್ಚ ಮಹಾಕಾಲೋ ಮಹಾನಿಲಿಃ ।
ವಾಚಶ್ರವಾಃ ಸುಕೇಶಶ್ಚ ಶ್ಯಾವಾಶ್ವಃ ಸುಪಥೀಶ್ವರಃ ॥ ೨೦ ॥

ಹಿರಣ್ಯನಾಭಃ ಕೌಶಿಲ್ಯೋಽಕಾಕ್ಷುಃ ಕುಥುಭಿದಸ್ತಥಾ ।
ಸುಮಂತ್ರವರ್ಚಸೋ ವಿದ್ವಾನ್ ಕಬಂಧಃ ಕುಶಿಕಂಧರಃ ॥ ೨೧ ॥

ಪ್ಲಕ್ಷೋ ದರ್ವಾಯಣಿಶ್ಚೈವ ಕೇತುಮಾನ್ ಗೌತಮಸ್ತಥಾ ।
ಭಲ್ಲಾಚೀ ಮಧುಪಿಂಗಶ್ಚ ಶ್ವೇತಕೇತುಸ್ತಪೋಧನಃ ॥ ೨೨ ॥

ಉಷಿಧಾ ಬೃಹದ್ರಕ್ಷಶ್ಚ ದೇವಲಃ ಕವಿರೇವ ಚ ।
ಶಾಲಹೋತ್ರಾಗ್ನಿವೇಶ್ಯಸ್ತು ಯುವನಾಶ್ವಃ ಶರದ್ವಸುಃ ॥ ೨೩ ॥

---

೨೦. ಉಚ್ಚಾಸ್ಯ, ವಾಮದೇವ, ಮಹಾಕಾಲ, ಮಹಾನಿಲಿ, ವಾಚಶ್ರವ, ಸುಕೇಶ, ಶ್ಯಾವಾಶ್ವ, ಮತ್ತು ಸುಪಥೀಶ್ವರ ಎಂಬ ಮಹಾತ್ಮರು ಶಿವನಲ್ಲಿ ಶಿಷ್ಯತ್ವವನ್ನು ಆಚರಿಸಿದರು.

೨೧. ಹಿರಣ್ಯನಾಭ, ಕೌಶಿಲ, ಅಕಾಕ್ಷು, ಕುಥುಭಿದ, ಸುಮಂತವರ್ಚಸ, ಕಬಂಧ ಮತ್ತು ಕುಶಿಕಂಧರ ಎಂಬ ಜ್ಞಾನಸಂಪನ್ನರಾದ ಯೋಗಿಗಳು ಶಿವನ ಶಿಷ್ಯಗಣವನ್ನು ಅಲಂಕರಿಸಿದರು.

೨೨. ಪ್ಲಕ್ಷ, ದರ್ವಾಯಣಿ, ಕೇತುಮಾನ್, ಗೌತಮ, ಭಲ್ಲಾಚಿ, ಮಧುಪಿಂಗ, ಶ್ವೇತಕೇತು ಎಂಬ ಜ್ಞಾನಸಂಪನ್ನರೂ ತಪೋಧನರೂ ಆದ ಯೋಗಿಗಳು ಶಿವನಲ್ಲಿ ಶಿಷ್ಯರಾಗಿದ್ದರು.

೨೩. ಉಷಿಧ, ಬೃಹದ್ರಕ್ಷ, ದೇವಲ, ಕವಿ, ಶಾಲಹೋತ್ರ, ಅಗ್ನಿವೇಶ್ಯ, ಯುವನಾಶ್ವ, ಶರದ್ವಸು ಎಂಬ ನಾಮಾಂಕಿತರಾದ ಮಹಾವ್ಯಕ್ತಿಗಳು ಮಹೇಶ್ವರನ ಮುಖ್ಯಶಿಷ್ಯರಾಗಿದ್ದರು.

ಭಗಲಃ ಕುಂಡಕರ್ಣಶ್ಚ ಕುಂತಶ್ಚೈವ ಪ್ರವಾಹಕಃ ।
ಉಲೂಕೋ ವಿದ್ಯುತಶ್ಚೈವ ಶಾದ್ರಕೋ ಹ್ಯಾಶ್ವಲಾಯನಃ ॥ ೨೪ ॥

ಅಕ್ಷಪಾದಃ ಕುಮಾರಶ್ಚ ಹ್ಯುಲೂಕೋ ವಸುವಾಹನಃ ।
ಕುಣಿಕಶ್ಚೈವ ಗರ್ಗಶ್ಚ ಮಿತ್ರಕೋ ರುರುರೇವ ಚ ॥ ೨೫ ॥

ಶಿಷ್ಯಾ ಏತೇ ಮಹಾತ್ಮಾನಃ ಸರ್ವಾವರ್ತೇಷು ಯೋಗಿನಾಮ್ ।
ವಿಮಲಾ ಬ್ರಹ್ಮಭೂಯಿಷ್ಠಾ ಜ್ಞಾನಯೋಗಪರಾಯಣಾಃ ॥ ೨೬ ॥

ಕುರ್ವಂತಿ ಚಾವತಾರಾಣಿ ಬ್ರಾಹ್ಮಣಾನಾಂ ಹಿತಾಯ ಚ ।
ಯೋಗೇಶ್ವರಾಣಾಮಾದೇಶಾದ್ವೇದಸಂಸ್ಥಾಪನಾಯ ವೈ ॥ ೨೭ ॥

---

೨೪. ಭಗಲ, ಕುಂಡಕರ್ಣ, ಕುಂತ, ಪ್ರವಾಹಕ, ಉಲೂಕ, ವಿದ್ಯುತ, ಶಾದ್ರಕ ಮತ್ತು ಆಶ್ವಲಾಯನ ಎಂಬ ನಾಮಾಂಕನಗಳಿಂದ ಪ್ರಸಿದ್ಧರಾದ ಮತ್ತೆ ಕೆಲವರು ಶಿವನ ಶಿಷ್ಯರಾಗಿದ್ದರು.

೨೫. ಅಕ್ಷಪಾದ, ಕುಮಾರ, ಉಲೂಕ, ವಸುವಾಹನ, ಕುಣಿಕ, ಗರ್ಗ, ಮಿತ್ರಕ ಮತ್ತು ರುರು ಎಂಬುವರು ಮಹಾತ್ಮರಾದ ಶೈವಯೋಗಿಗಳ ಶಿಷ್ಯರಾಗಿದ್ದರು.

೨೬. ಹೀಗೆ ಯೋಗಿಗಳಲ್ಲಿ ಮಹಾತ್ಮರಾದ ಅನೇಕರು ಎಲ್ಲ ಅವತಾರಗಳಲ್ಲಿ ನಿರ್ಮಲರೂ, ಬ್ರಹ್ಮತತ್ಪರರೂ, ಜ್ಞಾನಯೋಗದಲ್ಲಿ ನಿಷ್ಠಾವಂತರೂ ಆದ ಶಿಷ್ಯರಾಗಿದ್ದರು.

೨೭. ಹೀಗೆ ಅನೇಕ ಯೋಗಿಗಳು ಯೋಗೇಶ್ವರರ ಆದೇಶದಿಂದ ವೇದಗಳನ್ನು ಪ್ರತಿಷ್ಠೆಗೊಳಿಸುವುದಕ್ಕೂ, ವಿಪ್ರರಿಗೆ ಹಿತವನ್ನು ಆಚರಿಸುವುದಕ್ಕೂ, ಅನೇಕ ಅವತಾರವನ್ನು ಮಾಡುತ್ತಾರೆ.

ಯೇ ಬ್ರಾಹ್ಮಣಾಃ ಸಂಸ್ಮರಂತಿ ನಮಸ್ಯಂತಿ ಚ ಸರ್ವದಾ ।
ತರ್ಪಯಂತ್ಯರ್ಚಯಂತ್ಯೇತಾನ್ ಬ್ರಹ್ಮವಿದ್ಯಾಮವಾಪ್ನುಯುಃ॥ ೨೮ ॥

ಇದಂ ವೈವಸ್ವತಂ ಪ್ರೋಕ್ತಮಂತರಂ ವಿಸ್ತರೇಣ ತು ।
ಭವಿಷ್ಯತಿ ಚ ಸಾವರ್ಣೋ ದಕ್ಷಸಾವರ್ಣ ಏವ ಚ ॥ ೨೯ ॥

ದಶಮೋ ಬ್ರಹ್ಮಸಾವರ್ಣೋ ಧರ್ಮ ಏಕಾದಶಃ ಸ್ಮೃತಃ ।
ದ್ವಾದಶೋ ರುದ್ರಸಾವರ್ಣೋ ರೌಚ್ಯನಾಮಾ ತ್ರಯೋದಶಃ ॥ ೩೦ ॥

ಭೌತ್ಯಶ್ಚತುರ್ದಶಃ ಪ್ರೋಕ್ತೋ ಭವಿಷ್ಯಾ ಮನವಃ ಕ್ರಮಾತ್ ।
ಅಯಂ ವಃ ಕಥಿತೋ ಹ್ಯಂಶಃ ಪೂರ್ವೋ ನಾರಾಯಣೇರಿತಃ ॥ ೩೧ ॥

---

೨೮. ಯಾವ ವಿಪ್ರರು ಈ ಯೋಗೇಶ್ವರರನ್ನು ಯಾವಾಗಲೂ ನಮಸ್ಕಾರ, ಸ್ಮರಣ, ತರ್ಪಣ ಮತ್ತು ಅರ್ಚನಗಳಿಂದ ಸತ್ಕರಿಸುವರೋ ಅವರು ಬ್ರಹ್ಮವಿದ್ಯೆಯನ್ನು ಹೊಂದಿ ಕೃತಾರ್ಥರಾಗುವರು.

೨೯. ಹೀಗೆ ಈ ವೈವಸ್ವತವೆಂಬ ಮನ್ವಂತರವು ವಿಸ್ತಾರವಾಗಿ ನಮ್ಮಿಂದ ಹೇಳಲ್ಪಟ್ಟಿದೆ. ಮುಂದೆ ಸಾವರ್ಣಿ ಮತ್ತು ದಕ್ಷಸಾವರ್ಣಿ ಎಂಬುವರು ಮನ್ವಂತರಾಧಿಪತಿಗಳಾಗುವರು.

೩೦. ಹಾಗೂ ಹತ್ತನೆಯ ಮನುವು ಬ್ರಹ್ಮಸಾವರ್ಣನೂ, ಹನ್ನೊಂದನೆಯವನು ಧರ್ಮಪ್ರಜಾಪತಿಯೂ, ಹನ್ನೆರಡನೆಯ ಮನುವು ರುದ್ರಸಾವರ್ಣನೂ ಮತ್ತು ಹದಿಮೂರನೆಯ ಮನುವು ರೌಚ್ಯನಾಮಾಂಕಿತನೂ ಮುಂದೆ ಬರುವರೆಂದು ಸ್ಮರಿಸಲ್ಪಟ್ಟಿದೆ.

೩೧. ಭೌತ್ಯ ಎಂಬುವನು ಹದ್ನಾಲ್ಕನೆಯ ಮನುವೆಂದು ಹೇಳಲ್ಪಟ್ಟಿರುವನು. ಇವರು ಕ್ರಮವಾಗಿ ಮುಂದೆ ಬರುವ ಮನುರಾಜರಾಗಿರುವರು. ಪೂರ್ವದಲ್ಲಿ ನಾರಾಯಣನಿಂದ ಹೇಳಲ್ಪಟ್ಟ ಈ ಅಂಶವು ನನ್ನಿಂದ ನಿಮಗೆ ಹೇಳಲ್ಪಟ್ಟಿದೆ.

ಭೂತೈರ್ಭವ್ಯೈರ್ವರ್ತಮಾನೈರಾಖ್ಯಾನೈರುಪಬೃಂಹಿತಃ ।
ಯಃ ಪಠೇಚ್ಛೃಣುಯಾದ್ವಾಪಿ ಶ್ರಾವಯೇದ್ವಾ ದ್ವಿಜೋತ್ತಮಾನ್॥೩೨॥

ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ।
ಪಠೇದ್ದೇವಾಲಯೇ ಸ್ನಾತ್ವಾ ನದೀತೀರೇಷು ಚೈವ ಹಿ ॥ ೩೩ ॥

ನಾರಾಯಣಂ ನಮಸ್ಕೃತ್ಯ ಭಾವೇನ ಪುರುಷೋತ್ತಮಮ್ ।
ನಮೋ ದೇವಾಧಿದೇವಾಯ ದೇವಾನಾಂ ಪರಮಾತ್ಮನೇ ।
ಪುರುಷಾಯ ಪುರಾಣಾಯ ವಿಷ್ಣವೇ ಪ್ರಭವಿಷ್ಣವೇ ॥ ೩೪ ॥

ಇತಿ ಶ್ರೀ ಕೂರ್ಮಪುರಾಣೇ ತ್ರಿಪಂಚಾಶತ್ತಮೋಽಧ್ಯಾಯಃ.

---

೩೨. ಈ ಅಂಶವು ಭೂತ-ಭವಿಷ್ಯತ್ ಮತ್ತು ವರ್ತಮಾನಗಳೆಂಬ ಅನೇಕ ಆಖ್ಯಾನಗಳಿಂದ ಪೋಷಿಸಲ್ಪಟ್ಟಿದೆ. ಈ ಅಂಶವನ್ನು ಶ್ರವಣಮಾಡುವುದೂ, ಪಠಿಸುವುದೂ ಅಥವಾ ದ್ವಿಜೋತ್ತಮರಿಗೆ ಶ್ರವಣಮಾಡಿಸುವುದೂ ಶ್ರೇಯಸ್ಕರವು.

೩೩. ಮಾನವನು ಇದರ ಶ್ರವಣಾದಿಗಳಿಂದ ಸಮಸ್ತ ಪಾಪಗಳಿಂದ ನಿರ್ಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು. ಈ ಅಂಶವನ್ನು ಸ್ನಾನದಿಂದ ಪವಿತ್ರನಾಗಿ ನದೀತೀರ, ದೇವಾಲಯ ಮುಂತಾದ ಪುಣ್ಯಸ್ಥಳಗಳಲ್ಲಿ ಪಠಿಸಬೇಕು.

೩೪. ದೇವಾಧಿದೇವನೂ, ದೇವತೆಗಳ ಪರಮಾತ್ಮರೂಪನೂ, ಪುರಾಣ ಪುರುಷನೂ, ವ್ಯಾಪಕನೂ ಮತ್ತು ಸರ್ವ ಸಮರ್ಥನೂ ಆದ ಪುರುಷೋತ್ತಮನಿಗೆ ನಮಸ್ಕಾರವೆಂದು ಸರ್ವವಿಧವಾದ ಭಕ್ತಿಭಾವದಿಂದ ಪುರುಷೋತ್ತಮರೂಪವಾದ ನಾರಾಯಣನನ್ನು ನಮಸ್ಕರಿಸಿ ಈ ಅಂಶವನ್ನು ಪಠಿಸುವುದು ಶ್ರೇಯಸ್ಕರವು.

( ಕೂರ್ಮಪುರಾಣದಲ್ಲಿ ಐವತ್ತ ಮೂರನೆಯ ಅಧ್ಯಾಯವು ಮುಗಿದುದು. )

---

ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್,
ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು.